॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀಶಿವರಹಸ್ಯ

ಸಂಪುಟ ೧೪



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949

॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲಾ

(ಸಂ. ೩೨)

# ಶ್ರೀ ಶಿವರಹಸ್ಯ

ಸಂಪುಟ ೧೪



ಅನುವಾದಕ

ಆಸ್ಥಾನವಿದ್ವಾನ್ ಎಚ್. ಗಂಗಾಧರಶಾಸ್ತ್ರೀ

ಧರ್ಮಪ್ರಕಾಶ ಡಿ. ಬನುಮಯ್ಯನವರ ಹೈಸ್ಕೂಲು ಅಧ್ಯಾಪಕ

ಮೈಸೂರು

ಮೈಸೂರು

ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್

1949



# ಮುನ್ನುಡಿ

ಈ ಪ್ರತಿಯು ಶ್ರೀಶಿವರಹಸ್ಯದ ಆರನೆಯ ಅಂಶದ ಮೊದಲ ಇಪ್ಪತ್ತೈದು ಅಧ್ಯಾಯಗಳ ವಿಷಯವನ್ನು ಮಾತ್ರ ಪ್ರಕಾಶಪಡಿಸುವುದು. ಶಿವರಹಸ್ಯದ ಒಟ್ಟು ಹನ್ನೆರಡು ಅಂಶಗಳಲ್ಲಿ, ಕೇವಲ ಶಿವಭಕ್ತಿಮಯವಾದ ಇತಿಹಾಸಗಳು, ದೇವತಾರಾಧನೆಯ ಕ್ರಮಗಳು, ಶಿವಸ್ತೋತ್ರಗಳು ಇವೇ ಹೆಚ್ಚಾಗಿ ತೋರಿಬರುವ ವಿಷಯಗಳು. ಈ ಅಂಶದಲ್ಲಿ ಮಾತ್ರ ಉಪನಿಷತ್ಪ್ರತಿಪಾದ್ಯವಾದ ಅದ್ವೈತಸಿದ್ಧಾಂತದ ಒಳತತ್ತ್ವವು ಸ್ಪಷ್ಟವಾಗಿ ನಿರೂಪಿತವಾಗಿದೆ. ಉಪನಿಷತ್ತುಗಳು, ಬಹು ಪುತ್ರವತಿಯಾದ ಮಾತೆಯು ಎಲ್ಲ ಮಕ್ಕಳಿಗೂ ಆಹಾರಾದಿಗಳನ್ನು ಕಲ್ಪಿಸುತ್ತಾ ಪೋಷಿಸುವಂತೆ ಅನೇಕ ವೈದಿಕಮತಗಳನ್ನು ಬಹುಕಾಲದಿಂದ ರಕ್ಷಿಸುತ್ತ ಬಂದಿವೆ. ವೈದಿಕಮತಗಳೆಂದು ಪ್ರಸಿದ್ಧವಾಗಿರುವ ಸಕಲ ದರ್ಶನಗಳಿಗೂ, ದರ್ಶನಪ್ರವರ್ತಕರಾದ ಆಚಾರ್ಯರಿಗೂ ಉಪನಿಷತ್ತೇ ಮೂಲವಾಗಿದ್ದರೂ, ಅದರ ಅರ್ಥವನ್ನು ಅವರವರ ಪ್ರತಿಭೆಗೆ ತಕ್ಕಂತೆ ಎಳೆದು, ಸ್ವಮತವನ್ನೇ ಸಿದ್ಧಾಂತಗೊಳಿಸಿರುವರು. ಮತ್ತೆ ಕೆಲವರು ಪರಮತವನ್ನು ಖಂಡಿಸಿಯೂ ಇರುವರು. ಈ ಎಲ್ಲ ಮತಗಳಿಗೂ ಧ್ಯೇಯ ಒಂದಾದರೂ ಉಪಪಾದನಕ್ರಮ ಬೇರೆ ಬೇರೆಯಾಗಿದೆ. ಅದ್ವೈತ ಸಿದ್ಧಾಂತದಲ್ಲಿ ಜೀವ, ಬ್ರಹ್ಮ ಇವೆರಡೂ ಒಂದೇ ವಸ್ತು ಎಂಬ ಅಂಶವನ್ನು ಬೋಧಿಸುವುದು. ಅದ್ವೈತಿಗಳು ಹೇಳುವ ಪ್ರಕಾರ ಬ್ರಹ್ಮನು ನಿತ್ಯ ಶುದ್ಧ ಮುಕ್ತಸ್ವಭಾವವುಳ್ಳವನು. ನಿರ್ವಿಶೇಷಸ್ವಭಾವನು. ಅಂದರೆ ಯಾವವಿಧವಾದ ಭೇದವೂ ಧರ್ಮವೂ ಇಲ್ಲದವನು ಎಂದರ್ಥ. ಲೋಕಾನುಭವದಲ್ಲಿ ನಾನು ಮಾಡುವವನು, ನಾನು ತಿನ್ನುವವನು, ಸುಖದುಃಖಗಳುಳ್ಳವನು ನಾನು, ಮೊದಲಾದ ಅಹಂಕಾರ ಮಮಕಾರ ವ್ಯವಹಾರಗಳಿಂದ ಜೀವಾತ್ಮನು ಕರ್ತೃತ್ವ, ಭೋಕ್ತೃತ್ವ, ಸುಖಿತ್ವ, ದುಃಖಿತ್ವಾದಿ ಧರ್ಮಗಳುಳ್ಳವನೆಂದು ತಿಳಿದು ಬರುತ್ತದೆ. ಇಂತಹ ಜೀವನಿಗೂ, ಬ್ರಹ್ಮನಿಗೂ ತತ್ತ್ವಮಸ್ಯಾದಿ ಶ್ರುತಿಗಳು ಐಕ್ಯವನ್ನು ಬೋಧಿಸುವುವು. ಒಂದು ಚಂದ್ರನು ದೃಷ್ಟಿದೋಷದಿಂದ ಎರಡಾಗಿ ತೋರುವಂತೆ, ಬ್ರಹ್ಮನೆಂಬ ಒಂದೇ ವಸ್ತು ಅವಿದ್ಯೆಯೆಂಬ ದೋಷದಿಂದ ಜೀವ, ಬ್ರಹ್ಮ, ಎಂದು ಬೇರೆ ಬೇರೆಯಾಗಿ ತೋರುವುದು. ಹಾಗೆ ಬೇರೆಯೆಂದು ತಿಳಿಯಲ್ಪಟ್ಟ ಜೀವನು ದೇಹೇಂದ್ರಿಯಾಂತಃಕರಣಗಳೊಡನೆ ಬೆರೆತು, ತಾನೇ ದೇಹಾದಿವಿಶಿಷ್ಟನು ಎಂದು ಭ್ರಮಿಸಿ, ಅಹಂಕಾರಮಮಕಾರವುಳ್ಳವನಾಗಿ,

ಸಂಸಾರ ಸಮುದ್ರದಲ್ಲಿ ಬಿದ್ದು, ಹುಟ್ಟು, ಸಾವು, ಮುಪ್ಪು, ಮುಂತಾದ ದುಃಖಗಳನ್ನು ಅನುಭವಿಸುವನು. ಈ ಕರ್ತೃತ್ವಾದಿ ಯಾವ ಧರ್ಮಗಳೂ ಆತ್ಮನಲ್ಲಿಲ್ಲ; ಆದರೆ ಭ್ರಾಂತಿಯಿಂದ ಹಗ್ಗದಲ್ಲಿ ಹಾವಿನ ಭಾವ ತೋರುವಂತೆಯೂ, ಮುತ್ತಿನಚಿಪ್ಪು ಬೆಳ್ಳಿಯಂತೆ ಕಾಣುವಂತೆಯೂ ವಾಸ್ತವವಾಗಿ ಇಲ್ಲದ ಕರ್ತೃತ್ವ ಭೋಕ್ತೃತ್ವಾದಿಧರ್ಮಗಳು ಅಜ್ಞಾನದಿಂದ ಆತ್ಮನಲ್ಲಿ ತೋರಿಬರುತ್ತವೆ. ಹೀಗೆ ಇಲ್ಲದಿರುವ ಸ್ಥಳದಲ್ಲಿ ಇದ್ದಂತೆ ತೋರುವುದೇ ಆರೋಪ, ಅಥವಾ ಕಲ್ಪನೆ. ಇಂತಹ ಕಲ್ಪನೆಯು ಅನಾದಿಯಾಗಿ, ವಿಚಿತ್ರಶಕ್ತಿಯುಳ್ಳದ್ದಾಗಿರುವ ಅವಿದ್ಯೆ ಅಥವಾ ಅಜ್ಞಾನವೆಂಬ ಪರಬ್ರಹ್ಮನ ಶಕ್ತಿಯಿಂದಲೇ ಉಂಟಾಗುವುದು. ಈ ಶಕ್ತಿಗೆ ಸಿಕ್ಕಿದವರೆಲ್ಲರೂ, ದುಃಖಮಯವಾದ ಪ್ರಪಂಚವೆಂಬ ಸಂಸಾರಸಾಗರದಲ್ಲಿ ಬಿದ್ದು ಪರಿತಪಿಸುವರು. ಇದನ್ನು ಪರಿಹರಿಸಿಕೊಳ್ಳಬೇಕಾದರೆ ಮೂಲಕಾರಣವಾದ ಅಜ್ಞಾನವು ನಿವೃತ್ತಿಯಾಗಬೇಕು. ಹಾಗಾಗಬೇಕಾದರೆ ವಿದ್ಯೆಯೆಂಬ ಪರಿಶುದ್ಧ ಜ್ಞಾನವು ಸಿದ್ಧಿಸಬೇಕು. ಆ ಪರಿಶುದ್ಧ ಜ್ಞಾನವೇ, ನಿರ್ವಿಶೇಷ ಪರಬ್ರಹ್ಮಸಾಕ್ಷಾತ್ಕಾರ. ಇದು ತತ್ತ್ವಮಸ್ಯಾದಿ ಮಹಾ ವಾಕ್ಯಗಳ ಅರ್ಥಾನುಸಂಧಾನದಿಂದ ಸುಲಭವಾಗಿ ಜನಿಸುವುದು. ಇಂತಹ ಬ್ರಹ್ಮಸಾಕ್ಷಾತ್ಕಾರವುಳ್ಳವರೇ ಜೀವನ್ಮುಕ್ತರು. ಇವರು ಒಂದು ವೇಳೆ ಭಿಕ್ಷಾಟನಾದಿ ಕಾರ್ಯಗಳಿಗೆ ತೊಡಗಿ ದೇಹಧಾರಣೆ ಮಾಡಿಕೊಳ್ಳುತ್ತಿದ್ದರೂ, ಅವರ ಅಭಿಪ್ರಾಯದಲ್ಲಿ ಕರ್ತೃತ್ವ, ಭೋಕ್ತೃತ್ವಾದಿ ಧರ್ಮಗಳು ಆತ್ಮನಿಗೆ ಸಂಬಂಧಪಟ್ಟವುಗಳಲ್ಲ; ಅಂತಃಕರಣಕ್ಕೆ ಸೇರಿದವುಗಳೆಂದು ಜೀವನ್ಮುಕ್ತರಿಗೆ ನಿಶ್ಚಯವಿರುವುದರಿಂದ ಅವಿದ್ಯಾಲೇಶ ಸಂಬಂಧವೆಂಬ ಸಂಸ್ಕಾರ ಮಹಿಮೆಯಿಂದ ಭಿಕ್ಷಾಟನಾದಿ ವ್ಯಾಪಾರಗಳು ನಡೆದರೂ ಅದು ಅಭಿಮಾನ ಮೂಲಕವಲ್ಲ. ಅದರಿಂದ ಬಂಧನಾದಿಗಳು ಅವರಿಗೆ ನಡೆಯುವಂತಿಲ್ಲ. ಈ ವಿಷಯಗಳನ್ನೆಲ್ಲಾ ತಿಳಿಯಬೇಕಾದರೆ ಇಂತಹ ಗ್ರಂಥಗಳ ವ್ಯಾಸಂಗವು ಅತ್ಯಾವಶ್ಯಕ. ಶಾಸ್ತ್ರಗ್ರಂಥವ್ಯಾಸಂಗದಿಂದಲೇ ಪರಮಾತ್ಮಸ್ವರೂಪವನ್ನು ತಿಳಿಯಬೇಕೆಂದು ಕೆಲವು ಶಾಸ್ತ್ರಗಳು ಹೇಳುತ್ತವೆ. ಶಾಸ್ತ್ರಗಳಿಗೆಪರಮಾತ್ಮನು ಗೋಚರನೇ ಅಲ್ಲವೆಂದು ಅಲ್ಲಿಯೇ ಕೆಲವು ವಚನಗಳು ಹೇಳುವುವು. ಇದರ ತಾತ್ಪರ್ಯ ಇಷ್ಟು. ಅಂತಃಕರಣ ವ್ಯಾಪಾರಕ್ಕೆ ಆವರಣವಾಗಿರುವ ಅಜ್ಞಾನವು ಶಾಸ್ತ್ರಗ್ರಂಥಗಳ ಪ್ರಮಾಣಗಳಿಂದ ನಾಶವಾಗುವುದು. ಅಜ್ಞಾನವು ನಿವೃತ್ತಿಯಾದೊಡನೆಯೇ ಸ್ವಯಂಪ್ರಕಾಶವಾದ ಪರಮಾತ್ಮ ವಸ್ತುಜ್ಞಾನವು ಲಭಿಸುವುದು. ಸೂರ್ಯನನ್ನು ಮೋಡವು ಮುಚ್ಚಿರುವಂತೆ, ದೀಪದ ಮುಂದೆ ತೆರೆಯಿರುವಂತೆ ಪರಬ್ರಹ್ಮಸ್ಫುರಣಕ್ಕೆ ಅವಿದ್ಯಾದಿಗಳು ಆವರಣ ರೂಪದಿಂದಿರುವುವು. ಇದನ್ನು ಶಾಸ್ತ್ರ

ಗ್ರಂಥಗಳಿಂದ ತಿಳಿಯಬೇಕೇ ಹೊರತು ಶಾಸ್ತ್ರಗ್ರಂಥಗಳು ಪರಮಾತ್ಮನನ್ನು ತೋರಿಸಲಾರವು.

ಇಂತಹ ಅಗಾಧವಾದ ಮತ್ತು ಶ್ರೀಮಚ್ಛಂಕರಾಚಾರ್ಯರಿಂದ ಪ್ರಕಾಶಕ್ಕೆ ಬಂದ ಅದ್ವೈತ ಸಿದ್ಧಾಂತದ ವಿಷಯ ವಿವರಣೆಯು, ಈ ಅಂಶದಲ್ಲಿ ಪೂರ್ಣವಾಗಿ ವಿಸ್ತೃತವಾಗಿದೆ. ಶಾಸ್ತ್ರಪ್ರಕ್ರಿಯೆಯು ಅಷ್ಟು ವಿಸ್ತಾರವಾಗಿ ಇಲ್ಲಿ ತೋರಿಬರ ದಿದ್ದರೂ ಫಲಿತಾರ್ಥವು ಮಾತ್ರ ಒಂದಕ್ಕೆ ಹತ್ತರಷ್ಟು ಹೆಚ್ಚಾಗಿ ಮನೆ ಮಾತಿನಿಂದ ನಿರೂಪಿಸಲ್ಪಟ್ಟಿದೆ. ಪ್ರಪಂಚ ಸುಖವೇ ಶಾಶ್ವತವೆಂದು ತಿಳಿದವರಿಗೂ, ಐಹಿಕ ಸುಖದಿಂದಲೇ ಆನಂದ ಪಡೆಯಬೇಕೆಂದು ಭಾವಿಸುವವರಿಗೂ, ಪರಲೋಕವೇ ಇಲ್ಲವೆಂದು ವಾದಿಸುವವರಿಗೂ, ಇದು ಚಾವಟಿಯ ಏಟನಂತೆ ಎಚ್ಚರಿಕೆಯಿತ್ತು, ಅವರ ಅಜ್ಞಾನವನ್ನು ನಿವಾರಿಸಲು ಸಮರ್ಥವಾಗುವುದು. ಅನೇಕ ಕಡೆಗಳಲ್ಲಿ ಪುನರುಕ್ತಿ ಇದ್ದಂತೆ ತೋರಿಬಂದರೂ, ಉಪದೇಶಸರಣಿಯಲ್ಲಿ, ಅದರಲ್ಲಿಯೂ, ಮಂದಮತಿಗಳಿಗೆ ಹೇಳುವ ಧಾಟಿಯಲ್ಲಿ ಅದು ಪುನರುಕ್ತಿ ಎನಿಸಲಾರದು.

ಹೀಗೆ ವೇದಾಂತರಹಸ್ಯಗಳನ್ನು ಸುಲಭಶೈಲಿಯಲ್ಲಿ ಎಲ್ಲಾ ವರ್ಗದ ಜನರಿಗೂ ತಿಳಿಯುವಂತೆ ಬೋಧಿಸಬಲ್ಲ ಗ್ರಂಥರತ್ನಗಳನ್ನು ರಾಜಮಾರ್ಗದಲ್ಲಿಟ್ಟು ಅದರ ಕಾಂತಿಯು ಸರ್ವತ್ರ ಹರಡುವಂತೆ ಮಾಡಿ ತನ್ಮೂಲಕ ಪ್ರಜಾರಂಜನೆ ಮಾಡುತ್ತಲಿರುವ ನಮ್ಮನ್ನಾಳುವ ಶ್ರೀಮನ್ಮಹಾರಾಜರಾದ **ಶ್ರೀ ಜಯಚಾಮ ರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಪ್ರಭುಗಳವರಿಗೂ ಅವರ ಕುಟುಂಬ ವರ್ಗಕ್ಕೂ ಪರಮೇಶ್ವರನು ಇತೋಪ್ಯತಿ ಶಯವಾದ ಶ್ರೇಯಸ್ಸನ್ನು ಕರುಣಿಸಿ ರಕ್ಷಿಸಲಿ ಎಂದು ಭಗವಂತನಾದ ಸರ್ವೇ ಶ್ವರನನ್ನು ಪ್ರಾರ್ಥಿಸುತ್ತೇನೆ.

ಶ್ರೀ ಸರ್ವಧಾರಿ ಸಂವತ್ಸರದ
ಮಾಘ ಕೃಷ್ಣ ಪಂಚಮೀ
ಗುರುವಾರ
17—2—1949.

ಸಜ್ಜನವಿಧೇಯ,
**ಹೊನ್ನೇನಹಳ್ಳಿ ಗಂಗಾಧರಶಾಸ್ತ್ರೀ**
ಆಸ್ಥಾನವಿದ್ವಾನ್, ಮೈಸೂರು.

# ಶ್ರೀಶಿವರಹಸ್ಯದಲ್ಲಿ ಶಂಕರನಾಮಕ ಆರನೆಯ ಅಂಶದ ವಿಷಯಾನುಕ್ರಮಣಿಕಾ

ಅಧ್ಯಾಯಗಳು ೧—೨೫

### ಹತ್ತೊಂಬತ್ತನೆಯ ಅಧ್ಯಾಯ



### ಇಪ್ಪತ್ತನೆಯ ಅಧ್ಯಾಯ



### ಇಪ್ಪತ್ತೊಂದನೆಯ ಅಧ್ಯಾಯ



### ಇಪ್ಪತ್ತೆರಡನೆಯ ಅಧ್ಯಾಯ



### ಇಪ್ಪತ್ತುಮೂರನೆಯ ಅಧ್ಯಾಯ



### ಇಪ್ಪತ್ತುನಾಲ್ಕನೆಯ ಅಧ್ಯಾಯ



### ಇಪ್ಪತ್ತೈದನೆಯ ಅಧ್ಯಾಯ





॥ ಶ್ರೀಃ ॥
॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪ್ರಥಮೋಽಧ್ಯಾಯಃ

ಹೇಮಾದ್ರಿಂ ಕಿಲ ಮಾತುಲಿಂಗಫಲಮಿತ್ಯಾದಾಯ ಮೋದಾಧಿಕೋ
ಮೌಢ್ಯಾನ್ನಾಕನಿವಾಸಿನಾಂ ಭಯಪರೈರ್ವಾಕ್ಯೈರಿವ ಪ್ರಾರ್ಥಿತಃ ।
ನೀಲೀಶಂಬರನೀಲಮಂಬರತಲಂ ಜಂಬೂಫಲಂ ಭಾವಯನ್
ತಂ ಮುಂಚರ್ನ್ಗಿರಿಮಂಬರಂ ಪರಿಮೃಶನ್ ಲಂಬೋದರಃ ಪಾತು ಮಾಂ॥೧॥

ವಾಮಂ ಯಸ್ಯ ವಪುಃ ಸಮಸ್ತಜಗತಾಂ ಮಾತಾ ಪಿತಾ ಚೇತರಶ್
ಯತ್ಪಾದಾಂಬುಜನೂಪುರೋದ್ಭವರವಃ ಶಬ್ದಾರ್ಥವಾಕ್ಯಾಸ್ಪದಂ ।

---

### ಶ್ರೀ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಮೊಲನೆಯ ಅಧ್ಯಾಯ

ಶ್ರೀ ಪರಶಿವನ ಪ್ರಿಯಪುತ್ರನಾದ ವಿನಾಯಕನು ಮಹಾಮಹಿಮಾಶಾಲಿಯು. ಆತನೊಂದುಬಾರಿ ಮೇರುಗಿರಿಯನ್ನು ಮಾದಳದ ಫಲವೆಂದು ತಿಳಿದು ಲೀಲೆಯಿಂದ ಕೈಗೆ ತೆಗೆದುಕೊಂಡನು. ಆಮೇಲೆ ಆ ಗಿರಿಯಲ್ಲಿ ವಾಸಿಸುವ ಭೀತರಾದ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟವನಾಗಿ, ಅವರನ್ನು ಸಮಾಧಾನಗೊಳಿಸಿ ಆ ಗಿರಿಯನ್ನು ಬಿಟ್ಟು ನೀಲಗಗನವನ್ನು ನೇರಲೇಹಣ್ಣೆಂದು ತಿಳಿದು ಹಿಡಿಯಲಿಚ್ಛಿಸಿದನು. ಇಂತಹ ಮಹಾಮಹಿಮಾಶಾಲಿಯಾದ ವಿನಾಯಕನನ್ನು ವಿಘ್ನನಿವಾರಣೆಗಾಗಿ ಈ ಗ್ರಂಥದ ಆದಿಯಲ್ಲಿ ಭಕ್ತಿಯಿಂದ ಪ್ರಾರ್ಥಿಸುವೆನು. ॥೧॥

ಈ ಶಿವರಹಸ್ಯದಲ್ಲಿ ಉಪಾಸ್ಯದೇವನಾದ ಪರಶಿವನೂ ಮಹಾಮಹಿಮಾಶಾಲಿಯು. ಪಾರ್ವತೀರೂಪವಾದ ಅವನೆಡಶರೀರವು ಜಗತ್ತಿಗೆ ಮಾತೃಸ್ವರೂಪ

ಯನ್ನೇತ್ರತ್ರಿತಯಂ ಸಮಸ್ತಜಗತಾಮಾಲೋಕಹೇತುಃ ಸದಾ
ಪಾಯಾದ್ದೈವತಸಾರ್ವಭೌಮಗಿರಿಜಾಲಂಕಾರಮೂರ್ತಿಃ ಶಿವಃ ॥೨॥

॥ ಸೂತ ಉವಾಚ ॥

ಜೈಗೀಷವ್ಯಃ ಪುನರ್ನತ್ವಾ ಷಣ್ಮುಖಂ ಶಿವಸಂಭವಮ್ ।
ಪಪ್ರಚ್ಛ ಹೃಷ್ಟಸ್ತಂ ತತ್ರ ಮುನಿಭಿರ್ಗಣಪುಂಗವೈಃ ॥೩॥

॥ ಜೈಗೀಷವ್ಯ ಉವಾಚ ॥

ಕರುಣಾಕರ ಸರ್ವಜ್ಞ ಶರಣಾಗತಪಾಲಕ ।
ಅರುಣಾಧಿಪನೇತ್ರಾಬ್ಜಚರಣಸ್ಮರಣೋನ್ಮುಖ ॥೪॥

ಕರುಣಾವರುಣಾಂಬೋಧೇ ತರಣಿದ್ಯುತಿಭಾಸ್ಕರ ।
ದಿವ್ಯದ್ವಾದಶಲಿಂಗಾನಾಂ ಮಹಿಮಾ ಸಂಶ್ರುತೋ ಮಯಾ ॥೫॥

---

ವಾದುದು, ಪರಮೇಶ್ವರರೂಪವಾದ ಬಲಶರೀರವು ಜಗತ್ತಿಗೆ ಪಿತೃಸ್ವರೂಪವಾದುದು, ಶಬ್ದ, ಅರ್ಥ, ವಾಕ್ಯ ಮೊದಲಾದ ಶಬ್ದರಾಶಿಯೆಲ್ಲವೂ ಆ ದೇವನ ಕಾಲುಗಡಗದ ಧ್ವನಿಯಿಂದ ಜನಿಸಿರುವುದು. ಸೂರ್ಯ ಚಂದ್ರ ಅಗ್ನಿಸ್ವರೂಪಗಳಾದ ಆ ದೇವನ ಮೂರು ಕಣ್ಣುಗಳಿಂದ ಈ ಜಗತ್ತು ಬೆಳಗುತ್ತಿರುವುದು. ಇಂತಹ ದೇವದೇವನಾದ ಅರ್ಧನಾರೀಶ್ವರನೆನಿಸಿದ ಪರಶಿವನು ನಮ್ಮೆಲ್ಲರನ್ನೂ ರಕ್ಷಿಸಲಿ. ॥೨॥

ಸೂತಮಹರ್ಷಿಯು ದೇವತಾಪ್ರಾರ್ಥನೆಯಾದ ನಂತರ ಶೌನಕಾದಿಗಳನ್ನು ಕುರಿತು ಹೀಗೆಂದರು—ಎಲೈ ಶೌನಕಾದಿ ಮುನಿಗಳೇ, ಆಮೇಲೆ ಜೈಗೀಷವ್ಯ ಮುನಿಯು ಶಿವತನೂಜನಾದ ಕುಮಾರಸ್ವಾಮಿಗೆ ಪುನಃ ನಮಸ್ಕರಿಸಿ ಮುನಿಗಳೊಡನೆ ಕೂಡಿ ವಿನಯದಿಂದ ಹೀಗೆ ಪ್ರಶ್ನಿಸಿದನು. ॥೩॥

ದಯಾಮಯನೂ, ಶರಣಾಗತರನ್ನು ರಕ್ಷಿಸುವವನೂ, ವಿಷ್ಣುವಂದ್ಯನಾದ ಪರಶಿವನನ್ನು ಸದಾ ಧ್ಯಾನಿಸುವವನೂ, ಕೋಟಿಸೂರ್ಯರಂತೆ ತೇಜಸ್ವಿಯೂ ಆದ ಷಣ್ಮುಖಸ್ವಾಮಿಯೇ, ಈ ಹಿಂದೆ ನಿನ್ನಿಂದ ನಾನು ಪರಶಿವನ ಹನ್ನೆರಡು ದಿವ್ಯ ಜ್ಯೋತಿರ್ಲಿಂಗಗಳ ಮಹಿಮೆಯನ್ನು ಕೇಳಿದುದಾಯಿತು. ॥೪-೫॥

ತ್ವತ್ತೋಽನ್ಯಚ್ಛ್ರೋತುಮಿಚ್ಛಾಮಿ ಶಿವಾಖ್ಯಾನಮನುತ್ತಮಂ ।
ತ್ವದ್ವಾಕ್ಯಕಂಜಪೀಯೂಷಧಾರಾಭಿಃ ಪಾವಯಾಶು ಮಾಂ ॥೬॥

ಇತಿ ತಸ್ಯ ಗಿರಾ ತುಷ್ಟಃ ಷಣ್ಮುಖಃ ಪ್ರಾಹಃ ತಂ ಮುನಿಂ ॥೭॥

ಶೃಣು ತ್ವಮುಗಜಾಕಾಂತೇನೋಕ್ತಂ ಜ್ಞಾನಮಹಾರ್ಣವಂ ।
ಋಭವೇ ಯತ್ಪುರಾ ಪ್ರಾಹ ಕೈಲಾಸೇ ಶಂಕರಃ ಸ್ವಯಂ ॥೮॥

॥ ಷಣ್ಮುಖ ಉವಾಚ ॥

ಬ್ರಹ್ಮಸೂನುಃ ಪುರಾ ವಿಪ್ರೋ ಗತ್ವಾ ನತ್ವಾ ಮಹೇಶ್ವರಂ ।
ಋಭುರ್ವಿಭುಂ ತದಾ ಶಂಭುಂ ತುಷ್ಟಾವ ಪ್ರಣತೋ ಮುದಾ ॥೯॥

ದಿವಾಮಣಿನಿಶಾಪತಿಸ್ಫುಟಿಕೃಪೀಟಯೋನಿಸ್ಫುರ
ಲ್ಲಲಾಟಭಸಿತೋಲ್ಲಸದ್ವರತ್ರಿಪುಂಡ್ರಭಾಗೋಜ್ವಲಂ ।
ಭಜಾಮಿ ಭುಜಗಾಂಗದಂ ವಿಧೃತಸಾಮಿಸೋಮಪ್ರಭಾ
ವಿರಾಜಿತಕಪರ್ದಕಂ ಕರಟಿಕೃತ್ತಿಭೂಷ್ಯತ್ಕಟಿಂ ॥೧೦॥

---

ಈಗ ನಿನ್ನ ವದನದಿಂದ ಇನ್ನೂ ಪರಶಿವಚರಿತ್ರವನ್ನು ಕೇಳಬೇಕೆಂಬ ಆಸೆಯಾಗುತ್ತದೆ. ನಿನ್ನ ಮಾತಿನ ಅಮೃತಧಾರೆಯಿಂದ ನನ್ನನ್ನು ಪವಿತ್ರನನ್ನಾಗಿ ಮಾಡು. ಎಂದು ಪ್ರಾರ್ಥಿಸಿದ ಜೈಗೀಷವ್ಯನಿಗೆ ಕುಮಾರಸ್ವಾಮಿಯು, ॥೬॥

"ಎಲೈ ಮುನಿಯೇ, ಕೇಳು. ಕೈಲಾಸದಲ್ಲಿ ಪರಶಿವನು ತನ್ನ ಭಕ್ತಾಗ್ರೇಸರನಾದ ಋಭುವಿಗೆ ಹೇಳಿದ ಜ್ಞಾನೋಪದೇಶವನ್ನು ನಿನಗೆ ಹೇಳುವೆನು. ಸಾವಧಾನದಿಂದ ಲಾಲಿಸು" ಎಂದು ಶಿವರಹಸ್ಯವನ್ನು ಬೋಧಿಸತೊಡಗಿದನು. ॥೮॥

ಹಿಂದೆ ಒಂದುಸಾರಿ ಬ್ರಹ್ಮನ ಮಾನಸಪುತ್ರನಾದ ಋಭುಮುನಿಯು ಮಹೇಶ್ವರನ ಬಳಿಗೆ ಹೋಗಿ ಭಕ್ತಿಯಿಂದ ನಮಸ್ಕರಿಸಿ ವಿನಯದಿಂದ ಹೀಗೆ ಸ್ತುತಿಸಿದನು. ॥೯॥

ಸೂರ್ಯ, ಚಂದ್ರ, ಅಗ್ನಿಗಳೇ ಕಣ್ಣುಗಳಾಗುಳ್ಳವನೂ, ಹಣೆಯಲ್ಲಿ ಪವಿತ್ರ ಭಸ್ಮವನ್ನು ಧರಿಸಿರುವವನೂ, ನಾಗಭೂಷಣನೂ, ಜಟೆಯಲ್ಲಿ ಅರ್ಧಚಂದ್ರಕಲೆಯನ್ನುಳ್ಳವನೂ, ಆನೆಯ ಚರ್ಮವನ್ನುಡುವವನೂ ಆದ ಪರಶಿವನೇ, ನಿನ್ನನ್ನು ನಾನು ಭಕ್ತಿಯಿಂದ ಭಜಿಸುವೆನು. ॥೧೦॥

ಫಾಲಾಕ್ಷಾಧ್ವರದಕ್ಷಶಿಕ್ಷ ವೃಷಭೋಕ್ಷೇಶವಾಹೋತ್ತಮ
ತ್ರ್ಯಕ್ಷಾಕ್ಷಯ್ಯಫಲಪ್ರದಾವ ಭಸಿತಾಲಂಕಾರರುದ್ರಾಕ್ಷಧೃಕ್ ।
ಚಕ್ಷುಃಶ್ರೋತ್ರವರಾಂಗಹಾರಸುಮಹಾವಕ್ಷಃಸ್ಥಲಾಧ್ಯಕ್ಷ ಮಾಂ
ಭಕ್ಷೀಭೂತಗರಪ್ರಭಕ್ಷ ಭಗವನ್ ಭಿಕ್ಷ್ವರ್ಚ್ಯಪಾದಾಂಬುಜ ॥೧೧॥

ಗಂಗಾಚಂದ್ರಕಲಾಲಲಾಮ ಭಗವನ್ ಭೂಭೃತ್ಕುಮಾರೀಸಖ
ಸ್ವಾಮಿನ್ ತೇ ಪದಪದ್ಮಭಾವಮತುಲಂ ಕಷ್ಟಾಪಹಂ ದೇಹಿ ಮೇ ।
ತುಷ್ಟೋಽಹಂ ಶಿಪಿವಿಷ್ಟ ಹೃಷ್ಟಮನಸಾ ಭ್ರಷ್ಟಾನ್ನಮನ್ಯೇ ಹರಿ
ಬ್ರಹ್ಮೇಂದ್ರಾನಮರಾನ್ ತ್ರಿವಿಷ್ಟಪಗತಾನ್ ನಿಷ್ಠಾ ಹಿ ಮೇ ತಾದೃಶೀ॥೧೨॥

ನೃತ್ತಾಡಂಬರಸಜ್ಜಟಾಪಟಲಿಕಾ ಭ್ರಾಮ್ಯನ್ಮಹೋಡುಚ್ಛಟಾ
ತ್ರುಟ್ಯತ್ಸೋಮಕಲಾಲಲಾಮಕಲಿತಾಶಮ್ಯಾಕಮೌಳೀತತಂ ।
ಉಗ್ರಾಸುಗ್ರಭವೋಗ್ರದುರ್ಗ ಜಗದುದ್ಧಾರಾಗ್ರಪಾದಾಂಬುಜಂ
ರಕ್ಷೋವಕ್ಷಕುಠಾರಭೂತಮುಮಯಾ ವೀಕ್ಷ್ಯೇಽದ್ಯ ಕಾಮಪ್ರದಂ ॥೧೩॥

---

ಹಣೆಯಲ್ಲಿ ಉರಿಗಣ್ಣುಳ್ಳವನೂ, ದುಷ್ಟನಾದ ದಕ್ಷಬ್ರಹ್ಮನನ್ನೂ, ಅವನ ಯಾಗವನ್ನೂ ಧ್ವಂಸಮಾಡಿದವನೂ, ವೃಷಭವಾಹನನೂ, ಮುಕ್ಕಣ್ಣನೂ. ಶಾಶ್ವತ ಮುಕ್ತಿಯನ್ನು ಕರುಣಿಸುವವನೂ, ಭಸ್ಮರುದ್ರಾಕ್ಷಿಗಳನ್ನು ಧರಿಸಿರುವವನೂ, ಸರ್ಪಗಳನ್ನೇ ಹಾರವನ್ನಾಗಿ ಮಾಡಿರುವವನೂ, ಕಾಲಕೂಟವನ್ನು ಕುಡಿದವನೂ, ಸಂನ್ಯಾಸಿಗಳಿಂದ ಅರ್ಚಿಸಲ್ಪಡುವವನೂ ಆದ ಮಹಾದೇವನೇ, ನನ್ನನ್ನು ಪಾಲಿಸು. ॥೧೧॥

ಜಟೆಯಲ್ಲಿ ಚಂದ್ರಕಲೆ ಗಂಗೆಯರನ್ನು ಕಟ್ಟಿ, ಅರ್ಧಶರೀರದಲ್ಲಿ ಗಿರಿಜೆಯನ್ನು ಧರಿಸಿರುವ ಸ್ವಾಮಿಯೇ, ಕಷ್ಟವನ್ನು ನಿವಾರಿಸುವ ನಿನ್ನ ಪಾದಕಮಲವನ್ನು ನನಗೆ ಕಾಣಿಸು ; ಭಗವಂತನೇ, ನಿನ್ನ ಧ್ಯಾನದಿಂದಲೇ ನಾನು ತೃಪ್ತನಾಗಿರುವೆನು. ತಮ್ಮನ್ನು ತಾವೇ ರಕ್ಷಿಸಿಕೊಳ್ಳಲಾರದ, ಹರಿ ಬ್ರಹ್ಮ ಇಂದ್ರರೇ ಮೊದಲಾದ ದೇವತೆಗಳನ್ನು ಮನಸ್ಸಿನಿಂದಲೂ ನಾನು ಯೋಚಿಸಲಾರೆನು, ನನ್ನ ನಿಷ್ಠೆಯು ಅಂತಹುದು. ॥೧೨॥

ಪರಶಿವನು ತಾಂಡವ ಲೀಲೆಯನ್ನು ನಡೆಸುವಾಗ ಅವನ ಆಡಂಬರದ ಜಟೆಯು ಹೊಡತದಿಂದ ಗಗನದಲ್ಲಿನ ನಕ್ಷತ್ರಗಳು ಕಳಚಿ ಬೀಳುವುವು. ಜಟೆಯಲ್ಲಿನ

ಫಾಲಂ ಮೇ ಭಸಿತತ್ರಿಪುಂಡ್ರರಚಿತಂ ತ್ವತ್ಪಾದಪದ್ಮಾನತಂ
ಪಾಹೀಶಾನ ದಯಾನಿಧಾನ ಭಗವನ್ ಫಾಲಾನಲಾಕ್ಷ ಪ್ರಭೋ ।
ಕಂಠೇ ಮೇ ಶಿತಿಕಂಠನಾಮ ಭವತೋ ರುದ್ರಾಕ್ಷಧೃಕ್ಪಾಹಿ ಮೇ
ಕರ್ಣೌ ಮೇ ಭುಜಗಾಧಿಪೋರುಸುಮಹಾಕರ್ಣಪ್ರಭೋ ಪಾಹಿ ಮಾಂ॥೧೪

ನಿತ್ಯಂ ಶಂಕರನಾಮಬೋಧಿತಕಥಾಸಾರಾದರೋ ಶಂಕರೋ
ವಾಚಂ ರುದ್ರಜಪಾದರಾಂ ಸುಮಹತೀಂ ಪಂಚಾಕ್ಷರೀಮಿಂದುಧೃಕ್ ।
ಬಾಹೂ ಮೇ ಶಶಿಭೂಷಣೋತ್ತಮಮಹಾಲಿಂಗಾರ್ಚನಾಯೋದ್ಯತೌ
ಪಾಹಿ ಪ್ರೇಮರಸಾರ್ದ್ರಯಾದ್ಯ ಸುದೃಶಾ ಶಂಭೋ ಹಿರಣ್ಯಪ್ರಭ ॥೧೫॥

ಭಾಸ್ವದ್ಬಾಹುಚತುಷ್ಟಯೋಜ್ವಲ ಸದಾ ನೇತ್ರೇ ತ್ರಿನೇತ್ರ ಪ್ರಭೋ
ತ್ವಲ್ಲಿಂಗೋತ್ತಮದರ್ಶನೇನ ಸುತರಾಂ ತೃಪ್ತೌ ಸದಾ ಪಾಹಿ ಮೇ ।

---

ಚಂದ್ರಕಲೆಯು ಅಸ್ತವ್ಯಸ್ತವಾಗುವುದು, ಇಂತಹ ನರ್ತನವನ್ನು ಮಾಡುತ್ತಾ ಜಗತ್ತನ್ನು ಉದ್ಧರಿಸುವ, ದೈತ್ಯರನ್ನು ಸಂಹರಿಸುವ, ಗಿರಿಜೆಯೊಡಗೂಡಿರುವ, ಪರಶಿವನನ್ನು ಭಕ್ತಿಯಿಂದ ಈಗ ನೋಡುತ್ತಿರುವೆನು. ॥೧೩॥

ಓ ದೇವ, ಭಸ್ಮಧಾರಿಯಾಗಿದ್ದು ನಿನ್ನ ಪಾದಗಳ ಮೇಲೆ ಬಿದ್ದಿರುವ ನನ್ನ ಹಣೆಯನ್ನು, ಹಣೆಯಲ್ಲಿ ಉರಿಗಣ್ಣುಳ್ಳ ನೀನು ರಕ್ಷಿಸು. ರುದ್ರಾಕ್ಷಧಾರಿಯಾದ ನನ್ನ ಕಂಠವನ್ನು ನೀಲಕಂಠನಾದ ನೀನು ಪಾಲಿಸು. ರುದ್ರಾಕ್ಷಿಯನ್ನೇ ಕರ್ಣಾಭರಣವನ್ನಾಗಿ ಧರಿಸಿರುವ ನನ್ನ ಕಿವಿಗಳನ್ನು, ಸರ್ಪವನ್ನೇ ಕರ್ಣಾಭರಣವನ್ನಾಗಿ ಹೊಂದಿರುವ ಮಹಾದೇವನು ಕಾಪಾಡಲಿ. ॥೧೪॥

ನಿತ್ಯವೂ ಶಂಕರನ ಕಥೆಯನ್ನು ಹೇಳುವ, ರುದ್ರಸೂಕ್ತವನ್ನು ಪಠಿಸುವ, ಶಿವಪಂಚಾಕ್ಷರಿಯನ್ನು ಜಪಿಸುವ, ನನ್ನ ವಾಕ್ಕನ್ನು ಶಂಕರನು ರಕ್ಷಿಸಲಿ. ಶಿವಲಿಂಗವನ್ನರ್ಚಿಸುವ ನನ್ನ ತೋಳುಗಳನ್ನು ಸರ್ಪವನ್ನೇ ತೋಳುಬಳೆಯಾಗಿ ತೊಟ್ಟಿರುವ ಚಂದ್ರಶೇಖರನು ರಕ್ಷಿಸಲಿ. ಓ ಪರಶಿವನೇ, ನಿನ್ನ ಪ್ರಸನ್ನದೃಷ್ಟಿಯಿಂದ ನನ್ನನ್ನು ನೋಡಿ ಸಲಹು. ॥೧೫॥

ನಾಲ್ಕುತೋಳುಗಳುಳ್ಳ, ಮುಕ್ಕಣ್ಣನಾದ ದೇವನೇ, ನಿನ್ನ ದಿವ್ಯಲಿಂಗವನ್ನು ದರ್ಶನಮಾಡುತ್ತಾ ಸದಾ ಸಂತುಷ್ಟಗಳಾದ ನನ್ನ ಕಣ್ಣುಗಳನ್ನು ರಕ್ಷಿಸು. ಓ ದೇವ

ಪಾದೌ ಮೇ ಹರಿನೇತ್ರಪೂಜಿತಪದದ್ವಂದ್ವಾವ ನಿತ್ಯಂ ಪ್ರಭೋ
ತ್ವಲ್ಲಿಂಗಾಲಯಪ್ರಕ್ರಮಪ್ರಣತಿಭಿರ್ಮಾನ್ಯೌ ಚ ಧನ್ಯೌ ವಿಭೋ ॥೧೬॥

ಧನ್ಯಸ್ತ್ವಲ್ಲಿಂಗಸಂಗೋಽಪ್ಯನುದಿನಗಲಿತಾನಂತಸಂಗಾಂತರಂಗಃ
ಪುಂಸಾಮರ್ಥೈಕಸಕ್ತ್ಯಾ ಯಮನಿಯಮಪರೈರ್ವಿಶ್ವವಂದ್ಯ ಪ್ರಭೋ ತೇ ।
ದತ್ವಾ ಬಿಲ್ವದಲಂ ಸದಂಬುಜವರಂ ಕಿಂಚಿಜ್ಜಲಂ ವಾ ಮುಹುಃ
ಪ್ರಾಪ್ನೋತ್ಯೇಶ್ವರಪಾದಪಂಕಜಮುಮಾನಾಥಾದ್ಯ ಮುಕ್ತಿಪ್ರದಂ ॥೧೭॥

ಉಮಾರಮಣ ಶಂಕರ ತ್ರಿದಶವರ್ಯ ವೇದೇಡ್ಯ ಹೃ
ತ್ತ್ವದೀಯಪರಭಾವತೋ ಮಮ ಸದೈವ ನಿರ್ವಾಣಕೃತ್ ।
ಭವಾರ್ಣವನಿವಾಸಿನಾಂ ಕಿಮು ಭವತ್ಪದಾಂಭೋರುಹ
ಪ್ರಭಾವಭಜನಾದರಂ ಭವತಿ ಮಾನಸಂ ಮುಕ್ತಿದಂ ॥೧೮॥

ಸಂಸಾರಾರ್ಗಲಪಾದಬದ್ಧಜನತಾಸಮ್ಮೋಚನಂ ಭರ್ಗತೇ
ಪಾದದ್ವಂದ್ವಮುಮಾಸನಾಥ ಭಜತಾಂ ಸಂಸಾರಸಂಭರ್ಜಕಂ ।
ತ್ವನ್ನಾಮೋತ್ತಮಗರ್ಜನಾದಘಕುಲಂ ಸಂತರ್ಜಿತಂ ವೈ ಭವೇತ್ ।
ದುಃಖಾನಾಂ ಪರಿಮಾರ್ಜಕಂ ತವ ಕೃಪಾವೀಕ್ಷಾವತಾಂ ಜಾಯತೇ ॥೧೯॥

---

ನಿನ್ನ ದೇವಾಲಯವನ್ನು ಸದಾ ಪ್ರದಕ್ಷಿಣೆಮಾಡುವ ನನ್ನ ಕಾಲುಗಳನ್ನು ಹರಿಯ ನೇತ್ರಕಮಲದಿಂದ ಪೂಜಿಸಲ್ಪಟ್ಟ ಪಾದಗಳುಳ್ಳ ನೀನು ಸದಾ ಪಾಲಿಸು. ॥೧೬॥

ಧನ್ಯನಾದವನು ನಿನ್ನ ದಿವ್ಯಲಿಂಗವನ್ನು ದರ್ಶನಮಾಡಿ, ಜಿತೇಂದ್ರಿಯತೆಯಿಂದ ನಿನ್ನ ಶಿವಲಿಂಗವನ್ನು ಬಿಲ್ವಪತ್ರಗಳಿಂದಲೂ ಕಮಲಗಳಿಂದಲೂ ಅಥವಾ ಅಭಿಷೇಕಾದಿಗಳಿಂದಲೂ ಅರ್ಚಿಸಿ, ಮುಕ್ತಿದಾಯಕವಾದ ನಿನ್ನ ಅಡಿದಾವರೆಯನ್ನು ಸೇರಿ ಸುಖಿಯಾಗುವನು. ॥೧೭॥

ಸುಖಕರನೂ, ದೇವತೆಗಳಿಂದ ಸ್ತುತಿಸಲ್ಪಡುವವನೂ, ದೇವದೇವನೂ, ಮುಕ್ತಿದಾಯಕನೂ ಆದ ದೇವನೇ, ನಿನ್ನನ್ನು ಒಂದುಸಾರಿ ಸ್ಮರಿಸಿದ ಮಾತ್ರದಿಂದಲೇ ಜನರು ನರಕದಿಂದ ಉದ್ಧರಿಸಲ್ಪಡುವರು. ಹೀಗಿರಲು ನಿನ್ನನ್ನು ಸದಾ ಭಕ್ತಿಯಿಂದ ಭಜಿಸುವವರಿಗೆ ಮುಕ್ತಿಯು ಲಭಿಸಲಾರದೇ ? ॥೧೮॥

ಗಿರಿಜಾಕಾಂತನೇ, ನಿನ್ನ ಅಡಿದಾವರೆಗಳನ್ನು ಭಜಿಸುವವರ ಸಾಂಸಾರಿಕವಾದ ತಾಪತ್ರಯಗಳೆಲ್ಲವೂ ಕೂಡಲೇ ನಾಶವಾಗುವುವು. ನಿನ್ನ ಹೆಸರಿನ ಗರ್ಜನೆಯನ್ನು

ವಿಧಿಮುಂಡಕರೋತ್ತಮೋರುಮೇರು
ಕೋದಂಡಖಂಡಿತಪುರಾಂಡಜನಾಹಬಾಣ ।
ಪಾಹಿ ಕ್ಷಮಾರಥವಿಕರ್ಷವೇದವಾಜಿ
ಹೇಷಾಂತದರ್ಶಿತಪದಾಂಬುಜ ವಿಶ್ವನಾಥ ॥೨೦॥

ವಿಭೂತೀನಾಮಂತೋ ನ ಹಿ ಖಲು ಭವಾನೀರಮಣ ತೇ
ಭವೇ ಭಾವಃ ಕಶ್ಚಿತ್ತ್ವಯಿ ಭವ ಹಿ ಭಾವೇನ ಲಭತೇ ।
ಅಭಾವಂ ಚಾಜ್ಞಾನಂ ಭವತಿ ಜನನಾದ್ಯೈಶ್ಚ ರಹಿತಾಃ
ಉಮಾಕಾಂತ ಸ್ವಾಂತೇ ಭವದುಭಯಪಾದಂ ಕಲಯತಃ ॥೨೧॥

ವರಂ ಶಂಭೋ ಭಾವ್ಯೈರ್ಭವಜನನಭಾವೇನ ನಿತರಾಂ
ಭವಾಂಭೋಧಿರ್ನಿತ್ಯಂ ಭವತಿ ವಿತತಃ ಪಾಂಸುಬಹುಲಃ ।
ವಿಮುಕ್ತಿಂ ಭುಕ್ತಿಂ ಚ ಶ್ರುತಿಕಥಿತಭಸ್ಮಾಕ್ಷವರಧೃಕ್
ಭವೇ ಭಕ್ತಸ್ಸರ್ವೋ ಭವತಿ ಚ ಸದಾನಂದಮಧುರಃ ॥೨೨॥

---

ಕೇಳಿ ಪಾಪಗಳೆಲ್ಲವೂ ಓಡಿಹೋಗುವುವು. ನಿನ್ನ ಕರುಣಾದೃಷ್ಟಿಯಿಂದ ಮಾನವರ ದುಃಖವೆಲ್ಲವೂ ನಾಶವನ್ನೈದುವುದು. ॥೧೯॥

ಬ್ರಹ್ಮಕಪಾಲವನ್ನು ಧರಿಸಿ, ಭೂಮಿಯೆಂಬ ರಥಕ್ಕೆ ವೇದತುರಗಗಳನ್ನು ಕಟ್ಟಿ, ಅದರಲ್ಲಿ ಕುಳಿತು ಮೇರುವನ್ನು ಧನುಸ್ಸನ್ನಾಗಿ ಹಿಡಿದು, ಹರಿಯನ್ನೇ ಬಾಣ ವನ್ನಾಗಿ ಪ್ರಯೋಗಿಸಿ, ತ್ರಿಪುರಾಸುರನನ್ನು ಸಂಹರಿಸಿದ ಓ ದೇವನೇ, ನನ್ನನ್ನು ಪಾಲಿಸು. ॥೨೦॥

ಪಾರ್ವತೀಕಾಂತನೇ, ನಿನ್ನ ಮಹಿಮೆಗಳಿಗೆ ಕೊನೆಯಿಲ್ಲ. ನಿನ್ನನ್ನು ಪರಮ ಭಕ್ತಿಯಿಂದ ಧ್ಯಾನಿಸುವವನ ಅಜ್ಞಾನವು ನಾಶವಾಗಿ ಅವನು ಜನನಮರಣಗಳಿಲ್ಲದ ಮುಕ್ತಿಯನ್ನು ಪಡೆಯುವನು. ಸಾಂಸಾರಿಕವಾದ ದುಃಖವು ನಿನ್ನ ಪದಕಮಲ ಧ್ಯಾನದಿಂದಲ್ಲದೆ ಮತ್ತಾವ ಸಾಧನೆಯಿಂದಲೂ ನಾಶಹೊಂದಲಾರದು. ॥೨೧॥

ಮಹಾದೇವನೇ, ಸಂಸಾರಸಾಗರವು ಅಂತವಿಲ್ಲದೆ ಜನನಮರಣಾದಿಗಳಿಂದ ತುಂಬಿದೆ. ಮೇಲಾಗಿ ಅನೇಕಬಗೆಯ ದುಃಖಗಳೆಂಬ ಕೆಸರುಗಳ ಕಂಪವಾಗಿದೆ. ಭಸ್ಮರುದ್ರಾಕ್ಷಧಾರಿಯಾಗಿ ಭಕ್ತಿಯಿಂದ ನಿನ್ನನ್ನು ಭಜಿಸುವವನು ಆ ಸಂಸಾರದ

ಸೋಮಸಾಮಿಗಜಸುಕೃತ್ತಿಮೌಳಿಧೃಕ್
ಸಾಮಸೋಮಶಿರಸಿ ಸ್ತುತಪಾದ ।
ಸಾಮಿಕಾಯಗಿರಿಜೇಶ್ವರ ಶಂಭೋ
ಪಾಹಿ ಮಾಮಖಿಲದುಃಖಸಮೂಹಾತ್ ॥೨೩॥

ಭಸ್ಮಾಂಗರಾಗ ಭುಜಗಾಂಗ ಮಹೋಕ್ಷಸಂಗ
ಗಂಗಾಂಬುಸಂಗಸುಜಟಾನಿಟಿಲಸ್ಫುಲಿಂಗ ।
ಲಿಂಗಾಂಗಭಂಗಿತಮನಂಗ ವಿಹಂಗವಾಹ
ಸಂಪೂಜ್ಯಪಾದ ಸದಸಂಗಜನಾಂತರಂಗ ॥೨೪॥

ವಾತ್ಸಲ್ಯಂ ಮಯಿ ತಾದೃಶಂ ತವ ನ ಚೇಚ್ಚಂದ್ರಾರ್ಧಚೂಡಾಮಣೇ
ಧಿಕ್ಕೃತ್ಯಾಪಿ ವಿಮುಂಚ ಮಾ ತ್ವಯಿ ಯತೋ ಧನ್ಯೋ ಧರಣ್ಯಾಮಹಂ ।
ಸಕ್ಷಾರಂ ಲವಣಾರ್ಣವಸ್ಯ ಸಲಿಲಂ ಧಾರಾಧರೇಣ ಕ್ಷಣಾತ್
ಆದಾಯೋಜ್ಝಿತಮಾಕ್ಷಿತೌ ಹಿ ಜಗತಾಮಾಸ್ವಾದನೀಯಾಂ ದೃಶಾಂ ॥೨೫॥

---

ದುಃಖಗಳನ್ನಳಿದು, ಭೋಗಮೋಕ್ಷಗಳೆರಡನ್ನೂ ಹೊಂದಿ ಆನಂದವನ್ನನುಭವಿಸುವನು. ॥೨೨॥

ಜಟೆಯಲ್ಲಿ ಅರ್ಧಚಂದ್ರನನ್ನು ಧರಿಸಿದವನೂ, ಗಜಚರ್ಮವನ್ನುಡುವವನೂ, ಸಾಮವೇದಗಳಿಂದ ಸ್ತುತಿಸಲ್ಪಡುವವನೂ, ಅರ್ಧಶರೀರದಲ್ಲಿ ಗಿರಿಜೆಯನ್ನು ಧರಿಸಿದ ಅರ್ಧನಾರೀಶ್ವರನೂ ಆದ ಓ ಶಂಕರನೇ, ಸಂಸಾರದುಃಖಗಳ ದೆಸೆಯಿಂದ ನನ್ನನ್ನು ಸಲಹು. ॥೨೩॥

ಭಸ್ಮವನ್ನು ಗಂಧವನ್ನಾಗಿ ಲೇಪಿಸಿಕೊಳ್ಳುವವನೂ, ವೃಷಭವಾಹನನೂ, ಜಟೆಯಲ್ಲಿ ಗಂಗೆಚಂದ್ರಕಲೆಯರನ್ನು ಧರಿಸಿದವನೂ, ಹಣೆಯಲ್ಲಿ ಉರಿಗಣ್ಣುಳ್ಳವನೂ, ಲಿಂಗಗಳಲ್ಲಿ ನೆಲಸಿರುವವನೂ, ಮನ್ಮಥನನ್ನು ದಹಿಸಿದವನೂ, ನಾರಾಯಣನಿಂದ ಪೂಜಿಸಲ್ಪಡುವವನೂ, ಯೋಗಿಗಳ ಹೃದಯದಲ್ಲಿ ನೆಲಸಿರುವವನೂ ಆದ ಓ ದೇವನೇ, ರಕ್ಷಿಸು, ॥೨೪॥

ಓ ಶಂಕರ, ನನ್ನಲ್ಲಿ ನಿನಗೆ ದಯೆಯಿಲ್ಲದಿದ್ದರೆ ಧಿಕ್ಕಾರಮಾಡಿಯಾದರೂ ನನ್ನನ್ನು ತ್ಯಜಿಸು. ಅದರಿಂದ ಭೂಮಿಯಲ್ಲಿ ಜನೋಪಕಾರಿಯಾಗಿ ಧನ್ಯನಾಗು

ತ್ವತ್ಕೈಲಾಸವರೇ ವಿಶೋಕಹೃದಯಾಃ ಕ್ರೋಧೋಜ್ಝಿತಾಶ್ಚಾಂಡಜಾಃ
ತಸ್ಮಾನ್ಮಾಮಪಿ ಭೇದಬುದ್ಧಿರಹಿತಂ ಕುರ್ವೀಶ ತೇಽನುಗ್ರಹಾತ್ ।
ತ್ವದ್ವಕ್ತ್ರಾಮಲನಿರ್ಝರೋಜ್ಝಿತಮಹಾಸಂಸಾರಸಂತಾಪಹಂ
ವಿಜ್ಞಾನಂ ದಿಶ ದೃಶಾಽದ್ಯ ಭಗವನ್ ಲೋಕಾವನಾಯ ಪ್ರಭೋ ॥೨೬॥

ಸಾರಂಗೀ ಸಿಂಹಶಾಬಂ ಸ್ಪೃಶತಿ ಸುತಧಿಯಾ ನಂದಿನೀ ವ್ಯಾಘ್ರಪೋತಂ
ಮಾರ್ಜಾರೀ ಹಂಸಬಾಲಂ ಪ್ರಣಯಪರವಶಾಃ ಕೇಕಿಕಾಂತಾ ಭುಜಂಗಂ ।
ವೈರಾಣ್ಯಾಜನ್ಮಜಾತಾನ್ಯಪಿ ಗಲಿತಮದಾ ಜಂತವೋಽನ್ಯೇ ತ್ಯಜಂತಿ
ಭಕ್ತಾಃ ತ್ವತ್ಪಾದಪದ್ಮೇ ಕಿಮು ಭಜನವತಃ ಸರ್ವಸಿದ್ಧಿಂ ಲಭಂತೇ ॥೨೭॥

---

ವೆನು. ಸಮುದ್ರದ ನೀರು ತುಂಬಾ ಉಪ್ಪಾದುದು. ಆದರೂ ಅದು ಸಮುದ್ರದಿಂದ ಧಿಕ್ಕರಿಸಲ್ಪಟ್ಟು ಮೋಡವನ್ನೇರಿ ಭೂಮಿಗೆ ಬಿದ್ದು ಸವಿಯಾಗಿ ಜನರಿಗುಪಕಾರ ಮಾಡುವುದಲ್ಲವೆ! ॥೨೫॥

ಓ ಶಂಕರ, ನಿನ್ನ ಕೈಲಾಸದಲ್ಲಿ ವಾಸಿಸುವ ಹಕ್ಕಿಗಳೂ ಸಹ ರಾಗದ್ವೇಷಾದಿ ಗಳಿಲ್ಲದೇ ಸುಖವಾಗಿರುವುವು. ಆದರಂತೆಯೇ ನನ್ನನ್ನೂ ಕರುಣಾದೃಷ್ಟಿಯಿಂದ ನೀನು ನೋಡಿ, ಸಂಸಾರದುಃಖವನ್ನು ಹೋಗಲಾಡಿಸುವಂತಹ ಉತ್ತಮ ಜ್ಞಾನ ವನ್ನು ಲೋಕೋಪಕಾರಕ್ಕಾಗಿ ನನಗೆ ಉಪದೇಶಿಸು. ನಿನ್ನ ಮುಖದಿಂದ ಬರುವ ಉಪದೇಶಪ್ರವಾಹವು ಜನತೆಗೆ ಲಭಿಸುವ ಸಂಸಾರತಾಪವನ್ನು ನಿರ್ಮೂಲಗೊಳಿಸಲಿ. ॥೨೬॥

ಶಂಕರನೇ, ನಿನ್ನ ಸಾನ್ನಿಧ್ಯದಿಂದ ಕೈಲಾಸದಲ್ಲಿ ಹೆಣ್ಣುಜಿಂಕೆಯು ಸಿಂಹದ ಮರಿಯನ್ನು ಪುತ್ರನಂತೆ ನೇವರಿಸುತ್ತಿರುವುದು. ಹಸುವು ಪುತ್ರವಾತ್ಸಲ್ಯದಿಂದ ಹುಲಿಯ ಮರಿಯನ್ನು ಸಂತೈಸುವುದು. ಹೆಣ್ಣುಬೆಕ್ಕು ಹಂಸಶಿಶುವನ್ನು ಸಲಹು ತ್ತಿರುವುದು. ನವಿಲುಗಳು ಹಾವನ್ನು ಮಮತೆಯಿಂದ ನೋಡುತ್ತಿರುವುವು. ಹೀಗೆ ಜನ್ಮತಃ ಪರಸ್ಪರ ವೈರವುಳ್ಳ ಮೃಗಗಳು ಇಲ್ಲಿ ನಿನ್ನ ಮಹಿಮೆಯಿಂದ ವೈರವಿಲ್ಲದ ವಾಗಿರುವುವು. ಇನ್ನು ನಿನ್ನ ಅಡಿದಾವರೆಯನ್ನು ಭಜಿಸುವವರಿಗೆ ರಾಗದ್ವೇಷಗಳೆಲ್ಲಿ ಯವು? ಆ ಮೂಲಕವಾದ ಸಂಸಾರದುಃಖವಾದರೂ ಎಲ್ಲಿಯದು? ॥೨೭॥

॥ ಸ್ಕಂದ ಉವಾಚ ॥

ಇತ್ಥಂ ಋಭುಸ್ತುತಿಮುಮಾವರಜಾನಿರೀಶಃ
ಶ್ರುತ್ವಾ ತಮಾಹ ಗಣನಾಥವರೋ ಮಹೇಶಃ ।
ಜ್ಞಾನಂ ಭವಾಮಯವಿನಾಶಕರಂ ಸದೈವ
ತಸ್ಮೈ ತದೇವ ಕಥಯೇ ಶೃಣು ಪಾಶಮುಕ್ತ್ಯೈ ॥೨೮॥

ಇತಿ ಶ್ರೀಶಿವರಹಸ್ಯೇ ಋಭುಸ್ತುತಿರ್ನಾಮ ಪ್ರಥಮೋಽಧ್ಯಾಯಃ

---

ಎಲೈ ಜೈಗೀಷವ್ಯನೇ, ಭಗವಾನ್ ಶಂಕರನು ಋಭುವಿನ ಈ ಸ್ತುತಿಯನ್ನು ಕೇಳಿ ಸಂತುಷ್ಟನಾಗಿ ಅವನಿಗೆ ಸಂಸಾರದುಃಖವನ್ನು ಹೋಗಲಾಡಿಸುವಂತಹ ಜ್ಞಾನವನ್ನುಪದೇಶಿಸಿದನು. ಅದನ್ನೂ ನಿನಗೆ ಹೇಳುವೆನು, ಎಂದು ಸ್ಕಂದ ಸ್ವಾಮಿಯು ಜೈಗೀಷವ್ಯಾದಿಗಳಿಂದ ಋಭುಕೃತಸ್ತುತಿಯನ್ನು ಬೋಧಿಸಿದನು. ॥೨೮॥

ಇಲ್ಲಿಗೆ ಶಿವರಹಸ್ಯದ ಷಷ್ಠಾಂಶದಲ್ಲಿ ಮೊದಲನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದ್ವಿತೀಯೋಽಧ್ಯಾಯಃ

॥ ಈಶ್ವರ ಉವಾಚ ॥

ಶೃಣು ಪದ್ಮಜಸಂಭೂತ ಮತ್ತಃ ಸೂತ್ರವಿಧಿಕ್ರಮಂ ।
ಜ್ಞಾನೋತ್ಪಾದಕಹೇತೂನಿ ಶ್ರುತಿಸಾರಾಣಿ ತತ್ತ್ವತಃ ॥೧॥

ವ್ಯಾಸಾ ಮನ್ವಂತರೇಷು ಪ್ರತಿಯುಗಜನಿತಾಃ ಶಾಂಭವಜ್ಞಾನಸಿದ್ಧ್ಯೈ
ಭಸ್ಮಾಭ್ಯಕ್ತಸಮಸ್ತಗಾತ್ರನಿವಹಾಃ ರುದ್ರಾಕ್ಷಮಾಲಾಧರಾಃ ।
ಕೈಲಾಸಂ ಸಮವಾಪ್ಯ ಶಂಕರಪದಧ್ಯಾನೇನ ಸೂತ್ರಾಣ್ಯುಮಾ
ಕಾಂತಾತ್ಪ್ರಾಪ್ಯ ವಿತನ್ವತೇ ಸ್ವಕಧಿಯಾ ಪ್ರಾಮಾಣ್ಯವಾದಾನ್ಯಹೋ ॥೨॥

---

## ಎರಡನೆಯ ಅಧ್ಯಾಯ

ಆಗ ಪರಶಿವನು, "ಎಲೈ ಬ್ರಹ್ಮಪುತ್ರನಾದ ಋಭುಮುನಿಯೇ ಕೇಳು, ಈಗ ನಿನಗೆ ವೇದಾಂತಸೂತ್ರಗಳ ತತ್ತ್ವಾರ್ಥವನ್ನು ಕ್ರಮವಾಗಿ ಹೇಳುವೆನು. ಆ ಸೂತ್ರಗಳೆಲ್ಲವೂ ಉಪನಿಷತ್ತುಗಳ ಅರ್ಥವನ್ನೇ ಪ್ರತಿಪಾದಿಸುವವಲ್ಲದೇ ಆತ್ಮ ಜ್ಞಾನಕ್ಕೆ ಕಾರಣಗಳಾಗಿರುವುವು" ಎಂದು ಹೇಳುತ್ತಾ, ಋಭುಮುನಿಗೆ ಜ್ಞಾನದ ಸಾರವನ್ನು ಬೋಧಿಸತೊಡಗಿದನು. ॥೧॥

ವೇದಾಂತಸೂತ್ರಗಳ ನಿರ್ಮಾಪಕರು ವ್ಯಾಸಮುನಿಗಳು. ಅನೇಕಮಂದಿ ವ್ಯಾಸರು ಪ್ರತಿ ಮನ್ವಂತರಗಳಲ್ಲೂ ಪ್ರತಿ ಯುಗಗಳಲ್ಲೂ ಜನಿಸಿ ರುದ್ರಾಕ್ಷಭಸ್ಮಧಾರಿ ಗಳಾಗಿ (ನನ್ನನ್ನು) ಶಂಕರನನ್ನಾರಾಧಿಸಿ, ಅವನ ಅನುಗ್ರಹದಿಂದ ವೇದಾಂತಜ್ಞಾನ

ಜಿಜ್ಞಾಸ್ಯಂ ಬ್ರಹ್ಮ ಏನೇತ್ಯಥ ಪದವಿದಿತಃ ಸಾಧನಪ್ರಾಪ್ತ್ಯುಪಾಯೈಃ
ಯೋಗೈರ್ಯೋಗಾದ್ಯುಪಾಯೈರ್ಯಮನಿಯಮಮಹಾಸಾಂಖ್ಯವೇದಾಂತ
ವಾಕ್ಯೈಃ ।
ಶ್ರೋತವ್ಯೋ ಭಗವಾನರೂಪಗುಣತೋ ಮಂತವ್ಯ ಇತ್ಯಾಹ ಹಿ
ವೇದೋದ್ಭೋಧಿತವಾಕ್ಯಹೇತುಕರಣೈರ್ಧ್ಯೇಯಸ್ಸ ಸಾಕ್ಷಾತ್ ಕೃತೈಃ ॥೩॥

ಜನ್ಮಾದ್ಯಸ್ಯ ಯತೋಽಸ್ಯ ಚಿತ್ರಜಗತೋ ಮಿಥ್ಯೈವ ತತ್ಕಾರಣಂ
ಬ್ರಹ್ಮಬ್ರಹ್ಮಾತ್ಮನೈವ ಪ್ರಕೃತಿಪರಮದೋ ವರ್ತಮಾನಂ ವಿವರ್ತಾತ್ ।
ಶ್ರುತ್ಯಾ ಯುಕ್ತ್ಯಾ ಯತೋ ವಾ ಇತಿ ಪದಘಟಿತೋ ವಕ್ತಿ ಶಂಭುಂ
ಮಹೇಶಂ
ನಾಣುಃ ಕಾಲವಿಪಾಕಕರ್ಮಜನಿತಂ ಸಾ ಚೋದನಾ ವೈ ಮೃಷಾ ॥೪॥

---

ವನ್ನು ಪಡೆದು ವೇದಾಂತಸೂತ್ರಗಳನ್ನು ಲೋಕಾನುಗ್ರಹಕ್ಕಾಗಿ ಪ್ರಾಮಾಣ್ಯವಾದವನ್ನನುಸರಿಸಿ ರಚಿಸುವರು. ॥೨॥

"ಅಥಾತೋ ಬ್ರಹ್ಮಜಿಜ್ಞಾಸಾ" ಇದು ವ್ಯಾಸಪ್ರಣೀತವಾದ ಮೊದಲನೆಯ ವೇದಾಂತಸೂತ್ರ. ಇದು "ತದ್ವಿಜಿಜ್ಞಾಸಸ್ವ" ಮೊದಲಾದ ಶ್ರುತಿಗಳ ಅರ್ಥವನ್ನು ಪ್ರತಿಪಾದಿಸುತ್ತಾ ಸಾಧನಚತುಷ್ಟಯಸಂಪನ್ನನಾದ ಮುಮುಕ್ಷುವು ಮುಕ್ತಿಗೋಸ್ಕರವಾಗಿ ಯಮನಿಯಮಾದ್ಯಷ್ಟಾಂಗಯೋಗಗಳಿಂದ ಮನಸ್ಸನ್ನು ಸ್ಥಿರಗೊಳಿಸಿ ಬ್ರಹ್ಮವಸ್ತುವನ್ನು ವೇದಾಂತವಾಕ್ಯಗಳಿಂದ ಚರ್ಚಿಸಿ ನಿಶ್ಚಯವಾಗಿ ತಿಳಿದುಕೊಳ್ಳಬೇಕು ಎಂದು ತಿಳಿಸುವುದು. ॥೩॥

"ಜನ್ಮಾದ್ಯಸ್ಯ ಯತಃ" ಇದು ಎರಡನೆಯ ಸೂತ್ರ. ಈ ಸೂತ್ರವು "ಯತೋವಾ ಇಮಾನಿ" ಎಂದು ಮೊದಲಾದ ವೇದಾಂತವಾಕ್ಯದ ಅರ್ಥವನ್ನು ವಿವರಿಸುತ್ತಾ, ಜಗತ್ತಿನ ಜನ್ಮಸ್ಥಿತಿಲಯಗಳಿಗೆ ಈಶ್ವರನೇ ಕಾರಣನು, ಜಗತ್ತು ಅಸತ್ಯವಾದುದರಿಂದ ಅದರ ಕಾರಣತ್ವವೂ ಅಸತ್ಯವು, ತನ್ನ ಬ್ರಹ್ಮಸ್ವರೂಪವನ್ನು ಬಿಡದೇ ಪರವಸ್ತುವು, ಹಗ್ಗವು ಹಾವಾಗಿ ಕಾಣುವ ಹಾಗೆ ಜಗತ್ತಿಗೆ ಕಾರಣವಾಗಿ ತೋರುವುದು. ಆದುದರಿಂದ ಶಿವನೇ ಜಗತ್ತಿಗೆ ಈಶ್ವರನು. ಆತನು ಅಣುವಲ್ಲ. ಕಾಲಾದಿಗಳಿಗೆ ಅಧೀನವಾದ ಕರ್ಮವೂ ಅಲ್ಲ ಎಂದು ತಿಳಿಸುವುದು. ॥೪॥

ಯೋನಿಃ ಶಾಸ್ತ್ರಸ್ಯ ವೇದಸ್ತದುಭಯಮನನಾದ್ಬ್ರಹ್ಮಣಃ ಪ್ರತ್ಯಭಿಜ್ಞಾ
ನಿಶ್ವಾಸಾದ್ವೇದಜಾಲಂ ಶಿವವರವದನಾದ್ಬ್ರಹ್ಮಣಾ ಪ್ರಾಪ್ತಮೇತತ್ ।
ತಸ್ಮಾತ್ತರ್ಕವಿತರ್ಕಕರ್ಕಶಧಿಯಾ ನಾತಿಕ್ರಮೇತ್ತಾಂ ಧಿಯಂ
ಸ್ವಾಮ್ನಾಯಕ್ರಿಯಯಾ ತದಾ ಪ್ರಕರಣೇ ಯೋ ನಿರ್ಮಹೇಶೋ ಧ್ರುವಂ ॥೩॥

ತತ್ತ್ವಸ್ಯಾಪಿ ಸಮನ್ವಯಾಚ್ಛ್ರುತಿಗಿರಾಂ ವಿಶ್ವೇಶ್ವರೇ ಚೋದನಾ
ಸಾ ಚಾನಿರ್ವಚನೀಯತಾಮುಪಗತಾ ವಾಚೋ ನಿವೃತ್ತಾ ಇತಿ ।
ಆತ್ಮೈವೈಷ ಇತೀವ ವಾಕ್ಯಸುವೃತಿರ್ವೃತ್ತಿಂ ವಿಧತ್ತೇ ಧಿಯಾ
ವೇದಾಂತಾದಿಷು ಏಕ ಏವ ಭಗವಾನ್ ಉಕ್ತೋ ಮಹೇಶೋ ಧ್ರುವಂ॥೪॥

ನಾಸದ್ವಾದೀಕ್ಷತೇ ಯಜ್ಜಡಮಿತಿ ಕರಣೈರ್ಗಂಧರೂಪಾದಿಹೀನಂ
ಶಬ್ದಸ್ಪರ್ಶಾದಿಹೀನಂ ಜಗದನುಗತಮಪಿ ತದ್ಬ್ರಹ್ಮ ಕಿಂ ರೂಪಮಿಷ್ಟೇ ।

---

"ಶಾಸ್ತ್ರಯೋನಿತ್ವಾತ್" ಇದು ಮೂರನೆಯ ಸೂತ್ರ. ಈ ಸೂತ್ರವು "ಅಸ್ಯಮಹತೋ ಭೂತಸ್ಯ ನಿಶ್ವಸಿತಂ" ಎಂದು ಮೊದಲಾದ ವೇದವಾಕ್ಯವನ್ನು ಪ್ರತಿಪಾದಿಸುತ್ತಾ, ಮನುಷ್ಯನಿಂದ ನಿಟ್ಟುಸಿರು ಅನಾಯಾಸವಾಗಿ ಹೊರಡುವಂತೆ ಪ್ರತಿಕಲ್ಪದಲ್ಲಿಯೂ ವೇದಗಳು ಈಶ್ವರನಿಂದ ಹೊರಡುವುವು. ಶಿವನ ಅನುಗ್ರಹದಿಂದ ಚತುರ್ಮುಖಬ್ರಹ್ಮನು ಆ ವೇದರಾಶಿಯನ್ನು ಪಡೆದು ಪ್ರಚುರ ಪಡಿಸುವನು. ಸಾಕ್ಷಾತ್ ಪರಮೇಶ್ವರನ ಮುಖದಿಂದಲೇ ಹೊರಟುದರಿಂದ ವೇದವು ನಿರ್ದುಷ್ಟವಾದುದು. ಮಹಾಪ್ರಮಾಣವು; ಅದನ್ನು ನೂರೆಂಟುಕುತರ್ಕಗಳಿಂದ ಅಪಾರ್ಥಗೊಳಿಸಬಾರದು ಎಂದು ತಿಳಿಸುವುದು. ॥೩॥

"ತತ್ತುಸಮನ್ವಯಾತ್" ಇದು ನಾಲ್ಕನೆಯ ವ್ಯಾಸಸೂತ್ರ. ಈ ಸೂತ್ರವು ಉಪಕ್ರಮೋಪಸಂಹಾರ ಮೊದಲಾದ ತಾತ್ಪರ್ಯಲಿಂಗಗಳಿಂದ ವೇದಾಂತವಾಕ್ಯಗಳಿಗೆ ಅದ್ವಿತೀಯಬ್ರಹ್ಮನಲ್ಲಿಯೇ ತಾತ್ಪರ್ಯವೆಂದೂ, ಬ್ರಹ್ಮವಸ್ತುವು ಇಂದ್ರಿಯಾದಿಗಳಿಗೆ ಅಗೋಚರವೆಂದೂ ಪ್ರತಿಪಾದಿಸುವುದು. ಅಂತಹ ಪರಬ್ರಹ್ಮವಸ್ತುವೇ ಶಿವನೆಂದೂ ಬೋಧಿಸುವುದು. ॥೪॥

"ಈಕ್ಷತೇರ್ನಾಶಬ್ದಂ" "ಗೌಣಶ್ಚೇನ್ನಾತ್ಮಶಬ್ದಾತ್" ಇವು ಐದನೆಯ ಮತ್ತು ಆರನೆಯ ಸೂತ್ರಗಳು. ಈ ಸೂತ್ರಗಳು "ಸಾಂಖ್ಯರು ಹೇಳುವಂತೆ ಜಡವಾದ

ಗೌಣಂ ಚೇದಪಿ ಜಾಡ್ಯತೋ ಜಗದಿದಂ ಯನ್ನಾಮರೂಪಾತ್ಮಕಂ
ತಚ್ಛಾತ್ರಾವಿಶದೀಶ್ವರೋರ್ಥವಚಸಾ ಮೋಕ್ಷಸ್ಯ ನಿಷ್ಠಾಕ್ರಮಃ ॥೭॥

ಹೇಯತ್ವಾವಚನಾಚ್ಚ ತಚ್ಛ್ರುತಿಗಿರಾಂ ಸ್ಥೂಲಂ ಪ್ರದೃಷ್ಟಂ ಭವೇತ್
ರೂಪಂ ನಾರೂಪತೋಽಪಿ ಪ್ರಕರಣವಚನಂ ವಾಗ್ವಿಕಾರಃ ಕಿಲೇದಂ ।
ಸ್ವಾಪ್ಯಾಯಾದಿತಿ ತದ್ಧ್ರುವಾಪಿ ಪರಮಾನಂದೋ ಯದೀತ್ಥಂ ಪರಃ
ಸಾಮಾನ್ಯಾಚ್ಚ ಗತೇರಥಾಪ್ಯನುಭವೇ ವಿದ್ಯೋತತೇ ಶಂಕರಃ ॥೮॥

---

ಪ್ರಕೃತಿಯು ಜಗತ್ಕಾರಣವಲ್ಲ. ಅಚೇತನವಸ್ತುವು ಸೃಷ್ಟಿಕರ್ತೃವಾಗಲಾರದು. ಅಲ್ಲದೇ ಶ್ರುತಿಯಲ್ಲಿ ಸೃಷ್ಟಿಕರ್ತೃವು ಸೃಷ್ಟಿಗೆ ಮೊದಲು ಆಲೋಚಿಸಿತೆಂದೂ, ಆತ್ಮನೆಂದೂ ಹೇಳಿರುವುದರಿಂದ ಅಚೇತನವಾದ ಪ್ರಕೃತಿಯು ಯೋಚಿಸಲಾರದು. ಮತ್ತು ಆತ್ಮವೂ ಆಗಲಾರದು. ಆದುದರಿಂದ ಅಚೇತನವಾದ ಪ್ರಕೃತಿಯು ಜಗತ್ಕಾರಣವಲ್ಲ. ಬ್ರಹ್ಮನೇ ಕಾರಣವು" ಎಂದು ವಿವರಿಸುವುವು. ತನ್ನಿಷ್ಠಸ್ಯ ಮೋಕ್ಷೋಪದೇಶಾತ್— ಇದು ಏಳನೆಯ ಸೂತ್ರ. ಇದರಲ್ಲಿ ಸೃಷ್ಟಿಕರ್ತೃವನ್ನು ಆರಾಧಿಸಿದರೆ ಮುಕ್ತಿಯು ದೊರಕುವುದೆಂದು ಶ್ರುತಿಯು ಹೇಳುವುದರಿಂದ ಜಡವಾದ ಪ್ರಕೃತಿಯ ಆರಾಧನೆಯಿಂದ ಮುಕ್ತಿಯು ದೊರಕಲಾರದುದರಿಂದಲೂ ಈಶ್ವರನೇ ಜಗತ್ಕಾರಣವು ಎಂದು ವಿವರಿಸಲ್ಪಟ್ಟಿದೆ. ॥೭॥

"ಹೇಯತ್ವಾವಚನಾತ್" "ಸ್ವಾಪ್ಯಯಾತ್" "ಗತಿಸಾಮಾನ್ಯಾತ್" ಇವು ಎಂಟು, ಒಂಭತ್ತು, ಹತ್ತು, ಹನ್ನೊಂದನೆಯ ವೇದಾಂತಸೂತ್ರಗಳು ಇವುಗಳಲ್ಲಿ ಮೊದಲನೆಯದು ಹೀಗೆ ವಿವರಿಸುವುದು. "ಲೋಕದಲ್ಲಿ ಜನಗಳು ದೂರದಲ್ಲಿನ ವಸ್ತುವನ್ನು ತೋರಿಸಬೇಕಾದರೆ ಅದರ ಸಮಿಾಪದಲ್ಲಿನ ಮತ್ತೊಂದು ವಸ್ತುವನ್ನು ಮೊದಲು ತೋರಿಸುವರು. ಆಮೇಲೆ ಅದಲ್ಲವೆಂದು ನಿಜವಾದುದನ್ನು ತೋರಿಸುವರು. ಹಾಗೆಯೇ ಶ್ರುತಿಯಲ್ಲಿ ಗೌಣವಾಗಿ ಪ್ರಕೃತಿಗೆ ಆತ್ಮತ್ವವನ್ನು ಹೇಳಿ, ಜಗತ್ಕಾರಣವೆಂದಿರುವುದು" ಎಂದು ಸಾಂಖ್ಯರು ಆಕ್ಷೇಪಿಸಿದರೆ ಅದಕ್ಕುತ್ತರವಾಗಿ ಹಾಗಾದರೆ ಇದು ಆತ್ಮವಲ್ಲ ಎಂದು ಆಮೇಲಾದರೂ ಶ್ರುತಿಯು ಹೇಳಬೇಕಿತ್ತು. ಹಾಗೆ ಹೇಳದೆ ಇದ್ದುದರಿಂದ ಪ್ರಧಾನವು ಆತ್ಮವಾಗಲಾರದು. ಜಗತ್ಕಾರಣವೂ ಆಗಲಾರದು ಎಂದು ವಿವರಿಸುವುದು. ಎರಡನೆಯ ಸೂತ್ರದ ವಿವರಣೆ ಹೀಗಿದೆ— ಶ್ರುತಿಯು ಹೀಗೆ ಆತ್ಮನಿಗೆ ಜಗತ್ಕಾರಣತ್ವವನ್ನು ಹೇಳಿ ಜೀವನಿಗೆ ಆ ಜಗತ್ಕಾರಣ

ಶ್ರುತತ್ವಾದ್ವೇದಾಂತಂ ಪ್ರತಿಪದವಚಃ ಕಾರಣಮುಮಾ
ಸನಾಥೋಽನಾಥಾನಾಂ ಸ ಚ ಕಿಲ ನ ಕಶ್ಚಿಜ್ಜನಿಭವಃ ।
ಸ ಏವಾನಂದಾತ್ಮಾ ಶ್ರುತಿಕಥಿತಕೋಶಾದಿರಹಿತಃ
ವಿಕಾರಃ ಪ್ರಾಚುರ್ಯಾನ್ನಹಿ ಭವತಿಕಾರ್ಯಂ ಚ ಕರಣಂ ॥೯॥

ತದ್ಧೇತುವ್ಯಪದೇಶತೋಽಪಿ ಶಿವ ಏವೇತಿಚಾನಂದಕೃತ್
ಮಂತ್ರೈರ್ವರ್ಣಕೃತಕ್ರಮೇಣ ಭಗವಾನ್ ಸತ್ಯಾದ್ಯನಂತೋಽಚ್ಯತೇ ।
ನೈರಂತರ್ಯಾನುಪತ್ತಿತೋಽಪಿ ಸುಖಿತಾ ಚಾನಂದಭೇದೋಽರ್ಥತಃ
ಕಾಮಾಚ್ಚಾನನುಭಾವತೋ ಬಹುಭವೇದ್ಧೃದಿ ಭಿದಾ ಚಾಯೇದ್ಭಯಂ
ಸಂಸೃತೇಃ ॥೧೦॥

---

ದಲ್ಲಿ ಸುಷುಪ್ತಿಯಲ್ಲಿ ಲೀನತೆಯನ್ನು ಹೇಳಿದೆ. ಚೇತನನಾದ ಜೀವನಿಗೆ ಚೇತನದಲ್ಲೇ ಲಯವು ಸಂಭವಿಸುವುದೇ ವಿನಾ ಅಚೇತನವಾದ ಪ್ರಕೃತಿಯಲ್ಲಿ ಯುಕ್ತವಾಗಲಾರದು. ಆದುದರಿಂದ ಈಶ್ವರನೇ ಜಗತ್ಕಾರಣನು. ಮೂರನೆಯದರ ವಿವರಣೆ ಹೀಗಿದೆ. "ಯಥಾಗ್ನೇ" ಮೊದಲಾದ ಅನೇಕ ಶ್ರುತಿಗಳು ಚೇತನನಾದ ವಸ್ತುವೇ ಜಗತ್ಕಾರಣವೆಂದು ಹೇಳಿರುವುದರಿಂದಲೂ ಚೇತನವಲ್ಲದ ಪ್ರಕೃತಿಯು ಜಗತ್ಕಾರಣವಲ್ಲ." ನಾಲ್ಕನೆಯದರ ವಿವರಣೆ—"ಸಕಾರಣಂ ಕಾರಣ ಇತ್ಯಾದಿ ಶ್ವೇತಾಶ್ವತರೋಪನಿಷತ್ತಿನಲ್ಲಿ ಸರ್ವಜ್ಞವಾದ ಚೇತನವಸ್ತುವೇ ಜಗತ್ಕಾರಣ"ವೆಂದು ಹೇಳಿರುವುದರಿಂದ ಸರ್ವಜ್ಞನಾದ ಈಶ್ವರನೇ ಜಗತ್ಕಾರಣನು. ಅಚೇತನವಾದ ಅಸರ್ವಜ್ಞವಾದ ಪ್ರಕೃತಿಯು ಜಗತ್ಕಾರಣವಲ್ಲ ಎಂದು ವಿವರಿಸಿದೆ. ॥೮॥

"ಆನಂದಮಯೋಽಭ್ಯಾಸಾತ್" "ಏಕಾರಶಬ್ದಾನ್ನೇತಿಚೇನ್ನ ಪ್ರಾಚುರ್ಯಾತ್"– ಇವು ಹನ್ನೆರಡು ಹದಿಮೂರನೆಯ ವ್ಯಾಸ ಸೂತ್ರಗಳು ; ಈ ಸೂತ್ರಗಳು ವೇದಾಂತವಾಕ್ಯದಲ್ಲಿನ ಆನಂದಮಯಪದಕ್ಕೆ ಅರ್ಥವು ಬ್ರಹ್ಮನೇ ; ಜೀವನಲ್ಲ. ಆನಂದಪದಗಳಿಂದ ಆವೃತ್ತಿಯನ್ನು ಮಾಡಿ ಆನಂದಸ್ವರೂಪನಾದ ಪರಮಾತ್ಮನನ್ನೇ ನಿರ್ದೇಶಿಸುವೆವು. ಆನಂದಮಯ-ಎಂಬಲ್ಲಿ ಮಯಟ್ ಪ್ರತ್ಯಯಕ್ಕೆ ಪ್ರಾಚುರತೆಯೇ ಅರ್ಥವೇ ವಿನಾ ವಿಕಾರವಲ್ಲ–ಎಂದು ಆನಂದಸ್ವರೂಪನಾದ ಪರಶಿವಸ್ವರೂಪವನ್ನೇ ವಿವರಿಸುವುವು. ॥೯॥

ತದ್ಧೇತುವ್ಯಪದೇಶಾತ್ (೧೪), ನೇತರೋಽನುಪಪತ್ತೇಃ (೧೬), ಮಾಂತ್ರವರ್ಣಿಕಮೇವಗೀಯತೇ (೧೫), ಭೇದವ್ಯಪದೇಶಾಚ್ಚ (೧೭), ಕಾಮಾಚ್ಚನಾನು

**ಪುಚ್ಛಂ ಬ್ರಹ್ಮ ಪ್ರತಿಷ್ಠಿತೇತಿ ವಚನಾಚ್ಛೇಷೀ ಮಹೇಶೋಽವ್ಯಯಃ**
**ಆಕಾಶಾಂತರತೋಽಪಿ ಭೌತಿಕಹೃದಾಕಾಶಾತ್ಮತಾವಾಕ್ಯತೋ ।**
**ಬ್ರಹ್ಮೈವ ಪ್ರತಿಭಾತಿ ಚೇದಕಲನೇ ಚಾಕಲ್ಪನಾನಲ್ಪತಃ ॥೧೧॥**

---

ಮಾನಾಪೇಕ್ಷಾ (೧೮), ಅಸ್ಮಿನ್ನಸ್ಯಚ ತದ್ಯೋಗಂ ಶಾಸ್ತಿ (೧೯), ಈ ವೇದಾಂತಸೂತ್ರ ಗಳು ಆತ್ಮನು ಆನಂದವನ್ನು ಕೊಡುವವನು-ಎಂದು ವಿವರಿಸುವ ಶ್ರುತಿಯನ್ನು ಹೇಳು ವುದರಿಂದಲೂ ಆನಂದಸ್ವರೂಪನೆಂದೇ ಆನಂದಮಯಪದಕ್ಕೆ ಅರ್ಥವನ್ನು ಹೇಳ ಬೇಕು. ಮಂತ್ರದಲ್ಲೂ ಸಹ ಆತ್ಮನನ್ನು ಆನಂದಸ್ವರೂಪನೆಂದು ಹೇಳುವುದರಿಂದ ಬ್ರಾಹ್ಮಣವಾಕ್ಯವಾದ ಆನಂದಮಯಶ್ರುತಿಗೂ ಆನಂದಸ್ವರೂಪನೆಂದೇ ಹೇಳಬೇಕು. "ಸೋಕಾಮಯತ" ಮೊದಲಾದ ಶ್ರುತಿಗಳೂ ಸಹ ವಿಕಾರವಿಲ್ಲದ ಬ್ರಹ್ಮವಸ್ತುವೇ ಕಾರಣವೆಂದು ಹೇಳುವುವು. "ರಸೋ ವೈ ಸಃ !"-ಇತ್ಯಾದಿ ಶ್ರುತಿಗಳು ಜೀವನಿಗೂ ಆನಂದಮಯನಿಗೂ ಭೇದವನ್ನು ಹೇಳುವುದರಿಂದಲೂ ಆನಂದಮಯನು ಜೀವ ನಲ್ಲ. ಬ್ರಹ್ಮನು, ಸೋಕಾಮಯತ-ಎಂದು ಆನಂದಮಯವಸ್ತುವಿಗೆ ಚೇತನಧರ್ಮ ವಾದ ಆಲೋಚನೆಯನ್ನು ಹೇಳುವುದರಿಂದ ಅಚೇತನವಾದ ಸಾಂಖ್ಯಪ್ರಕೃತಿಯೂ ಆನಂದಮಯವಲ್ಲ. ಕಾರಣವೂ ಅಲ್ಲ. "ಯದಾಹ್ಯೇವೈಷ"-ಮೊದಲಾದ ಶ್ರುತಿಯು ಜೀವನು ಬೇರೆ ಆನಂದಮಯನು ಬೇರೆ, ಆದುದರಿಂದ ಆನಂದಮಯ ಪದಕ್ಕೆ ಪರಮಾತ್ಮನೇ ಅರ್ಥವು-ಎಂದು ತಿಳಿಸುವುದು ॥೧೦॥

"ಅಂತಸ್ತದ್ಧರ್ಮೋಪದೇಶಾತ್," "ಆಕಾಶಸ್ತಲ್ಲಿಂಗಾತ್,"-ಇವು ಇಪ್ಪತ್ತು ಇಪ್ಪತ್ತೆರಡನೆಯ ಸೂತ್ರಗಳು. ಇವು "ಬ್ರಹ್ಮಪುಚ್ಛಂ ಪ್ರತಿಷ್ಠಾ" ಎಂಬ ವಾಕ್ಯಕ್ಕೆ ಅಭ್ಯಾಸಲಿಂಗದಿಂದ ಬ್ರಹ್ಮವಸ್ತುವೇ ಅರ್ಥವೆಂದು ಹೇಳಿದ ಬಳಿಕ "ಅಥ ಯ ಏಷೋಂತರಾದಿತ್ಯೇ"-ಮೊದಲಾದ ಶ್ರುತಿಯಲ್ಲಿ ಸಾರ್ವಾತ್ಮ್ಯವನ್ನು ಹೇಳುವುದ ರಿಂದ, ಪರಮೇಶ್ವರನೇ ಉಪಾಸ್ಯರೂಪದಿಂದ ಈ ಶ್ರುತಿಯಲ್ಲಿ ಹೇಳಲ್ಪಟ್ಟಿರುವನು. ಜೀವನಲ್ಲಿ ಜೀವನಿಗೆ ಸರ್ವಾತ್ಮತೆಯಾಗಲೀ ನಿರ್ದುಷ್ಟತೆಯಾಗಲೀ ಬರಲಾರದು" ಎಂದು ನಿರೂಪಿಸಿ ಮತ್ತೊಂದು ಸೂತ್ರವು "ಅಸ್ಯ ಲೋಕಸ್ಯ ಕಾಗತಿರಿತಿ" ಎಂದು ಮೊದಲಾದ ಶ್ರುತಿಯ ಅರ್ಥವನ್ನು ಪ್ರತಿಪಾದಿಸುತ್ತಾ ಈ ಶ್ರುತಿಯಲ್ಲಿನ ಆಕಾಶವು ಬ್ರಹ್ಮವಸ್ತುವು. ಆಕಾಶವಲ್ಲ. ಜಗತ್ಕಾರಣತ್ವ ಸರ್ವಜ್ಯೇಷ್ಠತ್ವ ಮೊದಲಾದ ಕಾರಣ ಗಳಿಂದ ಇಲ್ಲಿನ ಆಕಾಶಪದಕ್ಕೆ ಬ್ರಹ್ಮವಸ್ತುವೇ ಅರ್ಥವೆಂದು ವಿವರಿಸುವುದು. ॥೧೧॥

ಸುಷುಪ್ತ್ಯುತ್ಕ್ರಾಂತ್ಯೋರ್ವಾ ಸ ಹಿ ಖಲು ನ ಭೇದಃ ಪರಶಿವೇ
ಆತೋತ್ಥಾನಂ ದ್ವೈತೇ ನ ಭವತಿ ಪರೇ ವ್ಯೈ ವಿಲಯನೇ ।
ತದಂತರ್ಯತ್ಸೂಕ್ಷ್ಮಂ ಜಗದಿದಮನಾಕಾರಮರಸಂ .
ನ ಗಂಧಂ ನ ಸ್ಪರ್ಶಂ ಭವತಿ ಪರಮೇಶೇ ವಿಲಯನಂ ॥೧೨॥

ಅಧೀನಂ ಚಾರ್ಥಂ ತದ್ಭವತಿ ಪುನರೇವೇಕ್ಷಣಪರಂ ।
ಸ್ವತಂತ್ರೇಚ್ಛೋಃ ಶಂಭೋರ್ಸ ಖಲು ಕರಣಂ ಕಾರ್ಯಮಪಿ ಚ ॥೧೩॥

ಜ್ಞೇಯತ್ವಾವಚನಾಚ್ಚ ಶಂಕರಪರಾನಂದೇ ಪ್ರಮೋದಾಸ್ಪದೇ
ಪ್ರಜ್ಞಾನಂ ಹಿ ಕಾರಣಂ ಪ್ರಕೃತಿಕಂ ಪ್ರಶ್ನತ್ರಯಸ್ಯಾರ್ಥವತ್ ।
ನ ವಿಜ್ಞೇಯಂ ದೇಹಪ್ರವಿಲಯನಶತೋತ್ಥಾನಗಣನಾ ।
ಸಮ್ಯೃತ್ಯೋರ್ಮೃತ್ಯುಸ್ತದ್ಭವತಿ ಕಿಲ ಭೇದೇನ ಜಗತಃ ॥೧೪॥

---

"ಸುಷುಪ್ತ್ಯುತ್ಕ್ರಾಂತೋರ್ಭೇದೇನ" ಇದು ನಲವತ್ತುಮೂರನೆಯ ವ್ಯಾಸಸೂತ್ರ. ಈ ಸೂತ್ರಪ್ರಕರಣದಲ್ಲಿ "ಕತಮ ಆತ್ಮೇತಿ ಯೋಯಂ" ಎಂದು ಮೊದಲಾದ ಶ್ರುತಿಯ ಅರ್ಥವನ್ನು ಪ್ರತಿಪಾದಿಸುತ್ತಾ ಈ ಶ್ರುತಿಯಲ್ಲಿ ಹೇಳುವ ವಿಜ್ಞಾನಮಯ ಪುರುಷನು ಬ್ರಹ್ಮವಸ್ತುವೇ ವಿನಾ ಜೀವನಲ್ಲ. ಜೀವನಿಗೆ ಈ ಪುರುಷನೊಡನೆ ಸುಷುಪ್ತಿ ಮರುಣಾವಸ್ಥೆಗಳಲ್ಲಿ ಸಂಬಂಧವನ್ನು ಹೇಳಿರುವುದರಿಂದ ಜೀವನಲ್ಲ ಎಂದೂ "ಪ್ರಾಜ್ಞೇನಾತ್ಮನಾ" ಎಂದು ಹೇಳುವುದರಿಂದ ಸರ್ವಜ್ಞನಾದ ಪರಮೇಶ್ವರನೇ ಇಲ್ಲಿ ವಿಜ್ಞಾನಮಯ ಪುರುಷನೆಂದೂ ತಿಳಿಯಬೇಕು. ॥೧೨-೧೩॥

ಇದು ಸಾಂಖ್ಯರು ಹೇಳುವ ಪ್ರಧಾನ ಜಗತ್ಕಾರಣವಾದವನ್ನು ಖಂಡಿಸುವ ಪ್ರಕರಣವು. "ಜ್ಞೇಯತ್ವಾವಚನಾಚ್ಚ" ಎಂಬ ಸೂತ್ರವೂ ಸೇರಿ ಆರು ಸೂತ್ರಗಳು ಪ್ರಧಾನಕಾರಣತ್ವವನ್ನು ಖಂಡಿಸುವುವು. ಇವುಗಳ ಅಭಿಪ್ರಾಯವಿದು—ಸಾಂಖ್ಯರು ಹೇಳುವಂತೆ ಪ್ರಕೃತಿಯು ಜಗತ್ಕಾರಣವಾಗಲಾರದು. ಏಕೆಂದರೆ ಸಾಂಖ್ಯರು ಪ್ರಕೃತಿಯನ್ನು ಜ್ಞೇಯವಸ್ತುವನ್ನಾಗಿ ಹೇಳುವರು. ವೇದಾಂತಗಳಲ್ಲಿ ಕಾರಣವಸ್ತುವು ಜ್ಞಾನರೂಪವಾಗಿದೆ. ಮತ್ತು ಕಠೋಪನಿಷತ್ತಿನಲ್ಲೂ ಸಹ ಅಗ್ನಿ ಜೀವಪರಮಾತ್ಮರನ್ನು ಕುರಿತ ಪ್ರಶ್ನೆಗಳೂ ಅವಕ್ಕುತ್ತರವೂ ಇವೆಯೇ ವಿನಾ ಪ್ರಕೃತಿಯ ವಿಷಯವೇ ಇಲ್ಲ. ಆದುದರಿಂದ ಪ್ರಕೃತಿಯು ಜಗತ್ಕಾರಣವಲ್ಲ. ಎಂದು ತಿಳಿಯಬೇಕು. ॥೧೪॥

ಮಹದ್ವಚ್ಚಾಣೀಯೋ ಭವತಿ ಚ ಸಮೋ ಲೋಕಸುದೃಶಾ
ತಥಾ ಜ್ಯೋತಿಸ್ತ್ರ್ವೇಕಂ ಪ್ರಕರಣಪರಂ ಕಲ್ಪಿತವತಃ ।
ನ ಸಂಖ್ಯಾಭೇದೇನ ತ್ರಿಭುವನವಿಭಾವಾದತಿಕರಂ
ಸ್ವಭಾವೋಽಯಂ ಶಶ್ವನ್ಮುಖರಯತಿ ಮೋಹಾಯ ಜಗತಾಂ ॥೧೫॥

ಪ್ರಾಣಾದುದ್ಗತಪಂಚಸಂಖ್ಯಜನಿತಾ ತದ್ವ್ಯತ್ತ್ರಿವಚ್ಚಕ್ಷುಷಂ
ಶ್ರೋತ್ರಂ ಯನ್ಮನಸೋಽನ್ನಸಿದ್ಧಪರಮಾನಂದ್ಯೈಕಜನ್ಯಂ ಮಹಃ ।
ಜ್ಯೋತಿಷ್ಕಾರಣದರ್ಶಿತೇ ಚ ಕರಣೇ ಸತ್ತಾ ಸದಿತ್ಯನ್ವಯಂ
ಚಾಕರ್ಷಾ ಭವತಿ ಪ್ರಕರ್ಷಜನಕಂ ತ್ವಸ್ತೀತಿ ವಾಕ್ಯೋತ್ತರಂ ॥೧೬॥

---

"ಮಹದ್ವಚ್ಚ", ಚಮಸವದವಿಶೇಷಾತ್", "ಜ್ಯೋತಿರುಪಕ್ರಮಾತ್" "ಕಲ್ಪನೋಪದೇಶಾಚ್ಚ" "ನಸಂಖ್ಯೋಪಸಂಗ್ರಹಾದಪಿ ನಾನಾಭಾವಾದತಿರೇಕಾಚ್ಚ" ಇವು ಕೆಲವು ವ್ಯಾಸಸೂತ್ರಗಳು. ಈ ಸೂತ್ರಗಳೂ ಸಾಂಖ್ಯಮತವನ್ನು ಖಂಡಿಸುವುವು. ಸಾಂಖ್ಯರ ಜಗತ್ಕಾರಣವು ಮಹತ್ತಾದುದಲ್ಲ. ವೇದದಲ್ಲಿ ಜಗತ್ಕಾರಣ ವಸ್ತುವಿಗೆ ಮಹಚ್ಛಬ್ದವನ್ನು ಪ್ರಯೋಗಿಸಿರುವುದರಿಂದ ಮಹತ್ತಲ್ಲದ ಪ್ರಧಾನವು ಜಗತ್ಕಾರಣವಲ್ಲ. ಅಲ್ಲದೇ "ಅಜಾಮೇಕಾಂ" ಎಂಬ ಮಂತ್ರವೂ ಸಾಂಖ್ಯರ ಪ್ರಕೃತಿಯನ್ನು ಹೇಳುವುದಿಲ್ಲ. ಅದು ತೇಜಸ್ಸು ಜಲ ಪೃಥಿವೀರೂಪವಾದ ಪರಮಾತ್ಮನ ಮಾಯಾಪ್ರಕೃತಿಯನ್ನೇ ತಿಳಿಸುವುದು. ಏಕೆಂದರೆ "ಯದಗ್ನೇ ರೋಹಿತಂ" ಇತ್ಯಾದಿ ಮಂತ್ರದಲ್ಲಿ ರಕ್ತಾದಿವರ್ಣಗಳುಳ್ಳ ಅಗ್ನಿಜಲಪೃಥಿವಿಗಳನ್ನೇ ಹೇಳಿರುವುದು. ಆದುದರಿಂದ ಆ ಮಂತ್ರವು ಸಾಂಖ್ಯರ ಪ್ರಕೃತಿಯನ್ನು ಹೇಳುವುದಿಲ್ಲ. ಮತ್ತು "ಪಂಚಪಂಚಜನಾಃ" ಎನ್ನುವ ಮಂತ್ರವೂ ಸಾಂಖ್ಯರ ಇಪ್ಪತ್ತೈದು ತತ್ವಗಳನ್ನು ಹೇಳುವುದಿಲ್ಲ. ಏಕೆಂದರೆ ಐದೈದರ ಐದುಗುಂಪುಗಳಿದ್ದರೆ ಆಗಬಹುದಿತ್ತು, ಹಾಗಿಲ್ಲ. ಅಲ್ಲಿ ಆಕಾಶಾತ್ಮರು ಹೆಚ್ಚಾಗಿರುವುದರಿಂದಲೂ ಇಪ್ಪತ್ತೈದು ತತ್ವಗಳೆಂದು ಹೇಳಲಾಗುವುದಿಲ್ಲ. ॥೧೫॥

"ಪ್ರಾಣಾದಯೋ ವಾಕ್ಯಶೇಷಾತ್", "ಜ್ಯೋತಿಷೈಕೇಷಾಂ", "ಕಾರಣತ್ವೇನ", "ಸಮಾಕರ್ಷಾತ್" ಇವು ಕೆಲವು ವೇದಾಂತಸೂತ್ರಗಳು. ಈ ಸೂತ್ರಗಳಲ್ಲಿ ಮೊದಲನೆಯದು "ಪಂಚಪಂಚಜನಾಃ" ಎಂಬ ಮಂತ್ರಕ್ಕೆ ಪ್ರಾಣಾದಿಗಳು, ಚಕ್ಷುರಾದೀಂದ್ರಿಯಗಳು ಇವೇ ಅರ್ಥವೆಂದು ವಿವರಿಸುವುದು. ಮುಂದಿನ ಸೂತ್ರ

ಜಾಗ್ರತ್ಸ್ವಾವಚನೇನ ಜೀವಜಗತೋಃ ಭೇದಃ ಕಥಂ ಕಲ್ಪ್ಯತೇ
ಲಿಂಗಂ ಪ್ರಾಣಗತಂ ನ ಚೇಶ್ವರಪರಂ ಜ್ಯೋತಿಃ ಕಿಲೈಕ್ಯಪ್ರದಂ ।
ಅನ್ಯಾರ್ಥಾತ್ವತಿರೇಕತೋರ್ಥಗತಿಕಂ ಚಾಕಲ್ಪ್ಯ ಯದ್ವಾಕ್ಯತಃ
ಪ್ರಜ್ಞಾಮಿತ್ಯಪರಃ ಕ್ರಮುಸ್ಥಿತಿರಸೋ ವನ್ಯೋ ವದಂತಂ ಮೃಷಾ ॥೧೭॥

ಪ್ರಕೃತ್ಯೈವಂ ಸಿದ್ಧಂ ಭವತಿ ಪರಮಾನಂದವಿಧುರಂ
ಅಭಿಧ್ಯೋಪೋಶಾತ್ಸ ಭವತಿ ಉಭಯಾಮ್ನಾಯವಚನೈಃ ।

---

ಗಳು ವೇದದಲ್ಲಿ ಹೇಳಿದ ಸೃಷ್ಟಿಕ್ರಮದ ವಿರೋಧವನ್ನು ಪರಿಹರಿಸಿ ಬ್ರಹ್ಮವಸ್ತುವೇ ಜಗತ್ಕಾರಣವೆಂದು ನಿರ್ಧರಿಸುವುವು. ಶ್ರುತಿಯಲ್ಲಿ, ಉದಾಸೀನತೆಯಿಂದ ಸೃಷ್ಟಿಯಲ್ಲಿ ತಾತ್ಪರ್ಯವಿಲ್ಲದುದರಿಂದ ಕೆಲವೆಡೆಗೆ ಆಕಾಶಾದಿಯಾಗಿಯೂ, ಕೆಲವೆಡೆ ಅಗ್ನ್ಯಾದಿಯಾಗಿಯೂ ಹೇಳಿರುವುದು ಮತ್ತು ಆದರಿಂದ ಈ ಸೃಷ್ಟಿಪ್ರಪಂಚವು ಅವ್ಯವಸ್ಥೆಯಿಂದ ಕೂಡಿ ಅಸತ್ಯವಾಗಿದೆಯೆಂದೂ ತಿಳಿಯುಬಹುದು. ಇನ್ನು ಕೆಲವೆಡೆ "ಅಸದ್ವಾ ಇದಂ" ಎಂದು ಮೊದಲಾಗಿ ಶೂನ್ಯವೇ ಕಾರಣವೆನ್ನುವಂತೆ ಹೇಳಿದೆ, ಆದರೂ ಮುಂದೆ "ತತ್ಸದಾಸೀತ್" ಎಂದು ಮೊದಲಾಗಿ ಸತ್ತಾದ ವಸ್ತುವನ್ನೇ ಜಗತ್ಕಾರಣವಾಗಿ ಉಪಸಂಹರಿಸಿರುವುದರಿಂದ ಶೂನ್ಯವಾದಕ್ಕೆ ಪ್ರಸಕ್ತಿಯೇ ವೇದಾಂತಗಳಲ್ಲಿಲ್ಲ ಎಂದು ವಿವರಿಸಿರುವುವು. ॥೧೬॥

"ಜಗದ್ವಾಚಿತ್ವಾತ್", "ವಾಕ್ಯಾನ್ವಯಾತ್"—ಈ ಎರಡಧಿಕರಣಸೂತ್ರಗಳ ಅರ್ಥವು ಇದರಲ್ಲಿ ವಿವರಿಸಲ್ಪಟ್ಟಿದೆ. ಮೊದಲನೆಯದು "ಯೋ ವೈ ಬಾಲಾಕ ಏತೇಷಾಂ ಪುರುಷಾಣಾಂ ಕರ್ತಾ" ಎಂಬ ಶ್ರುತಿಯ ಅರ್ಥವನ್ನು ವಿವರಿಸುತ್ತಾ ಸರ್ವಕರ್ತೃತ್ವಾದಿಪರಮೇಶ್ವರಲಿಂಗಗಳು ಈ ಶ್ರುತಿಯಲ್ಲಿ ತೋರುವುದರಿಂದ ಇಲ್ಲಿನ ಕರ್ತೃವು ಪರಮೇಶ್ವರನೇ ಎಂದು ನಿರೂಪಿಸುವುದು. ಎರಡನೆಯದು "ಆತ್ಮಾ ವಾ ಅರೇ ದ್ರಷ್ಟವ್ಯಃ" ಮೊದಲನೆಯ ಶ್ರುತಿಯ ಅರ್ಥವನ್ನು ನಿರೂಪಿಸುತ್ತಾ ನಡುವೆ ಪೂರ್ವಪಕ್ಷಮತಾದಿಗಳನ್ನು ವಿವರಿಸಿ ಈ ಶ್ರುತಿಯಲ್ಲಿ ಆತ್ಮನು ಪರಮಾತ್ಮನೇ ವಿನಾ ಜೀವನಲ್ಲ, ಮುಂದೆ ಈ ಆತ್ಮದರ್ಶನದಿಂದ ಮುಕ್ತಿಲಾಭವನ್ನು ಹೇಳಿದೆ. ಜೀವಜ್ಞಾನದಿಂದ ಮುಕ್ತಿಯು ದೊರೆಯಲಾರದು. ಆದುದರಿಂದ ಇಲ್ಲಿನ ಆತ್ಮಪದಕ್ಕೆ ಪರಮಾತ್ಮನೇ ಅರ್ಥವೆಂದು ವಿವರಿಸುವುದು. ॥೧೭॥

"ಪ್ರಕೃತಿಶ್ಚ ಪ್ರತಿಜ್ಞಾದೃಷ್ಟಾಂತಾನುಪರೋಧಾತ್"—ಇದೊಂದು ಅಧಿಕರಣವು, ಇದರಲ್ಲಿ ಐದು ಸೂತ್ರಗಳಿವೆ, ಈ ಸೂತ್ರಗಳು ಬ್ರಹ್ಮನ ಜಗತ್ಕಾರಣತ್ವ

ಭವತ್ಯಾತ್ಮಾ ಕರ್ತಾ ಕೃತಿವಿರಹಿತೋ ಯೋನಿರಪಿ ಚ
ಪ್ರತಿಷ್ಠಾ ನಿಷ್ಠಾ ಚ ತ್ರಿಭುವನಗುರುಃ ಪ್ರೇಮಸದನಃ ॥೧೮॥

ಅಭಿಧ್ಯೋಪಾದೇಶಾತ್ಸ ಭವತಿ ಬಹುದೀಕ್ಷಾವಶತಃ
ಸಮಾಕ್ಷಾಚೋಭಾಭ್ಯಾಂ ಪ್ರಕೃತಿಜಡಮಾಮ್ನಾಯವಚನಾತ್ ।
ಅತೋ ಹ್ಯಾತ್ಮಾ ಶುದ್ಧಃ ಪ್ರಕೃತಪರಿಣಾಮೇನ ಜಗತಾಂ
ಮೃದೀವ ವ್ಯಾಪಾರೇ ಭವತಿ ಪರಿಣಾಮೇಷು ಚ ಶಿವಃ ॥೧೯॥

ಆನಂದಾಭ್ಯಾಸಯೋಗಾದ್ವಿಕೃತಜಗತಾನಂದಜಗತೋ
ಅತೋ ಹೇತೋರ್ಧರ್ಮೋ ನ ಭವತಿ ಶಿವಃ ಕಾರಣವರಃ ।
ಹಿರಣ್ಯಾತ್ಮಾಽದಿತ್ಯೇಽಕ್ಷಿಣಿ ಉದೇತೀಹ ಭಗವಾನ್
ನತೇಶ್ಚಾಧಾರಾಣಾಂ ಶ್ರವಣವಚನೈರ್ಗೋಪಿತಧಿಯಃ ॥೨೦॥

---

ವನ್ನು ವಿವರಿಸುತ್ತಾ ಶ್ರುತಿಯಲ್ಲಿನ ಪ್ರತಿಜ್ಞೆ‌ದೃಷ್ಟಾಂತಗಳಿಗನುಸಾರವಾಗಿ ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣವೆಂದೂ ನಿಮಿತ್ತಕಾರಣವೆಂದೂ ವಿವರಿಸುವುವು ಮಡಕೆಗೆ ಮಣ್ಣು ಪರಿಣಾಮಕಾರಣವು, ದಂಡವು ನಿಮಿತ್ತಕಾರಣವು. ಪರಿಣಾಮಕಾರಣವು ಕಾರ್ಯರೂಪವಾಗಿ ತೋರುವುದು. ಅದರಂತೆ ಬ್ರಹ್ಮನೇ ಜಗತ್ತಿನ ರೂಪವಾಗಿ ತೋರುವನು. ಆದುದರಿಂದ ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣನು. ದಂಡವು ಮಡಕೆಗೆ ಅಧಿಷ್ಠಾನವಾಗಿರುವಂತೆ ಬ್ರಹ್ಮನೂ ಜಗತ್ತಿಗೆ ಅಧಿಷ್ಠಾನನಾಗಿರುವುದ ರಿಂದ ಜಗತ್ತಿನ ನಿಮಿತ್ತಕಾರಣವೂ ಬ್ರಹ್ಮನೇ. ಹೀಗೆ ಅಭಿನ್ನನಿಮಿತ್ತೋಪಾದನ ಕಾರಣತೆಯು ಬ್ರಹ್ಮನಿಗಿದೆ. ॥೧೮॥

ಮತ್ತು "ತದೈಕ್ಷತ ಬಹುಸ್ಯಾಂ ಪ್ರಜಾಯೇಯ" ಎಂದು ಬ್ರಹ್ಮನಿಗೆ ಆಲೋಚನಾಕರ್ತೃತ್ವವನ್ನೂ ಪ್ರಕೃತಿತ್ವವನ್ನೂ ಹೇಳುವುದರಿಂದಲೂ, ಜಗತ್ತು ಬ್ರಹ್ಮನಿಂದಲೇ ಹುಟ್ಟಿ ಅವನಲ್ಲಿಯೇ ಲೀನವಾಗುವುದೆಂದು ತಿಳಿಸುವುದರಿಂದಲೂ, ತನ್ನನ್ನೇ ತಾನು ಜೀವರೂಪವಾಗಿ ಮಾಡಿಕೊಂಡನೆಂದು ಬೋಧಿಸುವುದರಿಂದಲೂ ಬ್ರಹ್ಮನು ಜಗತ್ತಿಗೆ ಪರಿಣಾಮಕಾರಣವೂ ನಿಮಿತ್ತಕಾರಣವೂ ಆಗಿರುವನು. ॥೧೯॥

"ಅಂತಸ್ತದ್ಧರ್ಮೋಪದೇಶಾತ್", "ಭೇದವ್ಯಪದೇಶಾಚ್ಚಾನ್ಯಃ" ಈ ಅಧಿಕರಣ ಸೂತ್ರಾರ್ಥವು ಹೀಗಿದೆ- ಈ ಸೂತ್ರಗಳು "ಅಥ ಯಏಷೋಂತರಾದಿತ್ಯೇ ಹಿರಣ್ಮಯಃ ಪುರುಷಃ; ಏಷೋಂತರಕ್ಷಿಣಿ ಪುರುಷಃ" ಈ ಶ್ರುತಿಗಳ ಅರ್ಥವನ್ನು

ಭೇದವ್ಯಪದೇಶತೋಽಸ್ತಿ ಭಗವಾನನ್ಯೋ ಭವೇತ್ಕಿಂ ತತೋ
ಆಕಾಶಾದಿ ಶರೀರಲಿಂಗನಿಯಮಾದ್ಬ್ರಾಹ್ಮ್ಯಂ ಹಿ ಸರ್ವಂ ತತಃ ।
ತಂ ಜ್ಯೋತಿಃ ಪರಮಂ ಮಹೇಶ್ವರಮುಮಾಕಾಂತಾಖ್ಯಶಾಂತಂ ಮಹೋ
ವೇದಾಂತೇಷು ನಿತಾಂತವಾಕ್ಯಕಲನೇ ಛಂದೋಽಭಿಧಾನಾದಪಿ ॥೨೧॥

ಭೂತಾದಿವ್ಯಪದೇಶತೋಽಪಿ ಭಗವತ್ಯಸ್ಮಿನ್ ಮಹೇಶೇ ಧ್ರುವಂ
ಯಸ್ಮಾದ್ಭೂತವರಾಣಿ ಜಾಯತ ಇತಿ ಶ್ರುತ್ಯಂಶಲೇಶಾಂಶತಃ ।

---

ವಿವರಿಸುತ್ತಾ ಇಲ್ಲಿನ ಪುರುಷನು ಈಶ್ವರನೇ ಹೊರತು ಜೀವನಲ್ಲ. ಈಶ್ವರನಿಗೆ ಸರ್ವಶಕ್ತಿಯೂ ಇರುವುದರಿಂದ ಆತನು ಹಿರಣ್ಮಯನಾಗಬಹುದು. ಮತ್ತು "ಆದಿತ್ಯೇತಿಷ್ಠನ್" ಈ ಶ್ರುತಿಯಲ್ಲಿ ಜೀವನಿಗೂ ಈಶ್ವರನಿಗೂ ಭೇದವನ್ನು ಹೇಳಿರುವುದರಿಂದ ಕರ್ಮವಶಾತ್ ಸೂರ್ಯಮಂಡಲವನ್ನು ಪಡೆದ ಜೀವಿಯು ಇಲ್ಲಿ ಉಪಾಸ್ಯನಲ್ಲ, ಪರಮೇಶ್ವರನೇ ಎಂದು ನಿರೂಪಿಸಿದೆ. ॥೨೦॥

"ಆಕಾಶಸ್ತಲ್ಲಿಂಗಾತ್" ಈ ಅಧಿಕರಣದ ಸೂತ್ರಾರ್ಥವು ಹೀಗಿದೆ. ಈ ಸೂತ್ರಗಳು "ಅಸ್ಯಲೋಕಸ್ಯ ಕಾಗತಿರಿತ್ಯಾಕಾಶ ಇತಿಹೋವಾಚ" ಎಂಬ ವಾಕ್ಯದ ಅರ್ಥವನ್ನು ವಿವರಿಸುತ್ತಾ ಇಲ್ಲಿ ಆಕಾಶಪದಾರ್ಥವು ಬ್ರಹ್ಮನೇ ವಿನಾ ಭೂತಾಕಾಶವಲ್ಲ. ಸರ್ವಲಯಾಧಾರತ್ವ, ನಿರತಿಶಯಮಹತ್ತ್ವ, ಪರಮಾಶ್ರಯತ್ವ ಲಿಂಗಗಳಿಂದ ಇಲ್ಲಿ ಆಕಾಶಪದಾರ್ಥವನ್ನು ಬ್ರಹ್ಮವಸ್ತುವೆಂದು ನಿರೂಪಿಸುವುವು. ಮತ್ತು "ಜ್ಯೋತಿಶ್ಚರಣಾಭಿಧಾನಾತ್" ಈ ಅಧಿಕರಣದ ಅಭಿಪ್ರಾಯವಿದು. ಈ ಸೂತ್ರಗಳು "ಪರೋದಿವೋಜ್ಯೋತಿರ್ದೀಪ್ಯತೇ" ಎಂಬ ಶ್ರುತಿಯ ಅರ್ಥವನ್ನು ವಿವರಿಸುತ್ತಾ ಇಲ್ಲಿನ ಜ್ಯೋತಿಃ—ಪದಾರ್ಥವು ಆದಿತ್ಯಾದಿ ತೇಜಸ್ಸಲ್ಲ, "ತ್ರಿಪಾದ ಸ್ಯಾಮೃತಂ ದಿವಿ" ಎಂಬ ಶ್ರುತಿಗನುಸಾರವಾಗಿ ಬ್ರಹ್ಮನಿಗೆ ಕಲ್ಪಿತವಾದ ಪಾದವನ್ನು ಹೇಳಿರುವುದರಿಂದ ಬ್ರಹ್ಮವಸ್ತುವೇ ಜ್ಯೋತಿಃಪದಾರ್ಥವು. ಮತ್ತು "ಗಾಯತ್ರೀ ವಾ ಇದಂ ಸರ್ವಂ" ಎಂಬ ಮಂತ್ರದಲ್ಲಿ ಛಂದಸ್ಸಾದ ಗಾಯತ್ರಿಯನ್ನು ಹೇಳಿದ್ದರೂ ಅಕ್ಷರಯೋಜನೆಯ ರೂಪವಾದ ಗಾಯತ್ರಿಗೆ "ಇದಂ ಸರ್ವಂ" ಎಂಬ ಸರ್ವಾತ್ಮಕತೆಯಿಲ್ಲದುದರಿಂದ ಗಾಯತ್ರ್ಯಂತರ್ಗತಬ್ರಹ್ಮವಸ್ತುವೇ ಇಲ್ಲಿ ಗಾಯತ್ರೀ ಪದಕ್ಕೆ ಅರ್ಥವೆಂದೂ ವಿವರಿಸುವುವು. ॥೨೧॥

"ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿ ಶ್ರುತಿಯು ಬ್ರಹ್ಮವಸ್ತುವಿನಿಂದಲೇ ಜಗದುತ್ಪತ್ತಿಯನ್ನು ಹೇಳುವುದು. "ಪ್ರಾಣಸ್ತಥಾನು

ವಿಶ್ವಂ ವಿಶ್ವಪತೇರಭೂತ್ತದುಭಯಂ ಪ್ರಾಮಾಣ್ಯತೋ ದರ್ಶನಾತ್
ಪ್ರಾಣಸ್ಯಾನುಗಮೊತ್ಸ ಏವ ಭಗವಾನನ್ಯಃ ಕಥಂ ವಿದ್ಯತೇ ॥೨೨॥

ನ ವಕ್ತುಶ್ಚಾತ್ಮಾ ವೈ ಸ ಖಲು ಶಿವಭೂಮಾ ಹಿ ವಿಹಿತಃ
ತಥೈವಾಯುರ್ದೇಹೇ ಅರನಿವಹ ಚಕ್ರಗಮುಹೋ ।
ಅದೃಶ್ಯೋಽಪ್ಯಾತ್ಮಾ ವೈ ಸ ಹಿ ಸುದೃಶತಃ ಶಾಸ್ತ್ರನಿವಹೈಃ
ಶಿವೋ ದೇವೋ ವಾಮೋ ಮುನಿರಪಿ ಚ ಸಾರ್ವಾತ್ಮ್ಯಮಭಜತ್ ॥೨೩॥

ಪ್ರಸಿದ್ಧಃ ಸರ್ವತ್ರ ಶ್ರುತಿಷು ವಿಧಿವಾಕ್ಯೈರ್ಭಗವತೋ
ಮಹಾಭೂತೈರ್ಜಾತಂ ಜಗದಿತಿ ಚ ತಜ್ಜಾದಿವಚನೈಃ ।

---

ಗಮಾತ್" ಈ ಸೂತ್ರವು "ಸಹೋವಾಚ ಪ್ರಾಣೋಸ್ಮಿ" ಇತ್ಯಾದಿ ಶ್ರುತಿಯ ಅರ್ಥವನ್ನು ವಿವರಿಸುತ್ತಾ ಇಲ್ಲಿನ ಪ್ರಾಣಶಬ್ದಕ್ಕೆ ಬ್ರಹ್ಮವಸ್ತುವೇ ಅರ್ಥವು. ಪ್ರಾಣವಲ್ಲ. ಹಿತತಮತ್ವ, ಕರ್ಮಕ್ಷಯತ್ವ ಪ್ರಜ್ಞಾತ್ಮತ್ವಾದಿಗಳ ಸಂಬಂಧವು ಪ್ರಾಣಕ್ಕೆ ಸಂಭವಿಸಲಾರದು. ಆದುದರಿಂದ ಇಲ್ಲಿ ಪ್ರಾಣಪದಾರ್ಥವು ಬ್ರಹ್ಮವಸ್ತುವೇ ಎಂದು ನಿರೂಪಿತವಾಗಿರುವುದು. ॥೨೨॥

"ನವಕ್ತುಶ್ಚಾತ್ಮೋಪದೇಶಾದಧ್ಯಾತ್ಮಸಂಬಂಧಭೂಮಾಹ್ಯಸ್ಮಿನ್" "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್" ಇವೆರಡು ಪ್ರತರ್ದನಾಧಿಕರಣದ ಸೂತ್ರಗಳು. ಈ ಅಧಿಕರಣಗಳಲ್ಲಿ ಇಂದ್ರನ ಉಪದೇಶವಿದೆ, ಇಂದ್ರನು ಪ್ರತರ್ದನನಿಗೆ "ನಾನೇ ಪ್ರಾಣ" ಎಂದು ಮೊದಲಾಗಿ ಹೇಳಿದರೂ ಇಲ್ಲಿ ಪರಮಾತ್ಮಸಂಬಂಧವೇ ಹೆಚ್ಚಾಗಿ ತೋರುವುದರಿಂದ ಇಂದ್ರಶರೀರಾಂತರ್ಯಾಮಿ ಪರಮಾತ್ಮನೇ ಇಲ್ಲಿ ಪ್ರಾಣಶಬ್ದಾರ್ಥವು. ಮತ್ತು ಬ್ರಹ್ಮಜ್ಞಾನಿಯಾದ ವಾಮದೇವಮುನಿಯು "ನಾನೇ ಸೂರ್ಯನು, ನಾನೇ ಮನುವಾಗಿದ್ದೆನು" ಎಂದು ತಾನೇ ಬ್ರಹ್ಮನೆಂಬ ಅನುಭವದಿಂದ ಸರ್ವಾತ್ಮತ್ವವನ್ನು ಪ್ರದರ್ಶಿಸಿದಂತೆ ಇಲ್ಲಿ ಇಂದ್ರನೂ ನಾನೇ ಪ್ರಾಣನು ಎಂದು ಮೊದಲಾಗಿ ಹೇಳಿಕೊಂಡಿರುವನು. ಆದುದರಿಂದ ಇಲ್ಲಿ ಬ್ರಹ್ಮವಸ್ತುವೇ ಪ್ರಾಣ ಶಬ್ದಾರ್ಥವು. ॥೨೩॥

"ಸರ್ವತ್ರಪ್ರಸಿದ್ಧೋಪದೇಶಾತ್" "ವಿವಕ್ಷಿತಗುಣೋಪಪತ್ತೇಶ್ಚ"— ಈ ಸೂತ್ರಗಳು ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತಂ" "ಮನೋಮಯ" ಈ ಶ್ರುತಿಗಳ ಅರ್ಥವನ್ನು ವಿವರಿಸುತ್ತಾ ಮನೋಮಯತ್ವಾದಿ ಜೀವಲಿಂಗಗ

ಅತೋಣೀಯಾನ್ ಜಾಯಾನಪಿ ದ್ವಿವಿಧಭೇದವ್ಯಪಗತಾಃ
ವಿವಕ್ಷಾ ನೋಽಸ್ತೀತಿ ಪ್ರಥಯತಿ ಗುಣೈರೇವ ಹಿ ಶಿವಃ ॥೨೪॥

ಸಂಭೋಗಪ್ರಾಪ್ತಿರೇವ ಪ್ರಕಟಜಗತಃ ಕಾರಣತಯಾ
ಸದಾ ವ್ಯೋಮ್ನ್ಯೇವೇತ್ಥಂ ಭವತಿ ಹೃದಯೇ ಸರ್ವಜಗತಾಂ ।
ಅತೋ ತ್ವಂ ವೈ ಶರ್ವಶ್ಚರಮುಚರಭೂತಂ ಜಗದಿದಂ
ಮಹಾಮೃತ್ಯೂದಂಶೋ ಭವತಿ ಶಿಖರಂ ನಾದ ಇತಿ ಚ ॥೨೫॥

ಪ್ರಕರಣವಚನೇನ ವೇದಜಾತೇ ಭಗವತಿ ಭವನಾಶನೇ ಮಹೇಶೇ ।
ಪ್ರವಿಶತಿ ಶಿವ ಏವ ಭೋಗಭೋಕ್ತೃನಿಯಮನದರ್ಶನತೋ ಹಿ ವಾಕ್ಯ
ಜಾತಂ ॥೨೬॥

---

ಳಿದ್ದರೂ ಮುಂದೆ ಸತ್ಯಸಂಕಲ್ಪತ್ವ, ಸರ್ವಾತ್ಮತ್ವ, ಅಪಹತಪಾಪತ್ವಾದಿ ಪರಮಾತ್ಮ ಲಿಂಗಗಳಿರುವುದರಿಂದ ಈ ಶ್ರುತಿಗಳಲ್ಲಿ ಪರಮಾತ್ಮನನ್ನೇ ಉಪಾಸ್ಯಭಾವದಿಂದ ಹೇಳಿರುವುದೆಂದು ನಿರ್ಣಯಿಸುವುವು. ॥೨೪॥

"ಸಂಭೋಗಪ್ರಾಪ್ತಿರಿತಿಚೇನ್ನ ವೈಶೇಷ್ಯಾತ್" "ಪ್ರಕರಣಾಚ್ಚ" "ಅತ್ತಾ ಚರಾಚರಗ್ರಹಣಾತ್" ಇವು ಮೂರು ವ್ಯಾಸಸೂತ್ರಗಳು. ಮೊದಲನೆಯದು ಪರಮಾತ್ಮ ಸರ್ವವ್ಯಾಪಕನಾದರೂ ವ್ಯಾಪಕವಾದ ಆಕಾಶಕ್ಕೆ ಯಾವ ದಾಹಾದಿ ಸಂಬಂಧವೂ ಇಲ್ಲದಿರುವಂತೆ ಜೀವನದ ಸುಖದುಃಖಸಂಬಂಧವಿಲ್ಲವೆಂದು ತಿಳಿಸುವುದು. ಎರಡು ಮೂರನೆಯವು "ಯಸ್ಯ ಬ್ರಹ್ಮ ಚ ಕ್ಷತ್ರಂ ಚ" ಎಂಬ ಮಂತ್ರದ ಅರ್ಥ ವನ್ನು ವಿವರಿಸುತ್ತಾ ಚರಾಚರಪ್ರಪಂಚವೆಲ್ಲವನ್ನೂ ಭಕ್ಷಿಸುವ ವಸ್ತುವೆಂದು ಹೇಳು ವುದರಿಂದಲೂ ಇದು ಪರಮಾತ್ಮಪ್ರಕರಣವಾದುದರಿಂದಲೂ ಈ ಮಂತ್ರದಲ್ಲಿ ಪರಮಾತ್ಮನೇ ಸರ್ವಭಕ್ಷಕನಾಗಿ ಹೇಳಲ್ಪಟ್ಟಿರುವನೆಂದು ವಿವರಿಸುವುವು. ॥೨೫॥

"ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್" "ವಿಶೇಷಣಾತ್" ಈ ಸೂತ್ರಗಳು "ಋತಂ ಪಿಬಂತೌ ಸುಕೃತಸ್ಯ ಲೋಕೇ" ಎಂಬ ವೇದವಾಕ್ಯದ ಅರ್ಥವನ್ನು ವಿವರಿಸುತ್ತಾ, ಹೃದಯ ಗುಹೆಯಲ್ಲಿ ಪ್ರವೇಶಿಸಿರುವ ಈ ಪರಮ ಪುರುಷರು ಜೀವಪರಮಾತ್ಮರೇ ವಿನಾ ಬುದ್ಧಿಜೀವರಲ್ಲ. ಆತ್ಮಶಬ್ದವನ್ನುಪಯೋಗಿಸಿ ಚೇತನತ್ವವನ್ನು ಹೇಳಿರುವುದರಿಂದ ಅಚೇತನವಾದ ಬುದ್ಧಿಯನ್ನು ಬಿಟ್ಟು ಜೀವ ಪರಮಾತ್ಮರೇ ಇಲ್ಲಿ ಹೇಳಲ್ಪಟ್ಟಿರುವರು, ಎಂದು ತಿಳಿಯಬೇಕು. ಮತ್ತು ಮುಂದೆ

ವಿಶೇಷಣೈಃ ಶಂಕರನೋವ ನಿತ್ಯಂ ದ್ವಿಧಾ ವದತ್ಯೇವಮುಪಾಧಿಯೋಗಾತ್ ।
ಅತೋಂತರಾವಾಕ್ಯಪದ್ಯೈಃ ಸಮರ್ಥಿತಃ ಸ್ಥಾನಾದಿಯೋಗ್ಯೈರ್ಭಗವಾನುಮಾ
ಪತಿಃ ॥೨೭॥

ಸುಖಾಭಿಧಾನಾತ್ಸುಖ ಏವ ಶಂಭುಃ ಕಂ ಬ್ರಹ್ಮ ಖಂ ಬ್ರಹ್ಮ ಇತಿ ಶ್ರುತೀರಿತಃ।
ಶ್ರುತೋಪವಾಕ್ಯೋಪನಿಷತ್ಪ್ರಚಾರತಃ ಗತಿಂ ಪ್ರಪದ್ಯೇತ ಬುಧೋಪ
ವಿದ್ಯಯಾ ॥೨೮॥

ಅನವಸ್ಥಿತಿತೋಪಿ ನೇತರೋ ಭಗವಾನೇವ ಸ ಚಕ್ಷುಷಿ ಪ್ರಬುದ್ಧ್ಯೇತ್ ।
ಭಯಭೀತಾಃ ಕಿಲ ಯಸ್ಯ ಸೋಮಸೂರ್ಯಾನಲವಾಯ್ವಂಬುಜಸಂಭವಾ
ಭ್ರಮಂತಿ ॥೨೯॥

ಅಂತರ್ಯಾಮಿತಯೈವ ಲೋಕಮಖಿಲಂ ಜಾನಾತ್ಯುಮಾಯಾಃ ಪತಿಃ ।
ಭೂತೇಷ್ವಂತರಗೋಪಿ ಭೂತನಿವಹಾ ನೋ ಜಾನತೇ ಶಂಕರಂ ॥೩೦॥

---

"ಆತ್ಮಾನಂ ರಥಿನಂ ವಿದ್ಧಿ" ಸೋಧ್ವನಃಪಾರಮಾಪ್ನೋತಿ—ಎಂದು ಮೊದಲಾಗಿ ಗಂತೃಗಂತವ್ಯರೂಪದಿಂದಲೂ ಮಂತೃಮಂತವ್ಯರೂಪದಿಂದಲೂ ಜೀವಪರಮಾತ್ಮರನ್ನೇ ಹೇಳಿರುವುದರಿಂದ ಇಲ್ಲಿಯೂ ಜೀವಪರಮಾತ್ಮರನ್ನೇ ಹೇಳಬೇಕು – ಎಂದು ನಿರೂಪಿಸುವುವು. ॥೨೬॥

"ಅಂತರ ಉಪಪತ್ತೇಃ"—ಮೊದಲಾದ ಐದು ಸೂತ್ರಗಳು "ಏಷೋಕ್ಷಿಣಿ ಪುರುಷೋ ದೃಶ್ಯತೇ ಏತದಮೃತಮಭಯಂ—ಎಂಬ ಶ್ರುತ್ಯರ್ಥವನ್ನು ನಿರ್ಣಯಿಸುತ್ತಾ ಅಮೃತತ್ವ ಅಭಯತ್ವ-ಮೊದಲಾದ ಪರಮೇಶ್ವರಲಿಂಗಗಳಿಂದಲೂ, "ಕಂ ಬ್ರಹ್ಮ ಖಂ ಬ್ರಹ್ಮ" ಎಂದು ಸುಖಸ್ವರೂಪತ್ವವನ್ನು ತಿಳಿಸಿರುವುದರಿಂದಲೂ, ಬ್ರಹ್ಮಜ್ಞಾನಿಯು ಈ ವಸ್ತುವನ್ನು ಪಡೆಯುವನೆಂದು ಹೇಳಿರುವುದರಿಂದಲೂ, ಈ ವಸ್ತುವಿನ ಭಯದಿಂದ ಸೂರ್ಯಚಂದ್ರಾದಿಗಳು ಚಲಿಸುವರೆಂದು ಹೇಳಿರುವುದರಿಂದಲೂ "ಅಕ್ಷಿಣಿ ಪುರುಷ" ಎನ್ನುವಲ್ಲಿ ಪುರುಷನು ಪರಮೇಶ್ವರನೇ ಹೊರತು ಇತರರಾದ ಜೀವಾದಿಗಳಲ್ಲ—ಎಂದು ನಿರೂಪಿಸುವುವು. ॥೨೭-೨೮-೨೯॥

"ಅಂತರ್ಯಾಮ್ಯಧಿದೈವಾದಿಷು ತದ್ಧರ್ಮವ್ಯಪದೇಶಾತ್" ಈ ಅಧಿಕರಣದ ಮೂರು ಸೂತ್ರಗಳು "ಸರ್ವಾಣಿ ಭೂತಾನಿ ಯೋಂತರೋ ಯಮಯತಿ, ಏಷ ತ ಅಂತರ್ಯಾಮ್ಯಮೃತಃ" ಎಂಬ ಮಂತ್ರದ ಅರ್ಥವನ್ನು ನಿರ್ಣಯಿಸುತ್ತಾ ಇಲ್ಲಿನ

ನ ತತ್ಸ್ಮೃತ್ಯಾ ಧರ್ಮೈರಭಿಲಪಸತೋ ಭೇದವಿಧುರಂ
ನ ಶಾರೀರಂ ಭೇದೇ ಭವತಿ ಅಗಜಾನಾಯಕವರೇ ।
ಅದೃಶ್ಯತ್ವಾದ್ಧರ್ಮೈರ್ನ ಖಲು ಭಗವಾನನ್ಯದಿತಿ ಚಾ
ಪವಾದಾದಿತ್ಥಂ ವ್ಯಾಮತಿರಪಿ ಚ ಭೇದಪ್ರಕಲನೇ ॥೩೦॥

ಭೇದಾದೇಶ್ಚ ವಿಶೇಷಣಂ ಪರಶಿವೇ ರೂಪಂ ನ ನಾಮಪ್ರಭಾ ।
ಭಾವೋ ನಾ ಭವತಿ ಪ್ರಭಾವಿರಹಿತಂ ಬ್ರಹ್ಮಾತ್ಮನಾಚಾಹ ತತ್॥೩೨॥

ಸ್ಮೃತಂ ಮಾನಂ ಶಂಭೋರ್ಭಗವತಿ ನ ತತ್ಸಾಧನತಯಾ
ಪ್ಯತೋ ದೈವಂ ಭೂತಂ ನ ಭವತಿ ಚ ಸಾಕ್ಷಾತ್ಪರಶಿವೇ ।

---

ಅಂತರ್ಯಾಮಿಯು ಓರ್ವ ದೇವನೇ ? ಯೋಗಿಯೇ ? ಪ್ರಧಾನವೇ ? ಜೀವನೇ ? ಎಂದು ನಾಲ್ಕು ವಿಧವಾಗಿ ಶಂಕಿಸಿ ಪರಮೇಶ್ವರನೇ ಅಂತರ್ಯಾಮಿಯು. ಅದೃಷ್ಟತ್ವ ಅವಿಜ್ಞೇಯತ್ವಾದಿ ಧರ್ಮಗಳು ದೇವಾದಿಗಳಿಗೆ ಸಂಭವಿಸುವುದಿಲ್ಲ. ಸರ್ವನಿಯಂತೃತ್ವವೂ ಮಿಕ್ಕವುಗಳಿಗಿಲ್ಲ. ದ್ರಷ್ಟೃತ್ವಧರ್ಮವನ್ನು ಹೇಳಿರುವುದರಿಂದ ಸಾಂಖ್ಯರ ಪ್ರಧಾನವೂ ಅಲ್ಲ. " ಯ ಆತ್ಮನಿ ತಿಷ್ಠನ್ " ಎಂದು ಜೀವನ ಭೇದವನ್ನು ಹೇಳಿರುವುದರಿಂದ ಜೀವನೂ ಅಲ್ಲ. ಎಂದು ನಿರ್ಣಯಿಸಿ ಪರಮೇಶ್ವರನೇ ಇಲ್ಲಿ ಅಂತರ್ಯಾಮಿಯೆಂದು ನಿರೂಪಿಸುವುವು. ॥೩೦॥

" ಅದೃಶ್ಯತ್ವಾದಿಗುಣಕೋ ಧರ್ಮೋಕ್ತೇಃ " ಈ ಅಧಿಕರಣದ ಮೂರು ಮೂರು ಸೂತ್ರಗಳು " ಯತ್ತದ ದೃಶ್ಯಂ . . . . ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ " ಎಂಬ ಶ್ರುತಿಯ ಅರ್ಥವನ್ನು ನಿರ್ಣಯಿಸುತ್ತಾ, ಇಲ್ಲಿನ ಭೂತಯೋನಿಯು ಜೀವನೇ, ಪ್ರಧಾನವೇ, ಪರಮೇಶ್ವರನೇ, ಎಂದು ಶಂಕಿಸಿ ಮುಂದೆ ಹೇಳುವ ಸರ್ವಜ್ಞತ್ವಾದಿಗಳಿಲ್ಲದುದರಿಂದಲೂ ದಿವ್ಯತ್ವಾದಿ ವಿಶೇಷಣಗಳಿಲ್ಲದುದರಿಂದಲೂ ಜೀವನಲ್ಲವೆಂದೂ, " ಅಕ್ಷರಾತ್ಪರತಃ ಪರಃ " ಎಂದು ಅಕ್ಷರಪದಾರ್ಥವಾದ ಪ್ರಧಾನಕ್ಕಿಂತ ಭಿನ್ನವಾಗಿ ಹೇಳಿರುವುದರಿಂದ ಸಾಂಖ್ಯರಪ್ರಧಾನವಲ್ಲವೆಂದೂ, " ಅಗ್ನಿರ್ಮೂರ್ಧಾ " ಇತ್ಯಾದಿ ಮಂತ್ರದಿಂದ ಸರ್ವಾತ್ಮಕತ್ವರೂಪವಾದ ಪರಮೇಶ್ವರಸ್ವರೂಪವನ್ನು ಹೇಳಿರುವುದರಿಂದಲೂ ಇಲ್ಲಿ ಭೂತಯೋನಿಯು ಪರಮೇಶ್ವರನೇ ಎಂದು ನಿರೂಪಿಸಿರುವುವು. ॥೩೧-೩೨॥

" ವೈಶ್ವಾನರಃ ಸಾಧಾರಣಶಬ್ದವಿಶೇಷಾತ್ " ಈ ಅಧಿಕರಣದ ಎಂಟು ಸೂತ್ರಗಳು " ಕೋ ನ ಆತ್ಮಾ " " ಆತ್ಮಾನಮೇವೇಮಂ ವೈಶ್ವಾನರಂ " ಎಂಬ

ಅಭಿವ್ಯಕ್ತೇ ಚಾನ್ಯಃ ಸ್ಮೃತಿರಪಿ ತಥಾನ್ಯೋಽಪಿ ಮನುತೇ
ತಥಾ ಸಂಪತ್ತಿಂ ವೈ ಭುವಿ ಭವತಿ ಕಿಂ ಶಂಭುಕಲನೇ ॥೩೩॥

ಯಂ ಮುಕ್ತಿವ್ಯಪದೇಶತಃ ಶ್ರುತಿಶಿಖಾಶತೈಃ ಕಲ್ಪಿತೇ
ಭಿದ್ಯೇತ್ ಗ್ರಂಥಿರಪಿ ಪ್ರಕೀರ್ಣವಚಸಾ ಸಾಕ್ಷ್ಯೇವ ಬಾಹ್ಯಂತರಾ ।
ಶಬ್ದೋ ಬ್ರಹ್ಮತಯೈವ ನ ಪ್ರಭವತೇ ಪ್ರಾಣಪ್ರಭೇದೇನ ಚ
ತಜ್ಞಾಪ್ಯುತ್ಕ್ರಮಣಸ್ಥಿತಿಪ್ರವಿಲಯೇ ಭುಂಕ್ತೇ ಪ್ಯಸೌ ಶಂಕರಃ ॥೩೪

ತಂ ಭೂಮಾ ಸಂಪ್ರಸಾದಾಚ್ಛಿವಮಜರಮಾತ್ಮಾನಮಧುನಾ
ಶೃಣೋತೀಕ್ಷೇದ್ವಾಪಿ ಕ್ಷಣಮಪಿ ತಥಾನ್ಯಂ ನ ಮನುತೇ ।
ತಥಾ ಧರ್ಮಾಪತ್ತಿರ್ಭವತಿ ಪರಮಾಕಾಶಜನಿತಂ
ಪ್ರಶಸ್ತಂ ವ್ಯಾವೃತ್ತಂ ದಹರಮಪಿ ದಧ್ಯಾದ್ವ್ಯಪದಿಶತ್ ॥೩೫॥

---

ಮಂತ್ರದ ಅರ್ಥವನ್ನು ನಿರ್ಣಯಿಸುತ್ತಾ, ಇಲ್ಲಿನ ವೈಶ್ವಾನರನಾರು ? ಜಾಠರಾಗ್ನಿಯೇ ? ಭೂತಾಗ್ನಿಯೇ ? ಜೀವನೇ ? ಪರಮೇಶ್ವರನೇ ? ಎಂದೈದುಬಗೆಯಾಗಿ ಶಂಕಿಸಿ ಜಾಠರಾದಿ ನಾಲ್ಕು ವಸ್ತುಗಳಲ್ಲಿಲ್ಲದ, ಪರಮೇಶ್ವರನಲ್ಲಿ ಮಾತ್ರವೇ ಇರುವ ತ್ರೈಲೋಕ್ಯಶರೀರತ್ವ, ಸರ್ವಲೋಕಾಶ್ರಯತ್ವ ಧರ್ಮಗಳಿಂದ ಇಲ್ಲಿನ ವೈಶ್ವಾನರನು ಪರಮೇಶ್ವರನೇ ಎಂದು ನಿರೂಪಿಸುವುವು. ॥೩೩॥

“ ದ್ಯುಭ್ವಾದ್ಯಾಯತನಂ ಸ್ವಶಬ್ದಾತ್ ” “ಮುಕ್ತೋಪಸೃಪ್ಯವ್ಯಪದೇಶಾತ್” ಮೊದಲಾದ ಈ ಅಧಿಕರಣದ ಸೂತ್ರಗಳು “ ಯಸ್ಮಿನ್ ದ್ಯೌಃ ಪೃಥಿವೀ ಚಾಂತರಿಕ್ಷಮೋತಂ ” ಎಂದು ಮೊದಲಾದ ಶ್ರುತಿಯ ಅರ್ಥವನ್ನು ನಿರ್ಣಯಿಸುತ್ತಾ, ಇಲ್ಲಿ ಸ್ವರ್ಗಪೃಥಿವ್ಯಾದ್ಯಾಶ್ರಯವಸ್ತುವಾವುದೆಂದು ಶಂಕಿಸಿ ಆತ್ಮ, ಸತ್ಪುರುಷ, ಬ್ರಹ್ಮ ಮೊದಲಾದ ಪರಮೇಶ್ವರಪರವಾದ ಶಬ್ದಗಳನ್ನೇ ಹೇಳಿರುವುದರಿಂದ ಇಲ್ಲಿ ಮುಕ್ತರು ಪಡೆಯುವ ವಸ್ತುವೆಂದುದರಿಂದಲೂ, ಇಲ್ಲಿ ಪರಮೇಶ್ವರನೇ ಪೃಥಿವ್ಯಾದ್ಯಾಶ್ರಯನೆಂದು ನಿರೂಪಿಸುವುವು. ॥೩೪॥

“ ಭೂಮಾಸಂಪ್ರಸಾದಾತ್ ”, “ ಅಕ್ಷರಮಂಬರಾಂತಧೃತೇ ”, “ ಈಕ್ಷತಿಕರ್ಮವ್ಯಪದೇಶಾತ್ಸಃ ” ಈ ಮೂರಧಿಕರಣಸೂತ್ರಾರ್ಥವು. ಮೊದಲನೆಯದು “ ಭೂಮಾತ್ವೇವ ವಿಜಿಜ್ಞಾಸಿತವ್ಯಃ ”—ಎಂಬ ಶ್ರುತ್ಯರ್ಥವನ್ನು ನಿರ್ಣಯಿಸುತ್ತಾ

ಅಲಿಂಗಂ ಲಿಂಗಸ್ಥಂ ವದತಿ ವಿಧಿವಾಕ್ಯೈಃ ಶ್ರುತಿರಿಯಂ
ಧೃತೇಕಾಶಾಖ್ಯಂ ಮಹಿಮನಿ ಪ್ರಸಿದ್ಧೇರ್ವಿಮೃಶತಃ ।
ಅತೋಽವಮರ್ಶಾನ್ನಾಯಂ ಭವತಿ ಭವಭಾವಾತ್ಮಕತಯಾ
ಶಿವಾವಿರ್ಭಾವೋ ವಾ ಭವತಿ ಚ ನಿರೂಪೇ ಗತಧಿಯಂ ॥೩೬॥

ಪರಾಮರ್ಶೇ ಚಾನ್ಯದ್ಭವತಿ ದಹರಂ ಕಿಂ ಶ್ರುತಿವಚೋ
ನಿರುಕ್ತಂ ಚಾಲ್ಪಂ ಯತ್ತ್ವನುಕೃತಿತದೀಯೇಽಹ್ನಿ ಮಹಸಾ ।
ವಿಭಾತೀದಂ ಶಶ್ವತ್ಪ್ರಮಿತವರಶಬ್ದೈಃ ಶ್ರುತಿಭವೈಃ ॥೩೭॥

---

ಇಲ್ಲಿನ ಭೂಮಪದಾರ್ಥವು ಪ್ರಾಣವೆಂದು ಶಂಕಿಸಿ ಸತ್ಯೋಪಕ್ರಮದಿಂದಲೂ ಆತ್ಮನಿರ್ದೇಶದಿಂದಲೂ ಇಲ್ಲಿ ಭೂಮಪದಾರ್ಥವು ಪರಮಾತ್ಮನೆಂದು ನಿರೂಪಿಸುವುದು. ಎರಡನೆಯದು "ಯಃ ಪುನರೇತಂ........ಪರಂಪುರುಷಮಭಿಧ್ಯಾಯೀತ" ಎಂಬ ಶ್ರುತ್ಯರ್ಥವನ್ನು ನಿರ್ಣಯಿಸುತ್ತಾ ಇಲ್ಲಿನ ಪರಮಪುರುಷನು ಪರಮಾತ್ಮನೇ ವಿನಾ ಜೀವಾದಿಗಳಲ್ಲ. "ಪರಂ ಪುರೀಶಯಂ ಪುರುಷಮೀಕ್ಷತೇ" ಎಂದು ಮುಂದೆ ಈ ಪುರುಷನ ಧ್ಯಾನದಿಂದ ಈ ಪುರುಷನ ದರ್ಶನವನ್ನೇ ಹೇಳಿರುವುದರಿಂದ ಇಲ್ಲಿನ ಪರಮಪುರುಷನು ಪರಮಾತ್ಮನು ಎಂದು ನಿರೂಪಿಸುವುದು. ॥೩೫॥

ಇದು ದಹರಾಧಿಕರಣವು, ಇಲ್ಲಿನ ಸೂತ್ರಗಳು "ಅಥ ಯದಿದಂ........ ದಹರೋಽಸ್ಮಿನ್ನಂತರಾಕಾಶಃ" ಎಂಬ ಶ್ರುತ್ಯರ್ಥವನ್ನು ವಿವರಿಸುತ್ತಾ ಇಲ್ಲಿನ ದಹರಾಕಾಶಪದಾರ್ಥವು ಆಕಾಶವೇ? ಜೀವನೇ? ಎಂದು ಶಂಕಿಸಿ ಮುಂದೆ ಆಕಾಶಸಾದೃಶ್ಯವನ್ನೇ ಕೊಡುವುದರಿಂದಲೂ ಸರ್ವಜಗದಾಶ್ರಯತ್ವವನ್ನು ಹೇಳುವುದರಿಂದಲೂ, ಆಕಾಶಶಬ್ದಕ್ಕೆ ಹೆಚ್ಚಾಗಿ ಶ್ರುತಿಯಲ್ಲಿ ಪರಮೇಶ್ವರಾರ್ಥಪ್ರಸಿದ್ಧಿಯಿರುವುದರಿಂದಲೂ ಆಕಾಶವಲ್ಲವೆಂದೂ, ಅಪಹತಪಾಪ್ಮತ್ವ ಮೊದಲಾದವುಗಳನ್ನು ಹೇಳಿರುವುದರಿಂದ ಜೀವನಲ್ಲವೆಂದೂ ಪರಮೇಶ್ವರನೇ ಇಲ್ಲಿ ದಹರಾಕಾಶವೆಂದೂ ನಿರ್ಣಯವು. ॥೩೬॥

"ಅನುಕೃತೇಸ್ತಸ್ಯ ಚ" ಈ ಅಧಿಕರಣವು "ಸತತ್ರ ಸೂರ್ಯೋ ಭಾತಿ ........ತಮೇವಭಾಂತಮನುಭಾತಿ ಸರ್ವಂ" ಇತ್ಯಾದಿಶ್ರುತ್ಯರ್ಥವನ್ನು ನಿರ್ಣಯಿಸುತ್ತಾ ಇಲ್ಲಿನ ತೇಜೋವಸ್ತುವು ಪರಮಾತ್ಮನೇ ಹೊರತು ಮಿಕ್ಕ ತೇಜಸ್ಸುಗಳಲ್ಲ. ಸೂರ್ಯಾದಿಗಳೂ ಆ ತೇಜಸ್ಸನ್ನು ಅನುಗೊಂಡು ಪ್ರಕಾಶಿಸುವವೆಂದೂ ಆ ವಸ್ತು

ಯೋ ವ್ಯಾಪತೋಽಪಿ ಭಗವಾನ್ ಪುರುಷೋಂತರಾತ್ಮಾ ।
ವಾಲಾಗ್ರಮಾತ್ರಹೃದಯೇ ಕಿಮು ಸನ್ನಿವಿಷ್ಟಃ ॥೩೮॥

ಪ್ರತ್ಯಕ್ಷಾನುಭವಪ್ರಮಾಪಣಪರಂ ವಾಕ್ಯಂ ಕಿಲೈಕಾರ್ಥದಂ
ಮಾನೇನಾಪಿ ಚ ಸಂಭವಾಭ್ರಮುಪರೋ ವರ್ಣ್ಯಂ ತಥೈವಾಹ ಹಿ ।
ಶಬ್ದಂ ಚಾಪಿ ತಥೈವ ನಿತ್ಯಮಪಿ ತಚ್ಛಾಸ್ತ್ರವ್ಯಾನುಪತ್ತಿಕ್ರಿಯಾ
ಮಧ್ವಾದಿಷ್ವಧಿಕೃತೋಽಪಿ ಪುರುಷೋ ಜ್ಯೋತಿಷ್ಟ್ವಭಾವೋ ಭವೇತ್॥೩೯॥

ಭಾವಂ ಚಾಪಿ ಶುಗಸ್ಯ ತಚ್ಛ್ರವಣತೋ ಜಾತ್ಯಂತರಾಸಂಭವಾತ್
ಸಂಸ್ಕಾರಾಧಿಕೃತೋಽಪಿ ಶಂಕರಪದಂ ಯೋ ವಕ್ತುಕಾಮಾ ಮನಾಕ್ ।

---

ವನ್ನು ಸೂರ್ಯಾದಿಗಳೂ ಪ್ರಕಾಶಗೊಳಿಸಲಾರವೆಂದೂ ಹೇಳಿರುವುದರಿಂದ ಇಲ್ಲಿನ ತೇಜಸ್ಸು ಪರಮಾತ್ಮನೇ ಎಂದು ನಿರೂಪಿಸುವುದು. "ಶಬ್ದಾದೇವ ಪ್ರಮಿತಃ" ಈ ಅಧಿಕರಣವು ಅಂಗುಷ್ಠಮಾತ್ರಃ ಪುರುಷಃ........ಈಶಾನೋಭೂತಭವ್ಯಸ್ಯ" ಎಂಬ ಶ್ರುತಿಯ ಅರ್ಥವನ್ನು ವಿವರಿಸುತ್ತಾ ಇಲ್ಲಿನ ಅಂಗುಷ್ಠಪ್ರಮಾಣಕಪುರುಷನು ಪರಮಾತ್ಮನೇ ವಿನಾ ಜೀವನಲ್ಲ. "ಈಶಾನೋಭೂತಭವ್ಯಸ್ಯ" ಎಂದು ಜಗತ್ತಿಗೆ ನಿರಂಕುಶಪರಮೇಶ್ವರನನ್ನಾಗಿ ಹೇಳಿರುವುದರಿಂದ ಜೀವನು ಅಂತಹ ಪರಮೇಶ್ವರನಲ್ಲ ದುದರಿಂದ ಅಂಗುಷ್ಠಮಾತ್ರಪುರುಷನು ಪರಮಾತ್ಮನು ಎಂದು ನಿರೂಪಣೆ. ಮನುಷ್ಯ ನನ್ನನುಸರಿಸಿ ಉಪಾಸನೆಗಾಗಿ ಪರಮಾತ್ಮನನ್ನು ಅಂಗುಷ್ಠಮಾತ್ರನನ್ನಾಗಿ ಶ್ರುತಿಯು ಹೇಳಿದೆ. ಶಾಸ್ತ್ರಕ್ಕೆ ಅಧಿಕಾರಿಯು ಹೆಚ್ಚಾಗಿ ಮನುಷ್ಯನೇ. ॥೩೮॥

"ತದುಪರ್ಯಪಿ ಬಾದರಾಯಣಃ ಸಂಭವಾತ್" ಈ ಅಧಿಕರಣದಲ್ಲಿ ದೇವತೆಗಳಿಗೂ ಈ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ, ಮನುಷ್ಯರಿಗೆ ಮಾತ್ರವಲ್ಲ. ಶ್ರುತಿಯಲ್ಲೂ ಸಹ ಇಂದ್ರಾದಿಗಳು ಬ್ರಹ್ಮನಲ್ಲಿ ಬ್ರಹ್ಮವಿದ್ಯೆಯನ್ನಭ್ಯಾಸಮಾಡಿ ಪ್ರತರ್ದನಾದಿಗಳಿಗೆ ಉಪದೇಶಿಸಿದ ಕಥೆಯಿದೆ. ಅವರಿಗೂ ದಿವ್ಯಶರೀರವಿರುವುದ ರಿಂದ ಮಧುವಿದ್ಯೆ ಮೊದಲಾದ ವಿದ್ಯೆಗಳಲ್ಲಿ ಅಧಿಕಾರವಿಲ್ಲದಿದ್ದರೂ ಈ ಬ್ರಹ್ಮವಿದ್ಯೆ ಯಲ್ಲಿ ಅಧಿಕಾರವಿದೆ-ಎಂದು ನಿರ್ಣಯಿಸಿದೆ. ॥೩೯॥

"ಶುಗಸ್ಯ ತದನಾದರಶ್ರವಣಾತ್" ಈ ಅಧಿಕರಣದಲ್ಲಿ ಉಪನಯನಾದಿ ಸಂಸ್ಕಾರವಿಲ್ಲದುದರಿಂದ ಈ ಶಾಸ್ತ್ರೀಯವಾದ ಬ್ರಹ್ಮವಿದ್ಯೆಯಲ್ಲಿ ಶೂದ್ರನಿಗೆ ಅಧಿಕಾರ

ಜ್ಯೋತಿರ್ದರ್ಶನತಃ ಪ್ರಸಾದಪರಮಾದಸ್ಮಾಚ್ಛರೀರಾತ್ಪರಂ
ಜ್ಯೋತಿಶ್ಚಾಭಿನಿವಿಶ್ಯ ವ್ಯೋಮುಪರಮಾನಂದಂ ಪರಂ ವಿಂದತಿ ॥೪೦॥

ಸ್ಮೃತೀನಾಂ ವಾದೋತ್ರ ಶ್ರುತಿವಿಭವದೋಷಾನ್ಯವಚಸಾ
ಸ ಏವಾತ್ಮಾ ದೋಷೈಃ ವಿಗತಮತಿಕಾಯಃ ಪರಶಿವಃ ।
ಸ ವಿಶ್ವಂ ವಿಶ್ವಾತ್ಮಾ ಭವತಿ ಸ ಹಿ ವಿಶ್ವಾಧಿಕತಯಾ
ಸಮಸ್ತೇಷು ಪ್ರೋತೋ ಭವತಿ ಸ ಹಿ ಕಾರ್ಯೇಷು ಕರಣಂ ॥೪೧॥

ಪ್ರಧಾನಾನಾಂ ತೇಷಾಂ ಭವತಿ ಇತರೇಷಾಮನುಪಮೋ
ಪ್ಯಲಬ್ಧೋಪ್ಯಾತ್ಮಾಯಂ ಶ್ರುತಿಶಿರಸಿ ಚೋಕ್ತೋಣುರಹಿತಃ ।
ಸದೃಶ್ಯೋ ಚಿಂತ್ಯಾತ್ಮಾ ಭವತಿ ವರಕಾರ್ಯೇಷು ಕರಣಂ
ಅಸದ್ವಾ ಸದ್ವಾ ಸೋಪ್ಯಸದಿತಿ ನ ದೃಷ್ಟಾಂತವಶಗಂ ॥೪೨॥

---

ವಿಲ್ಲವೆಂದು ನಿರ್ಣಯಿಸಿದೆ, ಉಪನಯನವಿಲ್ಲದೇ ವೇದಾಧ್ಯಯನವಿಲ್ಲ, ವೇದಾಧ್ಯಯನವಿಲ್ಲದುದರಿಂದ ಶೂದ್ರನಿಗೆ ಈ ಬ್ರಹ್ಮವಿದ್ಯೆಯಲ್ಲೂ ಅಧಿಕಾರವಿಲ್ಲವೆಂದಭಿಪ್ರಾಯವು. "ಜ್ಯೋತಿರ್ದರ್ಶನಾತ್" ಈ ಸೂತ್ರವು "ಏಷಸಂಪ್ರಸಾದೋಚ್ಛರೀರಾತ್" "ಪರಂಜ್ಯೋತಿಃ" ಇತ್ಯಾದಿ ಮಂತ್ರದ ಅರ್ಥವನ್ನು ವಿವರಿಸುತ್ತಾ ಹಿಂದೆ "ಯ ಆತ್ಮಾ ಅಪಹತಪಾಪ್ಮಾ" ಎಂಬ ಅಪಹತಪಾಪತ್ವಾದಿಗಳ ದರ್ಶನದಿಂದಲೂ ಆತ್ಯಂತಿಕ-ಮೋಕ್ಷವನ್ನು ಹೇಳುವುದರಿಂದಲೂ ಇಲ್ಲಿನ ಜ್ಯೋತಿಃಪದಾರ್ಥವು ಪರಮಾತ್ಮನೇ ಎಂದು ನಿರ್ಣಯಿಸುವುದು. ॥೪೦॥

"ಸ್ಮೃತ್ಯನವಕಾಶದೋಪ್ರಸಂಗ ಇತಿ ಚೇನ್ನ ಅನ್ಯಸ್ಮೃತ್ಯನವಕಾಶದೋಷಪ್ರಸಂಗಾತ್" "ನ ವಿಲಕ್ಷಣತ್ವಾತ್, ನ ತು ದೃಷ್ಟಾಂತಭಾವಾತ್" ಈ ಅಧಿಕರಣಗಳು ಸಾಂಖ್ಯಸ್ಮೃತಿಗನುಸಾರವಾಗಿ ಪ್ರಕೃತಿಯೇ ಜಗತ್ಕಾರಣವೆಂದು ಹೇಳಬೇಕೆಂದು ವಾದಿಸುವವರನ್ನು ಖಂಡಿಸಿ, ಮನುಸ್ಮೃತಿ ಭಗವದ್ಗೀತೆ ಪುರಾಣಾದಿಗಳು ಇವುಗಳಲ್ಲಿ ಈಶ್ವರನೇ ಜಗತ್ಕಾರಣವೆಂದು ಹೇಳುವುದರಿಂದ ಈಶ್ವರನೇ ಜಗತ್ಕಾರಣನೆಂತಲೂ, ಈಶ್ವರನು ಚೇತನನಾದುದರಿಂದ ಅವನಿಂದ ಅಚೇತನಜಗತ್ತು ಜನಿಸಲಾರದು, ಆದುದರಿಂದ ಅಚೇತನವಾದ ಪ್ರಧಾನದಿಂದಲೇ ಜಗತ್ತು ಜನಿಸುವುದೆಂದು ಹೇಳಬೇಕೆನ್ನುವ ಸಾಂಖ್ಯಮತವನ್ನು ಖಂಡಿಸಿ, ಚೇತನನಾದ ಪುರುಷನಿಂದ ಅಚೇತನವಾದ ಕೇಶರೋಮಾದಿಗಳು ಜನಿಸುವಂತೆ, ಚೇತನನಾದ ಈಶ್ವರನಿಂದ

ಅಸಂಗೋ ಲಕ್ಷಣ್ಯೋ ನ ಭವತಿ ಹಿ ಸಂಚಸ್ಸಪಿ ಹಿ ಮುಧಾ
ಅಭಿಮಾನೋದ್ದೇಶಾದನುಗತಿರಥಾಕ್ಷಾದಿರಹಿತಃ ।
ಸ್ವಪಕ್ಷಾದೌ ದೋಷಾತ್ ಶ್ರುತಿರಪಿ ನ ಈಷ್ಟೇ ಪರಮತಂ
ತ್ವನಿರ್ಮೋಕ್ಷೋ ಭೂಯಾದಸುಮಿತಿಕುತರ್ಕೈರ್ನ ಹಿ ಭವೇತ್ ॥೪೩॥

ಭೋಕ್ತ್ರಾಪತ್ತೇರಪಿ ವಿಷಯತೋ ಲೋಕವೇದಾರ್ಥವಾದೋ
ನೈನಂ ಶಾಸ್ತಿ ಪ್ರಭುಮತಿಪರಂ ವಾ ವಿಚಾರಂಭಣೇಭ್ಯಃ ।
ಭೋಕ್ತಾ ಭೋಗವಿಲಕ್ಷಣೋ ಹಿ ಭಗವಾನ್ ಭಾವೋಪಲಬ್ಧೋ ಭವೇತ್
ಸತ್ವಾಚ್ಚಾಪಿ ಪರಸ್ಯ ಕಾರ್ಯವಿವಶಂ ಸದ್ವಾಕ್ಯವಾದಾನ್ವಯಾತ್ ॥೪೪॥

---

ಅಚೇತನವಾದ ಜಗತ್ತು ಜನಿಸುವುದರಲ್ಲಿ ಯಾವ ದೋಷವೂ ಇಲ್ಲವೆಂದು ನಿರೂಪಿಸುವುವು. ॥೪೧-೪೨॥

"ಸ್ವಪಕ್ಷದೋಷಾತ್" ಎಂಬ ಸೂತ್ರವೂ "ತರ್ಕಾಪ್ರತಿಷ್ಠಾನಾತ್" ಎಂಬ ಸೂತ್ರವೂ ಸಹ ಕಾರ್ಯಕಾರಣಗಳು ಒಂದೇವಿಧವಾಗಿರಬೇಕು. ಆದುದರಿಂದ ಅಚೇತನಪ್ರಕೃತಿಯಿಂದಲೇ ಅಚೇತನಜಗತ್ತು ಜನಿಸಬೇಕು-ಎನ್ನುವ ಸಾಂಖ್ಯಮತವನ್ನು ಖಂಡಿಸುತ್ತಾ ನೀನು ಹೇಳುವ ದೋಷವು ನಿನ್ನಲ್ಲಿಯೇ ಇದೆ. ರೂಪಾದಿಹೀನವಾದ ಪ್ರಧಾನದಿಂದ ರೂಪಾದಿಯುಕ್ತವಾದ ಜಗತ್ತು ಜನಿಸುವುದು-ಎನ್ನುವ ನೀನೇ ಕಾರ್ಯಕಾರಣಗಳು ಒಂದೇವಿಧವಾಗಿರಬೇಕೆಂಬುದನ್ನು ಉಲ್ಲಂಘಿಸಿರುವೆ. ಮತ್ತು ಶ್ರುತಿಯು ಚೇತನದಿಂದ ಅಚೇತನಜಗತ್ತು ಜನಿಸುವುದೆಂದು ಹೇಳುವುದರಿಂದ ಅದಕ್ಕನುಸಾರವಾದ ತರ್ಕವನ್ನುಪಯೋಗಿಸಿ ಮತವನ್ನು ಸಾಧಿಸಬೇಕು. ಬುಡಕೊನೆಗಳಿಲ್ಲದೇ ಕುತರ್ಕಗಳಿಂದ ಏನೂ ಸಿದ್ಧಿಸಲಾರದೇ ಮುಕ್ತಿಯೇ ದೊರಕದು. ಆದುದರಿಂದ ಅಂತ್ಯಪ್ರಮಾಣವಾದ ಶ್ರುತಿಗನುಸಾರವಾಗಿ ಚೇತನನಾದ ಈಶ್ವರನಿಂದಲೇ ಜಗತ್ತು ಜನಿಸುವುದು-ಎಂದು ವಿವರಿಸುವುವು. ॥೪೩॥

"ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್" "ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಇವೆರಡೂ ಅಧಿಕರಣಗಳು. ಮೊದಲನೆಯದು ಜಗತ್ತಿಗೆ ಬ್ರಹ್ಮನು ಕಾರಣನೆಂದರೆ ಭೋಕ್ತೃವೂ ಭೋಗ್ಯವಸ್ತುವೂ ಒಂದಾದಂತಾಗಿ ಭೋಕ್ತೃಭೋಗ್ಯವ್ಯವಹಾರವೇ ಇಲ್ಲದಂತಾಗುವುದು. ಜೀವನು ಬ್ರಹ್ಮಾಭಿನ್ನನು, ಜಗತ್ತು ಬ್ರಹ್ಮಾಭಿನ್ನವಾದುದು ಎನ್ನುವದನ್ನು ಖಂಡಿಸಿ ಸಮುದ್ರದಿಂದ ಜನಿಸುವ ನೊರೆ

ಯುಕ್ತೇಃ ಶಬ್ದಾಂತರಾಚ್ಚಾಸದಿತಿ ನ ಹಿ ಕಾರ್ಯಂ ಚ ಕರಣಂ
ಪ್ರಮಾಣೈರ್ಯುಕ್ತ್ಯಾ ವಾ ನ ಭವತಿ ವಿಶೇಷೇಣ ಮನಸಾ ।
ಪರಃ ಪ್ರಾಣೋದ್ದೇಶಾದ್ಧಿತಕರಣದೋಷಾಭಿಧಧಿಯಾ
ತಥಾಶ್ಮಾದ್ಯಾ ದಿವ್ಯಾ ದ್ಯೋತಂತಿ ದೇವಾ ಭುವಿ ದಿವಿ ॥೪೫॥

---

ಅಲೆಗಳು ಸಮುದ್ರದ ಸ್ವರೂಪವೇ ಆಗಿದ್ದರೂ ಪರಸ್ಪರವಾಗಿ ಬೇರೆಯಾಗಿರುವಂತೆ ಭೋಕ್ತೃಭೋಗ್ಯಗಳ ವ್ಯವಹಾರವು ಬೇರೆಬೇರೆಯಾಗಿ ಸರಿಹೋಗುವುದೆಂದೂ, ಎರಡನೆಯದು ವಸ್ತುತಃ ಜಗತ್ತು ಬ್ರಹ್ಮನಿಗಿಂತ ಬೇರೆಯಾಗಿ ಇಲ್ಲವೇ ಇಲ್ಲ. ಇದ್ದರೆ ತಾನೇ ಈ ದೋಷವೆಂದೂ ಸಮಾಧಾನಗಳನ್ನು ನಿರೂಪಿಸುವುವು. ॥೪೪॥

"ಯುಕ್ತೇಃ ಶಬ್ದಾಂತರಾಚ್ಚ" ಎಂದು ಮೊದಲಾಗಿ ಮೂರು ಸೂತ್ರಗಳು ಕಾರ್ಯವಾದ ಜಗತ್ತು ಉದಯಿಸುವುದಕ್ಕಿಂತ ಮೊದಲು ಕಾರಣವಾದ ಬ್ರಹ್ಮ ವಸ್ತುವು ಇರುವುದು. ಮಡಕೆಯು ಉದಯಿಸುವ ಮೊದಲು ಅದರ ಕಾರಣವಾದ ಮಣ್ಣು ಇರುವಂತೆ, ಮತ್ತು ಮಡಕೆಯು ಮಣ್ಣಿಗಿಂತ ಭಿನ್ನವಾಗಿಲ್ಲದಿರುವಂತೆ, ಜಗತ್ತೂ ಬ್ರಹ್ಮನಿಗಿಂತ ಭಿನ್ನವಾಗಿಲ್ಲವೆಂದು ಯುಕ್ತಿಯಿಂದ ನಿರ್ಣಯಿಸುವುವು. "ಸದೇವ ಸೌಮ್ಯೇದಮಗ್ರ ಆಸೀತ್" ಎಂಬ ಶ್ರುತಿಯೂ ಇದೇ ಅರ್ಥವನ್ನು ವಿವರಿಸುವುದು. "ಇತರವ್ಯಪದೇಶಾದ್ಧಿತಾಕರಣಾದಿದೋಷಪ್ರಸಕ್ತಿಃ" ಈ ಅಧಿಕರಣವು ಬ್ರಹ್ಮನೇ ಜೀವನಾದುದರಿಂದ ಜೀವಬ್ರಹ್ಮರಿಗೆ ಭೇದವಿಲ್ಲದುದರಿಂದ ಬ್ರಹ್ಮನು ಜಗತ್ಕಾರಣನಾದರೆ ಜೀವನೂ ಜಗತ್ಕಾರಣನಾದಂತಾಯಿತು. ಹಾಗೆ ಜೀವನಿಂದ ಜಗತ್ತು ಜನಿಸುವುದಾದರೆ ಆತನು ತನಗನಿಷ್ಟವಾದ ದುಃಖಾದಿಗಳನ್ನು ಏಕೆ ಮಾಡಿಕೊಂಡಾನು ? ಆದರೆ ಜೀವನು ದುಃಖವನ್ನನುಭವಿಸುವುದು ಸರ್ವಪ್ರಸಿದ್ಧವಾಗಿದೆ. ಆದುದರಿಂದ ಈ ನಿಮ್ಮ ಅದ್ವೈತಮತ ಬ್ರಹ್ಮಕಾರಣವಾದವು ಸರಿಹೊಂದುವುದಿಲ್ಲ. ಎಂಬ ಆಕ್ಷೇಪವನ್ನು ಖಂಡಿಸಿ ಜೀವನು ಬೇರೆ, ಈಶ್ವರನು ಬೇರೆ, ವಸ್ತುತಃ ಜೀವೇಶ್ವರರು ಅಭಿನ್ನರಾದರೂ ಮಾಯಾಮೂಲಕವಾಗಿ ಜೀವನು ದುಃಖಿಯಾಗಿ ಭಿನ್ನನಾಗಿ ವ್ಯವಹರಿಸಲ್ಪಡುವನು. ಈಶ್ವರನು ಮಾಯೆಗಧೀನನಲ್ಲದುದರಿಂದ ದುಃಖಿಯಲ್ಲ. ಲೋಕದಲ್ಲೂ ಸಹ ವಜ್ರ, ಸೂರ್ಯಕಾಂತಾದಿಗಳು ಕಲ್ಲಾಗಿರುವುದರಿಂದ ಒಂದೇ ಜಾತಿಯವಾದರೂ ವಜ್ರಕ್ಕಿಂತ ಸೂರ್ಯಕಾಂತವು ಹೆಚ್ಚಾಗಿ ಹೊಳೆಯುವುದಲ್ಲವೆ ? ಆದರಂತೆ ಜೀವೇಶ್ವರರು ಅಭಿನ್ನರಾದರೂ ಅಜ್ಞಾನಿಯಾದುದರಿಂದ ಜೀವನು ಜಗತ್ಕಾರಣನಲ್ಲ ಎಂದು ನಿರೂಪಿಸುವುದು. ॥೪೫॥

ಪ್ರಸಕ್ತಿರ್ವಾ ಕೃತ್ಸ್ನಾ ಶ್ರುತಿವರಬಲಾದಾತ್ಮನಿ ಚಿರಂ
ಸ್ವಪಕ್ಷೇ ದೋಷಾಣಾಂ ಭವತಿ ಚ ಸರ್ವಾದಿ ಸುದೃಶಾ ।
ವಿಕಾರಾಣಾಂ ಭೇದೋ ನ ಭವತಿ ನಿಯೋಜ್ಯೇ ಗಣಧಿಯಾಂ
ಅತೋ ಲೋಕೇ ಲೀಲಾಪರವಿಷಮನೈರ್ಘೃಣ್ಯವಿಧುರಂ ॥೪೬॥

ನ ಕರ್ಮಾರಂಭಾದ್ವಾ ಹ್ಯುಪಲಭತಿ ಯದ್ಯೇತಿಚ ಪರಂ
ಸರ್ವೈರ್ಧರ್ಮೈಪದ್ಯೈರಯುಕ್ತವಚನಾಪತ್ತೇಃ ಪ್ರವೃತ್ತೇರ್ಭವೇ ।
ದ್ರೂಪತಾನಾಂ ಗತಿಜೋಪಯುಜ್ಯ ಪಯಸಿ ಕ್ಷಾರಂ ಯಥಾ ಸೋಪಯುಕ್
ಅವಸ್ಥಾನಂ ನೈವ ಪ್ರಭವತಿ ತೃಣೇಷೂದ್ಯತಮತೇ
ಸ್ತಥಾ ಭಾವಾತ್ಪುಂಸಿ ಪ್ರಕಟಯತಿ ಕಾರ್ಯಂ ಚ ಕರಣಂ ॥೪೭॥

---

" ಕೃತ್ಸ್ನಪ್ರಸಕ್ತಿಃ " " ಸರ್ವೋಪೇತಾ ಚ " " ವೈಷಮ್ಯನೈರ್ಘೃಣ್ಯೇ " ಈ ಮೂರಧಿಕರಣಗಳು ಜಗತ್ತಿಗೆ ಬ್ರಹ್ಮಕಾರಣವೆಂದರೆ ಮಣ್ಣು ಮಡಕೆಯಾಗುವಂತೆ ಪೂರ್ತಿಯಾಗಿ ಜಗತ್ತು ಆಗಬೇಕಾಯಿತು. ಆದರಿಂದ ಜಗತ್ತಿನ ಹೊರತಾಗಿ ಬ್ರಹ್ಮನೇ ಇಲ್ಲವೆಂದಾಗುವುದು. ಏಕದೇಶದಿಂದ ಇರುವನೆಂದರೆ ಸಾವಯವತ್ವವು ಒಂದು " ನಿಷ್ಕಲಂ " ಎಂದು ನಿರವಯವತ್ವವನ್ನು ಹೇಳುವ ಶ್ರುತಿಗೆ ವಿರೋಧ ವಾಗುವುದು ಎಂಬಾಕ್ಷೇಪಗಳನ್ನು ಖಂಡಿಸುತ್ತಾ ಬ್ರಹ್ಮನು ಜಗತ್ತಿಗೆ ವಿವರ್ತೋಪಾ ದಾನಕಾರಣವು. ಪುರುಷನು ಸ್ವಪ್ನದಲ್ಲಿ ಸೃಜಿಸುವ ರಥಾದಿಗಳಿಗೆ ಹೇಗೆ ತನ್ನ ಸ್ವರೂಪನಾಶವಿಲ್ಲದೇ ಕಾರಣನೋ, ಹಾಗೆ ಬ್ರಹ್ಮನೂ ತನ್ನ ಸ್ವರೂಪಪರಿಣಾಮ ವಿಲ್ಲದೇ ಜಗತ್ತಿನ ಆಕಾರವಾಗಿ ತೋರುವುದು. ಇದೇ ಬ್ರಹ್ಮನಿಗಿರುವ ಜಗತ್ಕಾರ ಣತ್ವವು. ಈಶ್ವರನು ಆಯಾ ಜೀವರ ಧರ್ಮಾಧರ್ಮಗಳನ್ನನುಸರಿಸಿ ಫಲಗಳನ್ನು ಕೊಡುವುದರಿಂದ ಆತನಿಗೆ ವಿಷಮದೃಷ್ಟಿಯಿಲ್ಲವೆಂದೂ ಮಾಯಿಕವಾದ ಸರ್ವಶಕ್ತಿ ಯುಳ್ಳವನಾದುದರಿಂದ ಸೃಷ್ಟಿಸಲು ಸಮರ್ಥನೆಂದೂ ನಿರ್ಣಯಿಸುವುವು. ॥೪೬॥

" ನ ಕರ್ಮಾವಿಭಾಗಾದಿತಿಚೇನ್ನಾನಾದಿತ್ವಾತ್ " "ಸರ್ವಧರ್ಮೋಪಪತ್ತೇಶ್ಚ" ಈ ಎರಡು ಸೂತ್ರಗಳು ನಾನಾವಿಧವಾಗಿ ಪ್ರಾಣಿಗಳನ್ನು ಸೃಷ್ಟಿಸಲು ಹಿಂದಿನ ಕರ್ಮವು ಕಾರಣವೆಂದಾದರೆ ಹಿಂದೆ ಪರಮಾತ್ಮನೊರ್ವನೇ ಇದ್ದನೆಂದು ಹೇಳುವುದ ರಿಂದ ಯಾವ ಕರ್ಮವೂ ಇರಲಿಲ್ಲವೆಂದಾಯಿತು. ಹೀಗಾಗಿ ಯಾವ ಕರ್ಮವನ್ನನು ಸರಿಸಿ ಈಶ್ವರನು ಸೃಷ್ಟಿಸಿದನು ? ಎಂದಾಕ್ಷೇಪಿಸಿದರೆ ಸಂಸಾರವು ಅನಾದಿಯಾದುದ

ಮಹದ್ದೀರ್ಘಂ ಹ್ರಸ್ವಂ ಉಭಯಮಪಿ ಕರ್ಮೈವ ಕರಣಂ ।
ತಥಾ ಸೌಮ್ಯೇ ಸ್ಥಿತ್ಯಾ ಪ್ರಭವತಿ ಸ್ವ ಭಾವಾಚ್ಚ ನಿಯತಂ ॥೪೪॥

---

ರಿಂದ ಬೀಜವೃಕ್ಷನ್ಯಾಯದಂತೆ ಹಿಂದೆಯೂ ಕರ್ಮಗಳಿದ್ದುವೆಂದು ತಿಳಿಯಬಹುದು. ಅವುಗಳನ್ನು ಅನುಸರಿಸಿ ನಾನಾವಿಧವಾದ ಸೃಷ್ಟಿಯಾಯಿತು. ಹೀಗೆ ಕಲ್ಪಿಸುವುದರಿಂದ ಎಲ್ಲ ಧರ್ಮಗಳೂ ಅನ್ವಯಿಸುವುವು ಎಂದು ವಿವರಿಸುವುವು. "ರಚನಾನುಪಪತ್ತೇಶ್ಚ ನಾನುಮಾನಂ" ಇಲ್ಲಿಂದ ಸಾಂಖ್ಯಾದಿಮತಗಳನ್ನು ಯುಕ್ತಿಯಿಂದ ಖಂಡಿಸುವರು. ಸಾಂಖ್ಯರು ಪ್ರಧಾನವೇ ಜಗತ್ಕಾರಣವು. ಅದು ಅಚೇತನವಾದರೂ ನೀರು ಸಸ್ಯಾಭಿವೃದ್ಧಿಗಾಗಿ ತಾನಾಗಿ ಪ್ರವಹಿಸುವಂತೆ ಜಗತ್ತನ್ನು ರಚಿಸುವುದು ಎನ್ನುವರು. ಇದು ಸರಿಯಲ್ಲ. ನೀರೂ ಸಹ ಸಸ್ಯಾಭಿವೃದ್ಧಿಗೆ ತಾನಾಗಿ ಪ್ರವರ್ತಿಸುವುದಿಲ್ಲ. ಚೇತನನಾದ ಮನುಷ್ಯನು ಉಪಯೋಗಿಸಿ ಸಸ್ಯಗಳನ್ನು ಬೆಳೆಸಬೇಕು. ಪ್ರತಿಯೊಂದು ಅಚೇತನವಸ್ತುವೂ ಸಹ ಚೇತನವಸ್ತುವಿನ ಪ್ರೇರಣೆಯಿಂದಲೇ ಪ್ರವರ್ತಿಸುವುದು. ಆದುದರಿಂದ "ಅಚೇತನವಾದ ಪ್ರಧಾನವು ತಾನಾಗಿ ಜಗತ್ತನ್ನು ರಚಿಸುವುದು" ಎನ್ನುವ ಮಾತು ಅಸಂಬದ್ಧವಾದುದು ಎಂದು ಮೊದಲಾದ ಯುಕ್ತಿಗಳಿಂದ ಪ್ರಧಾನಕಾರಣವಾದಿ ಸಾಂಖ್ಯಮತವನ್ನು ಖಂಡಿಸಿರುವರು. ॥೪೭॥

"ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಂ" "ಉಭಯಥಾಪಿ ನ ಕರ್ಮಾತಃ ತದಭಾವಃ" ಇವೆರಡು ಸೂತ್ರಗಳು ವೈಶೇಷಿಕರ ಪರಮಾಣುಕಾರಣವಾದವನ್ನು ಖಂಡಿಸುವುವು. ತಾರ್ಕಿಕರು "ಚೇತನವು ಜಗತ್ತಿಗೆ ಪರಿಣಾಮಕಾರಣವೆನ್ನುವುದು ಸರಿಯಲ್ಲ. ಚೇತನವು ಕಾರಣವಾದರೆ ಜಗತ್ತೆಲ್ಲವೂ ಚೇತನವೇ ಆದೀತು. ಆದುದರಿಂದ ಅಚೇತನವಾದ ನಿತ್ಯವಾದ ಪುರುಷರ ಅದೃಷ್ಟದಿಂದ ಪ್ರೇರಿತಗಳಾದ ಪರಮಾಣುಗಳೇ ಜಗತ್ಕಾರಣಗಳು" ಎಂದು ಹೇಳುವರು. ಇದು ಸರಿಯಲ್ಲ. ಇವರು ಎರಡು ಪರಮಾಣುಗಳಿಂದ ದ್ವ್ಯಣುಕವೆಂಬುದೂ, ದ್ವ್ಯಣುಕಗಳಿಂದ ತ್ರ್ಯಣುಕವೆಂದೂ, ಈ ಕ್ರಮದಿಂದ ಮಹಾ ಪೃಥಿವೀ-ಮಹಾಜಲಾದಿಗಳು ಜನಿಸುವುದೆನ್ನುವರು. ಒಟ್ಟಿನಲ್ಲಿ ಅಣುಗಳಿಂದ ಮಹತ್ತಾದ ವಸ್ತುಗಳುದಯಿಸುವುವೆನ್ನುವರು. ಆದುದರಿಂದ ಇವರಲ್ಲಿಯೂ ಕಾರ್ಯಕಾರಣಗಳಿಗೆ ಸಾದೃಶ್ಯವಿಲ್ಲ. ಅಣುವಿನಿಂದ ಮಹತ್ತಾದ ವಸ್ತು ಜನಿಸುವಂತೆ ಚೇತನದಿಂದ ಅಚೇತನವಸ್ತುವು ಜನಿಸಲಾರದೇಕೆ? ಎಂದಾಕ್ಷೇಪಿಸಿ ಖಂಡಿಸಿರುವರು. ಮತ್ತು ಪರಮಾಣುಗಳು ಪ್ರವರ್ತಿಸುವುದಕ್ಕೆ ಪುರುಷರ ಅದೃಷ್ಟವು ಕಾರಣವೆಂದಿರುವರು, ಯಾವ ಪುರುಷನ ಅದೃಷ್ಟವು ಕಾರಣ

ನಸ್ಥಾನತೋಽಪಿ ಶ್ರುತಿಲಿಂಗಸಮನ್ವಯೇನ
ಪ್ರಕಾಶ ವೈಯರ್ಥ್ಯಮತೋಽಪಿ ಮಾತ್ರಾ ।
ಸೂರ್ಯೋಪಮಾ ಪ್ರಮುತಿಚ ತ್ವತಥಾಂಬುದತ್ವಾ
ತ್ತದ್ದರ್ಶನಾಚ್ಚ ನಿಯತಂ ಪ್ರತಿಬಿಂಬರೂಪಂ ॥೪೯॥

ತದವ್ಯಕ್ತಂ ನ ತರ್ಕೋ ಲಿಂಗಮೇತತ್ತಥೋಭಯವ್ಯಪದೇಶಾಚ್ಚ ತೇಜಃ ।
ಪ್ರತಿಷೇಧಾಚ್ಚ ಪರಮೋ ಸೇತುರೀಶಸ್ಸಾಮಾನ್ಯತಃ ಸ್ಥಾನವಿಶೇಷಬುದ್ಧ್ಯಾ
॥೫೦॥

---

ವೆನ್ನುವುದರಲ್ಲಿ ನಿಯಮವಿಲ್ಲದುದರಿಂದಲೂ ಪುರುಷರ ಅದೃಷ್ಟವು ಯಾವಾಗಲೂ ಇರುವುದರಿಂದ ಯಾವಾಗಲೂ ಪರಮಾಣುಗಳಲ್ಲಿ ಪ್ರವೃತ್ತಿಯುಂಟಾಗುತ್ತಾ ಸದಾ ಸೃಷ್ಟಿಯೇ ಆಗುತ್ತಿರಲಿ ಎಂದಾಪತ್ತಿಯು ಬರುವುದಲ್ಲದೇ ಪ್ರಳಯವೇ ಇಲ್ಲದೇ ಹೋಗುವುದು. ಈ ಕಾರಣದಿಂದಲೂ ಪರಮಾಣುಕಾರಣವಾದವು ಸರಿಯಲ್ಲ. ॥೪೮॥

"ನಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ" "ಪ್ರಕಾಶ ವೈಯರ್ಥ್ಯಂ" "ಅತ ಏವ ಚೋಪಮಾ ಸೂರ್ಯಕಾಶಾದಿವತ್" "ಅಂಬುವದ ಗ್ರಹಣಾತ್ತು" "ದರ್ಶನಾಚ್ಚ"-ಈ ಐದು ಸೂತ್ರಗಳು ಬ್ರಹ್ಮನು ನಿರ್ವಿಶೇಷ ಸ್ವರೂಪನೆಂದು ನಿರೂಪಿಸುವುವು. "ಸರ್ವಕಾಮಾನ್, ಸರ್ವಕಾಮಃ" ಇತ್ಯಾದಿ ಶ್ರುತಿಗಳು ಬ್ರಹ್ಮನು ಸವಿಶೇಷರೂಪನೆಂದೂ, "ಅಸ್ಥೂಲಮನಣು"-ಇತ್ಯಾದಿ ಶ್ರುತಿಗಳು ನಿರ್ವಿಶೇಷಸ್ವರೂಪನೆಂದೂ ಹೇಳುವುವು. ಆದುದರಿಂದ ಎರಡುವಿಧವಾದ ಶ್ರುತಿಗಳಿಗನುಸಾರವಾಗಿ ಬ್ರಹ್ಮನು ಸವಿಶೇಷನೂ ನಿರ್ವಿಶೇಷನೂ ಆಗಿರುವನೆಂದು ಕಲ್ಪಿಸಬಾರದೇಕೆ? ಎಂಬಾಕ್ಷೇಪವನ್ನು ಪರಿಹರಿಸುತ್ತಾ, ಬ್ರಹ್ಮನು ವಸ್ತುತಃ ನಿರ್ವಿಶೇಷರೂಪನು, ಸವಿಶೇಷನಾದರೆ ನಿತ್ಯತ್ವವು ಬರಲಾರದು. ಹೇಳಿದ ಸವಿಶೇಷತೆಯು ಉಪಾಧಿಕಲ್ಪಿತವಾದುದೆಂದು ನಿರೂಪಿಸುತ್ತಾ, ಸೂರ್ಯನ ಬಿಸಿಲು ಹೇಗೆ ಬೆರಳಿನ ಸಂಬಂಧದಿಂದ ವಕ್ರವಾಗಿ ಕಾಣುವುದೋ ಹಾಗೆ ಬ್ರಹ್ಮನೂ ಪೃಥಿವ್ಯಾದಿ ಸಂಬಂಧದಿಂದ ಸವಿಶೇಷವಾಗಿರುವನಂತೆ ವರ್ಣಿಸಲ್ಪಟ್ಟಿರುವನು. ಆ ಸವಿಶೇಷ ಸ್ವರೂಪವು ಉಪಾಸನೆಗೋಸ್ಕರವಾದದ್ದು ಎಂದೂ ನಿರೂಪಿಸುವುವು. ॥೪೯॥

"ಪ್ರಕೃತೈತಾವತ್ತ್ವಂ" "ತದವ್ಯಕ್ತಮಾಹಹಿ" "ಪ್ರತಿಷೇಧಾಚ್ಚ" "ಉಭಯವ್ಯಪದೇಶಾತ್" ಈ ಸೂತ್ರಗಳು—ಬ್ರಹ್ಮನಿಗೆ ಮೂರ್ತ ಅಮೂರ್ತ

ವಿಶೇಷತಶ್ಚೋಪಪತ್ತೇಸ್ತಥಾನ್ಯದತಃ ಫಲಂ
ಚೋಪಪದ್ಯತೇ ಯಸ್ಮಾನ್ಮಹೇಶ್ವರಾತ್ ।
ಶ್ರುತಿಭಿಶ್ಚೋದಿತಂ ಯದ್ಧರ್ಮ ಪರೇ ಚೇಶ್ವರಂ
ಚೇತಿ ಚಾನ್ಯೇನ ಕರ್ಮವಚ್ಚೇಶ್ವರೇ ಭೇದಧೀರ್ನ ॥ ॥೫೧॥

ಭೇದಾನ್ನ ಚೇತಿ ಪರತಃ ಪರಮಾರ್ಥದೃಷ್ಟ್ಯಾ
ಸ್ವಾಧ್ಯಾಯಭೇದಾದುಪಸಂಹಾರ ಭೇದಃ ।

---

ರೂಪಗಳೆರಡನ್ನು ಹೇಳಿ ಮುಂದೆ "ನೇತಿನೇತಿ" ಎಂದು ನಿಷೇಧಿಸುವ ಶ್ರುತಿಗೆ ಅರ್ಥವನ್ನು ವಿವರಿಸುತ್ತಾ ಇಲ್ಲಿ ಮೂರ್ತಸ್ವರೂಪವನ್ನು ಮಾತ್ರ ನಿಷೇಧಿಸುವುದು. ಹಗ್ಗವನ್ನು ನೋಡಿ ಹಾವೆಂದು ತಿಳಿದಾಗ ಇದು ಹಾವಲ್ಲವೆಂದು ಹಾವನ್ನು ಮಾತ್ರ ನಿಷೇಧಿಸುವಂತೆ ಎಂದು ನಿರೂಪಿಸಿ, ಬ್ರಹ್ಮವಸ್ತುವನ್ನು ಬೇರೆಡೆಯಲ್ಲಿ ಶ್ರುತಿಯು ಅಮೂರ್ತವಾಗಿ ಹೇಳಿರುವುದರಿಂದ ಅಮೂರ್ತರೂಪವು ಸತ್ಯವೆಂದು ನಿರೂಪಿಸುವುವು. "ಪರಮತಸ್ಸೇತೂನ್ಮಾನ" ಇತ್ಯಾದಿಸೂತ್ರಾಧಿಕರಣವು ಶ್ರುತಿಯಲ್ಲಿ ಪರಮಾತ್ಮನನ್ನು ಮಾನವನನ್ನು ದಾಟಿಸುವ ಸೇತುವೆ ಎಂಬುದಾಗಿ ಹೇಳಿರುವುದು. ಲೋಕದಲ್ಲಿ ಸೇತುವೆಗಿಂತ ಬೇರೆ ಮೈದಾನಾದಿಪ್ರದೇಶಗಳು ಹತ್ತಿರದಲ್ಲಿ ಬೇಕಾದಷ್ಟಿರುತ್ತವೆ. ಅದರಂತೆ ಆತ್ಮನು ಸೇತುವೆಯಾದರೆ ಅವನಿಗಿಂತ ಭಿನ್ನವಾಗಿ ಬೇರೆ ವಸ್ತುಗಳಿರಬೇಕಾಯಿತು ಎಂಬಾಕ್ಷೇಪವನ್ನು ಪರಿಹರಿಸುತ್ತಾ ಆತ್ಮನೇ ಜಗತ್ಕಾರಣನಾದುದರಿಂದ ಕಾರಣದಿಂದ ಬೇರೆಯಾಗಿ ಯಾವ ಕಾರ್ಯಜಗತ್ತೂ ಇಲ್ಲವು. ಪ್ರಪಂಚವೆಲ್ಲವನ್ನೂ ಧರಿಸಿರುವನು ಎಂಬರ್ಥದಲ್ಲಿ ಸೇತುವನ್ನಾಗಿ ಆತ್ಮನನ್ನು ಶ್ರುತಿಯು ಕರೆದಿರುವುದು ಎಂದು ರೂಪಿಸಿರುವುದು. ॥೫೦॥

"ಫಲಮತ ಉಪಪತ್ತೇಃ" "ಶ್ರುತತ್ವಾಚ್ಚ" ಈ ಅಧಿಕರಣವು ಲೋಕದಲ್ಲಿ ಇಷ್ಟಾನಿಷ್ಟಮಿಶ್ರಫಲಗಳು ಪ್ರಾಣಿಗಳಿಗೆ ಅವರವರ ಕರ್ಮವನ್ನು ಅನುಲಕ್ಷಿಸಿ ಸರ್ವಜ್ಞನಾದ ಪರಮೇಶ್ವರನೇ ಕೊಡುವನು. ಅಚೇತನವಾದ ಧರ್ಮಾಧರ್ಮಗಳಾಗಲೀ ಅಪೂರ್ವವಾಗಲೀ ಕರ್ಮಫಲವನ್ನು ಕೊಡಲಾರವು ಎಂದೂ; "ಸವಾ ಏಷ ಮಹಾನಜ ವಸುದಾನೋನ್ನದಾನಃ" ಎಂಬ ಶ್ರುತಿಯು ಪರಮೇಶ್ವರನೇ ಕರ್ಮಫಲದಾತೃವೆಂದು ವರ್ಣಿಸುವುದು ಎಂದು ನಿರ್ಣಯಿಸುವುವು. ॥೫೧॥

"ಸರ್ವವೇದಾಂತಪ್ರತ್ಯಯಂ" "ಭೇದಾನ್ನ ಚೇತಿ" "ಸ್ವಾಧ್ಯಾಯಸ್ಯ ತಥಾತ್ವೇನ" "ಉಪಸಂಹಾರೋರ್ಥಾಭೇದಾತ್" "ಅನ್ಯಥಾತ್ವಂ" "ಸಂಜ್ಞಾ

ಅಥಾನ್ಯಥಾ ತ್ವಂ ವಚಸಾ ಸೋ ವರಿಯಾನ್
ಸಂಜ್ಞಾತಂ ಚೇದ್ವ್ಯಾಪ್ತಿರೇವ ಪ್ರಮಾಣಂ ॥೫೨॥

ಸರ್ವತ್ರ ಭೇದಾದನಯೋಸ್ತಥಾನ್ಯತ್
ಪ್ರಾಧಾನ್ಯಮಾನಂದಮಯಃ ಶಿರಸ್ತ್ವಂ ।
ತಥೇತರೇ ತ್ವರ್ಥಸಾಮಾನ್ಯಯೋಗಾತ್
ಪ್ರಯೋಜನಾಭಾವತಯಾಧ್ಯಯಾಯ ತೇ ॥೫೩॥

ಶಬ್ದಾತ್ತಥಾಹ್ಯಾತ್ಮಗೃಹೀತಿರುತ್ತರಾತ್ತಥಾನ್ವಯಾದಿತರಾಖ್ಯಾನಪೂರ್ವಂ ।
ಅಶಬ್ದತ್ವಾದೇವಮೇತತ್ಸಮಾನಮೇವಂ ಚ ಸಂವಿದ್ವಚನಾವಿಶೇಷಾತ್॥೫೪॥

---

ತಶ್ಚ" "ವ್ಯಾಪ್ತೇಶ್ಚ ಸಮಂಜಸಂ"—ಇಲ್ಲಿನ ಮೂರಧಿಕರಣಗಳು, ವೇದಾಂತ ವಾಕ್ಯಗಳು "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಪ್ರಜ್ಞಾನಂ ಬ್ರಹ್ಮ" "ಆನಂದಂ ಬ್ರಹ್ಮ" ಎಂದು ನಾನಾವಿಧವಾಗಿರುವುದರಿಂದ ಬ್ರಹ್ಮವಿದ್ಯೆಯೂ ನಾನಾವಿಧವೇ? ಎಂದು ಶಂಕಿಸಿ ಅದ್ವೈತಬ್ರಹ್ಮಪದವಾದ ನಿರ್ಗುಣವಿದ್ಯೆಯು ಎಲ್ಲೆಡೆಯಲ್ಲಿಯೂ ಒಂದೇ ವಿಧವಾಗಿದೆಯೆಂದೂ, ಸಂಪೂರ್ಣಗುಣಗಳನ್ನೂ ಹೇಳದಿರುವೆಡೆಯಲ್ಲಿ ಮಿಕ್ಕಗುಣಗಳನ್ನು ಉಪಸಂಹಾರಮಾಡಬೇಕೆಂದೂ ಉದ್ಗೀಥಾದಿಸಗುಣವಿದ್ಯೆಗಳು ಮಾತ್ರ ಭಿನ್ನಭಿನ್ನವಾಗಿರುವುವೆಂದೂ ನಿರೂಪಿಸುವುವು. ॥೫೨॥

"ಸರ್ವಾಭೇದಾದನ್ಯತ್ರೇಮೇ" ಸಗುಣಪ್ರಕರಣದಲ್ಲಿ ಪ್ರಾಣವಿದ್ಯೆಯನ್ನು ಅನೇಕ ಕಡೆಗಳಲ್ಲಿ ಹೇಳಿ ಕೆಲವೆಡೆ ವಸಿಷ್ಠತ್ವಾದಿ ಗುಣಗಳನ್ನು ಬಿಟ್ಟಿರುವರು. ಬಿಟ್ಟಿರುವ ಕಡೆಗಳಲ್ಲೂ ಆ ಗುಣಗಳನ್ನು ತೆಗೆದುಕೊಂಡು ಒಂದೇ ಪ್ರಾಣವಿದ್ಯೆಯೆಂದು ಪರಿಗ್ರಹಿಸಬೇಕೆಂದು ನಿರೂಪಿಸುವುದು. "ಆನಂದಾದಯಃ ಪ್ರಧಾನಸ್ಯ" ಹಿಂದೆ ಹೇಳಿದಂತೆ "ಆಧ್ಯಾನಾಯ ಪ್ರಯೋಜನಾಭಾವಾತ್" ಈ ಸೂತ್ರಗಳು ನಿರ್ಗುಣವಿದ್ಯೆಯಲ್ಲಿ ಎಲ್ಲೆಡೆಯಲ್ಲೂ ಆನಂದತ್ವ ಸರ್ವಗತತ್ವಾದಿಗುಣಗಳನ್ನು ಉಪಸಂಹರಿಸಬೇಕೆಂದೂ "ಇಂದ್ರಿಯೇಭ್ಯಃ ಪರಾಹ್ಯರ್ಥಾ............ಪುರುಷಾನ್ನ ಪರಂ ಕಿಂಚಿತ್" ಎಂಬ ಶ್ರುತಿಯು ಇಂದ್ರಿಯಾದಿಗಳಿಗೆ ಶ್ರೇಷ್ಠತೆಯನ್ನು ಹೇಳಲು ಹೊರಟಿಲ್ಲವೆಂದೂ, ಇವೆಲ್ಲಕ್ಕಿಂತಲೂ ಆತ್ಮನೇ ಶ್ರೇಷ್ಠನೆಂದು ಹೇಳುವುದೆಂದೂ ನಿರೂಪಿಸುವುವು. ॥೫೩॥

"ಆತ್ಮಗೃಹೀತಿರಿತವದುತ್ತರಾತ್" ಈ ಅಧಿಕರಣವು "ಆತ್ಮಾ ವಾ ಇದ

ತದ್ದರ್ಶನಾತ್ಸಂಭೃತಂ ಚೈವಮೇವೋಽಸಾವಮ್ನಾಯಾದ್ವೇದ್ಯಭಿಧಾತ್ಪರೇತಿ ।
ಗತೇರರ್ಥಾದುಪಪನ್ನಾರ್ಥಲೋಕೇ ಶಬ್ದಾನುಮಾನೈಸ್ಸಗುಣೋವ್ಯ
ಯಾತ್ಮಾ ॥೫೫॥

---

ಮೇಕಂ" ಎಂಬ ಶ್ರುತಿಯಲ್ಲಿ ಮುಂದಿನ ವಾಕ್ಯಾನ್ವಯಾನುಸಾರವಾಗಿ ಪ್ರಜಾಪತಿಯೇ ಸೃಷ್ಟಿಕರ್ತನೆಂದು ತಿಳಿಯುವುದು ಎಂಬ ಪೂರ್ವಪಕ್ಷವನ್ನು ಖಂಡಿಸಿ ಮಿಕ್ಕ ಸೃಷ್ಟಿವಾಕ್ಯಗಳಲ್ಲಿ ಪರಮಾತ್ಮನೇ ಸೃಷ್ಟಿಕರ್ತನೆಂದು ಹೇಳುವುದರಿಂದ ಇಲ್ಲಿಯೂ ಪರಮಾತ್ಮನೇ ಸೃಷ್ಟಿಕರ್ತನು ಎಂದು ನಿರ್ಣಯಿಸುವುದು. "ಕಾರ್ಯಾಖ್ಯಾನಾದಪೂರ್ವಂ" ಈ ಅಧಿಕರಣವು "ತಸ್ಮಾದ್ವಾ ಏತದಶಿಷ್ಯಂತಃ" ಈ ಶ್ರುತಿಯಲ್ಲಿ ಆಚಮನ ಮತ್ತು ಅನಗ್ನತಾಚಿಂತನ ಇವೆರಡೂ ವಿಧಿಸಲ್ಪಡುವವೋ ಎಂದು ಶಂಕಿಸಿ ಆಚಮನವು ಹಿಂದೆಯೇ ಪ್ರಾಪ್ತವಾಗಿರುವುದರಿಂದ ಅನಗ್ನತಾಚಿಂತನವೇ ಇಲ್ಲಿ ವಿಧಿಸಲ್ಪಡುವುದು ಎಂದು ನಿರ್ಣಯಿಸುವುದು. "ಸಮಾನಮೇವಂ ಚಾಭೇದಾತ್" ಈ ಅಧಿಕರಣವು ವಾಜಸನೆಯಿಶಾಖೆಯಲ್ಲಿ ಎರಡುಬಾರಿ ಹೇಳುವ ಶಾಂಡಿಲ್ಯವಿದ್ಯೆಯು ಒಂದೇ ಹೊರತು ಎರಡಲ್ಲ. ಒಂದು ವಿದ್ಯೆಯನ್ನು ಹೇಳುವುದು, ಮತ್ತೊಂದು ಗುಣವನ್ನು ಹೇಳುವುದು ಎಂದು ನಿರ್ಣಯಿಸುವುದು. ॥೫೪॥

"ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ" ಈ ಅಧಿಕರಣವು "ಬ್ರಹ್ಮಜ್ಯೇಷ್ಠಾ" ಇತ್ಯಾದಿ ಶ್ರುತಿಯಲ್ಲಿ ಹೇಳುವ ವೀರ್ಯಸಂಭೃತಿದ್ಯುನಿವೇಶಾದಿ ವಿಭೂತಿಗಳು ಮುಂದಿನ ಶಾಂಡಿಲ್ಯವಿದ್ಯೆಯಲ್ಲಿ ಉಪಸಂಹರಿಸಲ್ಪಡಬೇಕಾದವಲ್ಲವೆಂದು ನಿರೂಪಿಸುವುದು. "ಪುರುಷವಿದ್ಯಾಯಾಮಿವ ಚೇತರೇಷಾಮನಾಮ್ನಾನಾತ್" ಈ ಅಧಿಕರಣವು ತಾಂಡಿಪೈಂಗಿಶಾಖೆಗಳಲ್ಲಿ ಹೇಳುವ ಪುರುಷವಿದ್ಯೆಯೂ ತೈತ್ತಿರೀಯ ಶಾಖೆಯ ಪುರುಷವಿದ್ಯೆಯೂ ಸಹ ಪ್ರತ್ಯಭಿಜ್ಞೆಯಿಲ್ಲದುದರಿಂದ ಬೇರೆ ಬೇರೆ ಎಂದು ನಿರೂಪಿಸುವುದು. "ವೇಧಾದ್ಯರ್ಥಭೇದಾತ್" ಈ ಅಧಿಕರಣವು ಆಥರ್ವಣಿಕಾದಿ ಶಾಖೆಗಳಲ್ಲಿ ಹೇಳಿರುವ ಹೃದವೇಧಾದಿಗಳು ಮುಂದೆ ಸಮೀಪದಲ್ಲಿಯೇ ಪಠಿಸಿರುವ ಉಪನಿಷದ್ವಿದ್ಯೆಗೆ ಸಂಬಂಧಿಸಿದವುಗಳಲ್ಲ. ಸಾನ್ನಿಧ್ಯವಿದ್ದರೂ ಉಪನಿಷದ್ವಿದ್ಯೆಗೆ ಹೃದಯಭೇದಾದಿ ಸಂಬಂಧವಿಲ್ಲವೆಂದು ನಿರ್ಣಯಿಸುವುವು. "ಗತೇರರ್ಥವತ್ತ್ವಂ" ಈ ಅಧಿಕರಣವು ನಿರ್ಗುಣವಿದ್ಯೆಯ ಬಳಿಯಲ್ಲಿ ಹೇಳುವ ಗತಿಯು ದೇಶಾಂತರ ಪ್ರಾಪ್ತಿಯಲ್ಲ, ಸ್ವಸ್ವರೂಪಾವಾಪ್ತಿಯು. ಸಗುಣವಿದ್ಯೆಯ ಬಳಿಯಲ್ಲಿ ಹೇಳುವ ಗತಿಯು ದೇಶಾಂತರಗಮನವೆಂದು ನಿರ್ಣಯಿಸುವುದು. "ಅನಿಯಮಃ ಸರ್ವಾ

ಯಥಾಧಿಕಾರಂ ಸ್ಥಿತಿರೇವ ಚಾಂತರಾ ತಥಾತ್ಮನಃ
ತತ್ರೈವ ಭೇದಾದ್ವಿಶಿಷಂತೀಹ ತಾಂ ತರತ್ ।
ಅನ್ಯತ್ರತಥಾ ಸತ್ಯಕೃತ್ಯಾ ತಥೈಕೇ
ಕಾಮಾದಿರತ್ರಾಯತನೇಷು ಚಾದರಾತ್ ॥೫೭॥

---

ಸಾಮವಿರೋಧಃ ಶಬ್ದಾನುಮಾನಾಭ್ಯಾಂ" ಈ ಅಧಿಕರಣವು ದೇಶಾಂತರಪ್ರಾಪ್ತಿ ರೂಪವಾದ ಗತಿಯನ್ನು ಹೇಳದ ಕೆಲವು ಶಾಂಡಿಲ್ಯಷೋಡಶಕಲಾದಿವಿದ್ಯೆಗಳಲ್ಲಿ ಗತಿಯಿಲ್ಲವೇ ? ಇದೆಯೇ ? ಎಂದು ಶಂಕಿಸಿ ಶ್ರುತಿ ಮತ್ತು ಅನುಮಾನಗಳಿಂದ ಸಗುಣವಿದ್ಯೆಗಳೆಲ್ಲವುಗಳಲ್ಲಿ ಹೇಳದಿದ್ದರೂ ಸ್ವರ್ಗಲೋಕಾದಿಪ್ರಾಪ್ತಿರೂಪವಾದ ಗತಿಯು ಇದ್ದೇ ಇದೆಯೆಂದು ನಿರ್ಣಯಿಸುವುದು. ॥೫೫॥

"ಯಾವದಧಿಕಾರಮುಪಸ್ಥಿತಿರಾಧಿಕಾರಿಕಾಣಾಂ" ಈ ಸೂತ್ರವು ಬ್ರಹ್ಮಜ್ಞಾನಿಯಾದವನು ಪುನಃ ಜನ್ಮಾಂತರವನ್ನು ಹೊಂದುವನೇ ? ಇಲ್ಲವೇ ? ಎಂದು ಶಂಕಿಸಿ ಪ್ರಾರಬ್ಧಕರ್ಮವು ಕ್ಷಯಿಸುವವರಿಗೂ ಜನ್ಮಾಂತರಗಳನ್ನು ಹೊಂದುತ್ತಲಿದ್ದು ಕರ್ಮಕ್ಷಯವಾದ ಮೇಲೆ ವಿದೇಹಕೈವಲ್ಯವನ್ನು ಹೊಂದುವನು-ಎಂದು ನಿರೂಪಿಸುವುದು. "ಅಂತರಾಭೂತಗ್ರಾಮವತ್" ಈ ಅಧಿಕರಣವು, "ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾಂತರಃ" ಇದು ಎರಡು ವಿದ್ಯೆಗಳನ್ನು ಬೋಧಿಸುವುದಿಲ್ಲ. ದೃಢವಾಗಿ ತಿಳಿಸುವುದಕ್ಕೋಸ್ಕರ ಎರಡುಬಾರಿ ಹೇಳಿದೆ ಎಂದು ನಿರ್ಣಯಿಸುವುದು. "ವ್ಯತೀಹಾರೋ ವಿಶಿಂಷತಿ ಹೀತರವತ್" ಈ ಅಧಿಕರಣವು "ತದ್ಯೋಽಹಂ ಸೋಽಸೌ ಯೋಽಸೌ ಸೋಽಹಂ" ಎಂಬ ಮಂತ್ರದಲ್ಲಿ ಏಕಾತ್ಮವಾದಾನುಸಾರವಾಗಿ ಒಂದೇರೀತಿಯಲ್ಲಿ ತಿಳಿಯಬೇಕೆ ? ಎರಡು ಬಗೆಯಾಗಿಯೇ ? ಎಂದು ಶಂಕಿಸಿ ಉಪಾಸನೆಯನ್ನು ಎರಡು ಬಗೆಯಿಂದಲೂ ಮಾಡಬೇಕು, ಎಂದು ನಿರೂಪಿಸುವುದು. "ಸೈವ ಹಿ ಸತ್ಯಾದಯಃ" ಈ ಸೂತ್ರವು ಎರಡು ಫಲಗಳನ್ನು ಹೇಳುವ ಸತ್ಯವಿದ್ಯೆಯು ಎರಡು ಬಗೆಯೆ ? ಒಂದೇ ? ಎಂದು ಶಂಕಿಸಿ "ತದ್ಯತ್ಸತ್ಯಂ" ಎಂಬೊಂದೇ ಬಗೆಯ ಸಮಾಕರ್ಷಣದಿಂದ ಒಂದೇ ವಿದ್ಯೆಯೆಂದು ನಿರೂಪಿಸುವುದು. "ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ" ಈ ಅಧಿಕರಣವು "ಅಥ ಯದಿದಮಸ್ಮಿನ್ ಬ್ರಹ್ಮಪುರೆ" ಎಂಬ ದಹರವಿದ್ಯೆಯಲ್ಲಿನ ಸತ್ಯಕಾಮಾದಿಗುಣಗಳನ್ನು ವಾಜಸನೇಯಶಾಖೆಯು "ಸ ವಾ ಏಷ" ಎಂಬ ಮಂತ್ರನಿರೂಪಿತವಿದ್ಯೆಗೂ ಉಪಸಂಹರಿಸಬೇಕು. ಎರಡೆಡೆಯಿಯೂ ಆಯತನತ್ವಾಭೇದದಿಂದ ವಿದ್ಯೆಯು ಒಂದೇ

ಉಪಸ್ಥಿತೇ ತದ್ವಚನಾತ್ತಥಾಗ್ನೇಃ
ಸಂಲೋಪ ಏವಾಗ್ನಿಭವಃ ಪ್ರದಾನೇ।
ಅತೋಽನ್ಯಚಿಂತಾರ್ಥಭೇದಲಿಂಗಂ ಬಲೀಯಃ
ಕ್ರಿಯಾಪರಂ ಚಾಸಮಾನಾಚ್ಚ ದೃಷ್ಟೇಃ ॥೫೭॥

ಶ್ರುತೇರ್ಬಲಾದನುಬಂಧೇನ ಖೇ ವೈ ಭಾವಾಪತ್ತಿಶ್ಚಾತ್ಮನಶ್ಚೈಕ ಏವ।
ತದ್ಭಾವಭಾವಾದುಪಲಬ್ಧಿರೀಶೇ ಸದ್ಭಾವಭಾವಾದನುಭಾವತಶ್ಚ ॥೫೮॥

---

ಎಂದು ನಿರೂಪಿಸುವುದು, "ಆದರಾದಲೋಪಃ" ಈ ಅಧಿಕರಣವು ವೈಶ್ವಾನರವಿದ್ಯೆಯಲ್ಲಿ ಪ್ರಥಮವಾಗಿ ಬಂದಿರುವ ಅನ್ನದಿಂದ ಪ್ರಥಮಪ್ರಾಣಾಹುತಿಯನ್ನು ಕೊಡಬೇಕು; ಇದೇ ಅಗ್ನಿಹೋತ್ರವೆಂದಿದೆ. ಆದುದರಿಂದ ಭೋಜನವಿಲ್ಲದಿದ್ದರೆ ಪ್ರಾಣಾಗ್ನಿಹೋತ್ರವೂ ಇಲ್ಲವೆಂದು ನಿರೂಪಿಸುವುದು. ॥೫೬॥

"ಪ್ರದಾನವದೇವ ತದುಕ್ತಂ" ಈ ಅಧಿಕರಣವು ವಾಜಸನೇಯಕಛಾಂದೋಗ್ಯಗಳಲ್ಲಿ ಹೇಳುವ ವಾಯುಪ್ರಾಣವಿದ್ಯೆಗಳು ಬೇರೆ ಬೇರೆಯೆಂದು ನಿರೂಪಿಸುವುದು. "ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ" ಈ ಅಧಿಕರಣವು ವಾಜಸನೇಯಕದ ಅಗ್ನಿರಹಸ್ಯದಲ್ಲಿ ಹೇಳುವ ಮನಶ್ಚಿದಾದಿಗಳು ಸ್ವತಂತ್ರವಿದ್ಯೆಗಳೆಂದು ನಿರ್ಣಯಿಸುವುದು. ॥೫೭॥

"ಏಕ ಆತ್ಮನಃ ಶರೀರೇ ಭಾವಾತ್" ಈ ಅಧಿಕರಣವು ದೇಹಕ್ಕಿಂತ ಭಿನ್ನನಾದ ಲೋಕಾಂತರವನ್ನೈದುವ ಆತ್ಮನಿಲ್ಲ, ದೇಹವೇ ಆತ್ಮ, ಹೇಗೆ ಅಗ್ನಿಯ ಉಷ್ಣತೆಪ್ರಕಾಶಗಳು ಅಗ್ನಿಯಿರುವವರೆಗಿದ್ದು ಆರಿದಮೇಲೆ ಹೋಗುವುವೋ ಅದರಂತೆ ಆತ್ಮನೂ ಸಹ ದೇಹವಿದ್ದಾಗ ಇದ್ದು ಆಮೇಲೆ ಹೋಗುವುದರಿಂದ ಉಷ್ಣಪ್ರಕಾಶಗಳು ಅಗ್ನಿಯ ಧರ್ಮದಂತೆ ಆತ್ಮನೂ ದೇಹಧರ್ಮವು ಬೇರೆಯಲ್ಲ; ದೇಹಬಿದ್ದಮೇಲೆ ಮೃತನಾಗುವನು. ಎನ್ನುವ ನಾಸ್ತಿಕಮತವನ್ನು ಖಂಡಿಸುತ್ತಾ ಅಗ್ನಿಯು ಆರಿದ ಮೇಲೆ ಉಷ್ಣಪ್ರಕಾಶಗಳು ಹೋಗುವಂತೆ ಅಲ್ಲ. ದೃಷ್ಟಾಂತವು ಸರಿಯಲ್ಲ. ಆತ್ಮನು ಹೊರಟುಹೋದರೂ ದೇಹವಿರುವುದರಿಂದ ಆತ್ಮನು ದೇಹಧರ್ಮವಲ್ಲ, ದೇಹಕ್ಕಿಂತ ಭಿನ್ನನು, ದೇಹವನ್ನು ಬಿಟ್ಟು ಕರ್ಮವಶಾತ್ ಬೇರೆ ದೇಹವನ್ನು ಮತ್ತೆ ಪಡೆಯುವನು ಎಂದು ನಿರೂಪಿಸುವುದು. ॥೫೮॥

ಅಂಗಾವಬದ್ಧಾಹಿ ತಥೈವ ಮಂತ್ರತೋ ಭೂಮ್ನೋ ಕ್ರತೋರ್ಜಾಯತೇ
ದರ್ಶನೇನ
ರೂಪಾದೇಶ್ಚ ವಿಪರ್ಯಯೇಣ ಚದೃಶಾ ದೋಷೋಭಯತ್ರಾಪ್ಯಯಂ
ಅಗ್ರಾಹ್ಯಾಸ್ಸಕಲಾನಪೇಕ್ಷ್ಯಕರಣಂ ಪ್ರಾಧಾನ್ಯವಾದೇನ ಹಿ ।
ತತ್ಪ್ರಾಪ್ತಿಸ್ಸಮುದಾಯಕೇಪಿ ಇತರೇ ಪ್ರತ್ಯಾಯಿಕೇನಾಪಿ ಯತ್
ವಿದ್ಯಾವಿದ್ಯಾ ಅಸತಿ ಬಲತೋ ಧುರ್ಯಮಾರ್ಯಾಭಿಶಂಸೀ ॥೫೯॥

ದೋಷೋಭಯೋರಪಿ ತದಾ ಖಗಮಾಭ್ಯುಪೇಯಾ ।
ಸ್ಮೃತ್ಯಾ ಸತೋ ದೃಶಿ ಉದಾಸಿನವದ್ಭಜೇತ ॥೬೦॥

---

"ಅಂಗಾವಬದ್ಧಾಸ್ತು ನ ಶಾಖಾಸು ಪ್ರತಿವೇದಂ" ಈ ಅಧಿಕರಣವು ಶಾಖಾಂತರಗಳಲ್ಲಿ ಹೇಳುವ ಉದ್ಗೀಥವಿದ್ಯೆಯ ಪ್ರತ್ಯಯಗಳೆಲ್ಲವೂ, ಒಂದೇ ಉದ್ಗೀಥವಿದ್ಯೆಯ ಅಂಗಗಳೆಂದು ಶ್ರುತಿಬಲದಿಂದ ನಿರೂಪಿಸುವುದು. "ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತಥಾ ಹಿ ದರ್ಶಯತಿ" ಈ ಅಧಿಕರಣವು ಯಾಗವನ್ನು ಸಾಂಗಪ್ರಧಾನವಾಗಿ ಸಮಸ್ತವಾಗಿ ಅನುಷ್ಠಾನಮಾಡುವಂತೆ ಬೇರೆ ಬೇರೆಯಾಗಿ ಹೇಳಿದ್ದರೂ ವೈಶ್ವಾನರೋಪಾಸನೆಯನ್ನು ಸಮಸ್ತವಾಗಿ ಒಂದೇ ಭಾವನೆಯಾಗಿ ಮಾಡಬೇಕು ಎಂದು ನಿರ್ಣಯಿಸುವುದು. "ರೂಪಾದಿಮತ್ತ್ವಾಚ್ಚ ವಿಪರ್ಯಯೋ ದರ್ಶನಾತ್" ಈ ಸೂತ್ರವು ಕಾರ್ತಿಕಮತದ ಪರಮಾಣುವಾದವನ್ನು ಖಂಡಿಸುವುದು. ಕಾರ್ತಿಕರು ಜಗತ್ಕಾರಣವೆನ್ನುವ ಪರಮಾಣುವು ರೂಪವತ್ತಾದುದು ಮತ್ತು ನಿತ್ಯವಾದುದು ಎನ್ನುವರು. ಇದು ಅನುಭವವಿರುದ್ಧವು. ಲೋಕದಲ್ಲಿ ರೂಪವತ್ತಾದ ಪದಾರ್ಥವೆಲ್ಲವೂ ಅನಿತ್ಯವಾಗಿರುವುದು, ಆದುದರಿಂದ ಪರಮಾಣುಕಾರಣವಾದವು ಸರಿಯಲ್ಲ, ಎಂದು ನಿರೂಪಿಸುವುದು, "ಸಮುದಾಯ ಉಭಯಹೇತುಕೇಪಿ ತದ ಪ್ರಾಪ್ತಿಃ" ಈ ಅಧಿಕರಣವು ವೈನಾಶಿಕ (ಶೂನ್ಯವಾದಿ) ಮತವನ್ನು ಖಂಡಿಸುವುದು ಅವರು ಭೂತಭೌತಿಕಸಮುದಾಯ, ಪಂಚಸ್ಕಂದಸಮುದಾಯವೆಂಬೆರಡು ಸಾಮುದಾಯಿಕ ಸೃಷ್ಟಿಯನ್ನು ಒಪ್ಪುವರು. ಇದು ಸರಿಯಲ್ಲ. ಅಚೇತನವಾದ ಈ ಸಮುದಾಯಗಳಿಂದ ಲೋಕವ್ಯವಹಾರವು ನಡೆಯಲಾರದು. ಇಲ್ಲ ನಡೆಯುತ್ತದೆ ಎಂದರೆ ಅವು ಕ್ಷಣಿಕವೆಂದೊಪ್ಪುವುದರಿಂದ ಜಗತ್ತು ಆಕಸ್ಮಿಕವಾಗುವುದು. ॥೫೯॥

"ನಾಸತೋದೃಷ್ಟತ್ವಾತ್" "ಉದಾಸೀನಾನಾಮಪಿ ಚೈವಂ ಸಿದ್ಧಿಃ" "ಉಭಯಥಾಪಿದೋಷಾತ್" ಈ ಸೂತ್ರಗಳೂ ಶೂನ್ಯವಾದವನ್ನು ಖಂಡಿಸುವುವು.

ನಾಭಾವಾದುಪಲಬ್ಧಿತೋಽಪಿ ಭಗವದ್ವೈಧರ್ಮ್ಯಸ್ವನ್ಯಾದಿವತ್
ಭಾವೇನಾಪ್ಯುಪಲಬ್ಧಿರೀಶಿತುರಹೋ ಸಾವೈಕ್ಷಣಂ ಕಲ್ಪ್ಯತೇ ।
ಸರ್ವಾರ್ಥಾನುಪಪತ್ತಿತೋಽಪಿ ಭಗವತ್ಯೇಕಾಽದ್ವಿತೀಯೇಽಪುನಃ
ಕಾರ್ತ್ಸ್ನ್ಯೇನಾತ್ಮನಿ ನೋಽನಿಕಾರಕಲನಂ ನಿತ್ಯಂ ಪತೇರ್ಧರ್ಮತಃ ॥೬೧॥

---

ಶೂನ್ಯವಾದಿಗಳು ಅಸತ್ತಿನಿಂದ ಜಗತ್ತು ಜನಿಸುವುದು, ಹಾಲುನಷ್ಟವಾಗಿ ಮೊಸರು ದಯಿಸುವಂತೆ, ಮಣ್ಣಿನಮುದ್ದೆಯಡಗಿ ಮಡಕೆಯಾಗುವಂತೆ,ಅಭಾವದಿಂದ,ಜಗತ್ತು ಜನಿಸುವುದು ಎನ್ನುವರು. ಇದು ಸರಿಯಲ್ಲ, ಅಭಾವದಿಂದ ಜಗತ್ತುಜನಿಸುವುದಾದರೆ ಒಂದೇ ವಿಧವಾದ ಕಾರಣದಿಂದ ಜನಿಸುವ ಜಗತ್ತು ಒಂದೇ ವಿಧವಾಗಿರಬೇಕಾಗುವುದು. ಎಲ್ಲಕ್ಕೂ ಅಭಾವವು ಒಂದೇ ಕಾರಣವಲ್ಲವೆ ? ಆದರೆ ಹಾಗಿಲ್ಲ, ಜಗತ್ತು ನಾನಾವಿಧವಾಗಿರುವುದು. ಆದುದರಿಂದ ಭಾವವಸ್ತುಗಳಾದ ಅನೇಕ ಬಗೆಯ ಕಾರ್ಯವಸ್ತುಗಳು ಜನಿಸುವವೆಂದು ಒಪ್ಪಿಕೊಳ್ಳಬೇಕು. ನಮ್ಮಲ್ಲಿ ಈಶ್ವರನೊಬ್ಬನೇ ಕಾರಣನಾದರೂ ಕರ್ಮಾನುಸಾರವಾಗಿ ಸೃಷ್ಟಿಸುವುದರಿಂದ ಭಿನ್ನಭಿನ್ನಸೃಷ್ಟಿಯು ಯುಕ್ತವಾಗುವುದು. ಆದರೆ ಶೂನ್ಯವಾದಿಗಳು ಅಂತಹಕರ್ಮವನ್ನು ಒಪ್ಪುವುದಿಲ್ಲ, ಆದುದರಿಂದ ಈ ಮತವು ಸರಿಯಲ್ಲ, ॥೬೦॥

"ನಾಭಾವಾ ಉಪಲಬ್ಧೇ'' ಈ ಅಧಿಕರಣವು ವಿಜ್ಞಾನವಾದಿಬೌದ್ಧಮತವನ್ನು ಖಂಡಿಸುವುದು. ವಿಜ್ಞಾನವಾದಿಗಳು ಜ್ಞಾನವ್ಯತಿರಿಕ್ತವಾಗಿ ಬಾಹ್ಯವಸ್ತುಗಳನ್ನಾವುದನ್ನೂ ಒಪ್ಪುವುದಿಲ್ಲ, ಎಲ್ಲವೂ ಜ್ಞಾನದ ಆಕಾರವು, ವಾಸನಾವಶಾತ್ ಭಿನ್ನಭಿನ್ನವಾಗಿ ಆಕಾರಗಳು ಜನಿಸುವುವು. ಜ್ಞಾನವೂ ಸಹ ಕ್ಷಣಿಕವೇ, ಅದು ಆಲಯವಿಜ್ಞಾನ, ಪ್ರವೃತ್ತಿವಿಜ್ಞಾನಗಳೆಂದೆರಡುಬಗೆಯಾಗಿದೆ—ಎಂದು ಹೇಳುವರು. ಇದು ಸರಿಯಲ್ಲ. ಬಾಹ್ಯವಸ್ತುವು ಜ್ಞಾನಕ್ಕಿಂತ ಬೇರೆಯಾಗಿರುವುದರಿಂದ ಜ್ಞಾನಾಕಾರಮತವು ಸರಿಯಲ್ಲ. ಮತ್ತು ಜ್ಞಾನಕ್ಕಿಂತ ಭಿನ್ನವಾಗಿ ಯಾವ ಬಾಹ್ಯವಸ್ತುವೂ ಇಲ್ಲದಿದ್ದರೆ ಬೇರೆ ಬೇರೆ ವಿಧವಾಗಿ ಜ್ಞಾನಗಳು ಹೇಗೆ ಉದಯಿಸುವುವು? ಜ್ಞಾನವೆಲ್ಲವೂ ಒಂದೇ ಅಲ್ಲವೆ? ಜ್ಞಾನಭೇದವನ್ನು ತೋರುವ ಬಾಹ್ಯವಸ್ತುಗಳು ನಿಮ್ಮಲ್ಲಿಲ್ಲ. ಆದುದರಿಂದ ಜ್ಞಾನಾಕಾರಮತವು ಸರಿಯಲ್ಲ, ಸ್ವಪ್ನದಂತೆ ಜ್ಞಾನಭಿನ್ನವಾದ ವಸ್ತುಗಳಿಲ್ಲವೆನ್ನುವುದೂ ಸರಿಯಲ್ಲ. ಸ್ವಪ್ನಾವಸ್ಥೆಗೂ ಜಾಗ್ರದವಸ್ಥೆಗೂ ಬಾಧಾಬಾಧಗಳಿಂದ ಭೇದವಿರುವುದರಿಂದ ದೃಷ್ಟಾಂತವು ಸರಿಯಲ್ಲ. ಆದುದರಿಂದ ಬಾಹ್ಯವಸ್ತುಗಳು ಜ್ಞಾನವಿಷಯವಾಗುವುದರಿಂದ ಜ್ಞಾನಕ್ಕಿಂತ ಭಿನ್ನವಾಗಿವೆ.

ಸಂಬಂಧಾನುಪಪತ್ತಿತೋಽಪಿ ಸಮಧಿಷ್ಠಾನೋಪಪತ್ತೇರಪಿ
ತಚ್ಛ್ರೈವಾಕರಣಂ ಚ ಭೋಗವಿಧುರಂ ತ್ವಂ ತತ್ತ್ವಸರ್ವಜ್ಞತಾ ।
ಉತ್ಪತ್ತೇರಪಿ ಕರ್ತುರೇವ ಕಾರಣಯಾ ವಿಜ್ಞಾನಭಾವೋ ಯದಿ
ನಿಷೇಧಪ್ರತಿಪತ್ತಿತೋಽಪಿ ಮರುತಶ್ಚಾಕಾಶತಃ ಪ್ರಾಣತಃ ॥೬೨॥

---

ಎಂದು ಒಪ್ಪಿಕೊಳ್ಳಬೇಕು. "ನೈಕಸ್ಮಿನ್ನಸಂಭವಾತ್" ಈ ಅಧಿಕರಣವು ದಿಗಂಬರ ಮತವನ್ನು ಖಂಡಿಸುವುದು. ಅವರು ಪ್ರಪಂಚವು ಅನೇಕಾಂತ (ಹೀಗೆಯೇ ಇದೆ ಎನ್ನಲಾಗದುದು) ವೆನ್ನುವರು. ಇರಬಹುದು, ಇಲ್ಲದಿರಬಹುದು, ಇದ್ದರೂ ಇರಬಹುದು ಇಲ್ಲದೆಯೂ ಇರಬಹುದು, ಹೇಳುವಂತಹುದು, ಹೇಳದಂತಹುದು, ಹೇಳಿಯೂ ಹೇಳದೆಯೂ ಇರುವಂತಹುದು, ಇದೆ ಇಲ್ಲ ಹೇಳಲಾರದು"—ಎಂದು ಏಳು ಬಗೆಯಾಗಿ ಪ್ರಪಂಚ ಅನೇಕಾಂತವೆನ್ನುವರು. ಇದು ಸರಿಯಲ್ಲ. ಒಂದು ವಸ್ತುವಿನಲ್ಲಿ ಈ ಏಳುಬಗೆಯ ಭಾವನೆಗಳು ಏಕಕಾಲದಲ್ಲಿ ಬರುವುದಿಲ್ಲ, ಇದ್ದರೆ ಇದೆ ಎನ್ನುತ್ತಾರೆ, ಇಲ್ಲದಿದ್ದರೆ ಇಲ್ಲವೆನ್ನುತ್ತಾರೆ, ಹೀಗೆ ನಿಶ್ಚಿತವಾದ ಭಾವನೆಯು ಬರುತ್ತಲಿರುವುದರಿಂದ ಪ್ರಪಂಚವು ಅನೇಕಾಂತವೆನ್ನುವುದು ತಪ್ಪು. ಮತ್ತು ಜೀವನು ದೇಹದ ಆಕಾರನು ಎನ್ನುವುದೂ ತಪ್ಪು. ದೇಹವು ಅನಿತ್ಯವಾದಂತೆ ಜೀವನೂ ಅನಿತ್ಯನಾಗುವನು. ದಿಗಂಬರರು ಮುಕ್ತಾವಸ್ಥೆಯ ಜೀವನು ನಿತ್ಯನೆನ್ನುವರು. ಇದಕ್ಕೂ ವಿರೋಧಬರುವುದು. ದೇಹಾಕಾರನಾದ ಜೀವನು ಅನಿತ್ಯನಾದಂತೆ ಮುಕ್ತಾವಸ್ಥೆಯಲ್ಲೂ ಜೀವನು ದೇಹಾಕಾರನೇ. ಆದುದರಿಂದ ಅನಿತ್ಯತೆಯ ಆಪಾದನೆಯು ಬರುವುದು. ಆದುದರಿಂದ ಈ ದಿಗಂಬರ ಜೈನ ಮತವು ಸರಿಯಾದುದಲ್ಲ. ॥೬೧॥

"ಪತ್ಯುರಸಾಮಂಜಸ್ಯಾತ್" "ಸಂಬಂಧಾನುಪಪತ್ತೇಃ" ಈ ಅಧಿಕರಣವು ಈಶ್ವರನು ಜಗತ್ತಿಗೆ ನಿಮಿತ್ತಕಾರಣವೆನ್ನುವ ಮತಗಳನ್ನು ಖಂಡಿಸುವುದು. ವೇದಾಂತವಾಕ್ಯಗಳು ಈಶ್ವರನನ್ನು ವಿವರ್ತೋಪಾದಾನಕಾರಣವನ್ನಾಗಿ ಹೇಳುವುವು. ಈಮತಗಳು ಈಶ್ವರನು ಪ್ರಕೃತಿಯನ್ನು ಅಧಿಷ್ಠಿಸಿ ಸೃಷ್ಟಿಸುವನು, ಈಶ್ವರ, ಪ್ರಕೃತಿ ಪುರುಷರು ಮೂವರೂ ಅನಂತರು, ಎನ್ನುವರು. ಇದು ಸರಿಯಲ್ಲ. ನಿರೂಪವಾದ ಪ್ರತ್ಯಕ್ಷವಲ್ಲದ ಪ್ರಧಾನವು ಈಶ್ವರನಿಗೆ ಅಧಿಷ್ಠಾನವಾಗಲಾರದು. ಅಲ್ಲದೇ ಪ್ರಧಾನ ಪುರುಷೇಶ್ವರರು ಮೂವರೂ ಅನಂತರಾದ ಒಬ್ಬೊಬ್ಬರ ಅನಂತತ್ವದಿಂದ ಮತ್ತೊಬ್ಬರು ಅಂತವಂತರಾಗುವರು. ಇದರಿಂದ ಅನಿತ್ಯತ್ವವು ಒದಗುವುದು ಎಂದು ನಿರೂಪಿ

ಅಸ್ತಿತ್ವೇ ತ್ವದಪೀತಿಗೌಣಪರತಾ ವಾಕ್ಯೇಷು ಭಿನ್ನಾ ಕ್ರಿಯಾ
ಕಾರ್ಯದ್ರವ್ಯಸಮನ್ವಯಾಯ ಕರಣಂ ಶಬ್ದಾಚ್ಚ ಬ್ರಹ್ಮೈವ ತತ್ ।
ಶಬ್ದೇಭ್ಯೋಪ್ಯಘುತಂ ಶ್ರುತಂ ಭವತಿ ತಜ್ಜ್ಞಾನಂ ಪರಂ ಶಾಂಭವಂ
ಯಾವಲ್ಲೋಕವಿಭಾಗಕಲ್ಪನವಶಾತ್ ಭೂತಕ್ರಮಾತ್ಸರ್ಜತಿ ॥೬೩॥

---

ಸುವುವು. "ಉತ್ಪತ್ತ್ಯಸಂಭವಾತ್" ಈ ಅಧಿಕರಣವು ಚತುರ್ವ್ಯೂಹವಾದವನ್ನು ಖಂಡಿಸುವುದು. ಅವರು ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ನಾಲ್ಕುವ್ಯೂಹಗಳನ್ನು ಕಲ್ಪಿಸಿ ವಾಸುದೇವನೇ ಪರಮಾತ್ಮ. ಆತನಿಂದ ಜೀವನಾದ ಸಂಕರ್ಷಣನು ಜನಿಸುವನು. ಸಂಕರ್ಷಣನಿಂದ ಪ್ರದ್ಯುಮ್ನನೆಂದರೆ ಮನುವು ಜನಿಸುವುದು, ಪ್ರದ್ಯುಮ್ನನಿಂದ ಅಹಂಕರವಾದ ಅನಿರುದ್ಧನು ಜನಿಸುವನೆಂದು ಹೇಳುವರು. ಇದು ಸರಿಯಲ್ಲ. ಜೀವನು ನಿತ್ಯನಾಗಿದ್ದು ಮುಂದೆ ವಾಸುದೇವನ ಅನುಗ್ರಹದಿಂದ ಮುಕ್ತಿಯನ್ನು ಪಡೆಯುವವನು, ಅವನು ಜನಿಸುವನೆಂದರೆ ಜೀವನಿಗೆ ಅನಿತ್ಯತ್ವವು ಬರುವುದು, ಇದು ಸಿದ್ಧಾಂತಕ್ಕೆ ವಿರೋಧ. ಮತ್ತು ಜೀವನಿಗೆ ಮನವು ಕರಣ, ಅದು ಜೀವನಿಂದ ಜನಿಸುವುದೆನ್ನುವರು. ಇದೂ ತಪ್ಪು, ಲೋಕದಲ್ಲಿ ಸೌದೆಯೊಡೆಯುವುದಕ್ಕೆ ಮೊದಲು ಕರಣವಾದ ಕೊಡಲಿಯು ಸಿದ್ಧವಾಗಿರುವುದು, ಮತ್ತು ಸೌದೆಯೊಡೆಯುವವನಿಂದ ಕೊಡಲಿಯು ಜನಿಸುವುದೆನ್ನುವುದೂ ಇಲ್ಲ. ಆದರಂತೆ ಇಲ್ಲಿ ಕರಣವಾದ ಮನಸ್ಸು ಜೀವನಾದ ಸಂಕರ್ಷಣನಿಂದ ಜನಿಸುವುದೆನ್ನುವುದೂ ತಪ್ಪು-ಎಂದೂ ನಿರ್ಣಯ. ಲೋಕವಿರುದ್ಧ ಕಲ್ಪನೆಯಿಂದಲೂ ವೇದವಿರುದ್ಧವಾದುದರಿಂದಲೂ, ಈ ಭಾಗವತ ಮತವು ನಿಂದನೀಯವಾದುದು ಎಂದು ಸಿದ್ಧಾಂತವು. ॥೬೨॥

"ನವಿಯದಶ್ರುತೇಃ" "ಅಸ್ತಿತು" ಈ ಅಧಿಕರಣವು ಆಕಾಶೋತ್ಪತ್ತಿಯನ್ನು ಸಾಧಿಸುವುದು. ಛಾಂದೋಗ್ಯಶ್ರುತಿಯಲ್ಲಿ ಆತ್ಮನಿಂದ ಸೃಷ್ಟಿಯನ್ನು ಹೇಳುತ್ತಾ ಮೊದಲು ತೇಜಸ್ಸೃಷ್ಟಿಯನ್ನು ಹೇಳಿದೆ. ಆದುದರಿಂದ ಆಕಾಶಕ್ಕೆ ಉತ್ಪತ್ತಿ ಇಲ್ಲ, ಅದು ನಿತ್ಯವು-ಎಂದು ಪೂರ್ವಪಕ್ಷವು ಬಂದರೆ ಅದಕ್ಕೆ ಸಮಾಧಾನ, ತೈತ್ತಿರೀಯದಲ್ಲಿ "ತಸ್ಮಾತ್ ಆಕಾಶಃ ಸಂಭೂತಃ" ಎಂದು ಹೇಳಿರುವುದರಿಂದ ಆಕಾಶಸೃಷ್ಟಿಯಿದೆ. ಛಾಂದೋಗ್ಯದಲ್ಲಿ ಆಕಾಶವನ್ನು ಸೃಜಿಸಿ ಅನಂತರ ತೇಜಸ್ಸನ್ನು ಸೃಷ್ಟಿಸಿದರು. ಎಂದು ಕ್ರಮಕಲ್ಪನೆ ಇದೆ. ಪರಸ್ಪರ ಶ್ರುತಿಗಳಿಗೆ ಹೀಗೆ ವಿರೋಧಪರಿಹಾರವು. ॥೬೩॥

ತಸ್ಯಾಸಂಭವತೋ ಭವೇಜ್ಜಗದಿದಂ ತೇಜಃ ಪ್ರಸೂತಂ ಶ್ರುತಿ ।
ಶ್ಚಾಪಸ್ತ್ವಾಮುರುದೇವ ಖಾತ್ಪ್ರಕಥಯತ್ತಲ್ಲಿಂಗಸಂಜ್ಞಾನತಃ ॥೬೪॥

ವಿಪರ್ಯಯೇಣ ಕ್ರಮತೋಂತರಾ ಹಿ
ವಿಜ್ಞಾನಮಾನಕ್ರಮತೋ ವಿಶೇಷಾತ್ ।
ನ ಚಾತ್ಮನಃ ಕಾರಣತಾವಿಪರ್ಯಯೋ
ಚರಾಚರವ್ಯಾಪಕತೋ ಹಿ ಭಾವ್ಯಃ ॥೬೫॥

---

"ಅಸಂಭವಸ್ತು" ಎಂಬಧಿಕರಣವು ಬ್ರಹ್ಮನಿಗೆ ಉತ್ಪತ್ತಿಯಿಲ್ಲವೆಂದು ಸಮರ್ಥಿಸುವುದು. ಬ್ರಹ್ಮನಿಗೂ ಉತ್ಪತ್ತಿಮತ್ತ್ವವು ಬಂದರೆ ಅನಿತ್ಯತ್ವವು ಬಂದು ಶೂನ್ಯವಾದವಾಗುವುದು. "ತೇಜೋತಃ" "ಆಪಃ" ಈ ಎರಡಧಿಕರಣಗಳು ಛಾಂದೋಗ್ಯಶ್ರುತಿಯಲ್ಲಿ ತೇಜಸ್ಸೃಷ್ಟಿಯು ಮೊದಲಿದ್ದರೂ ತೈತ್ತಿರೀಯಕ್ಕನು ಸಾರವಾಗಿ, ವಾಯುವಿನಿಂದ ತೇಜಸ್ಸೂ, ತೇಜಸ್ಸಿನಿಂದ ಜಲವೂ, ಜನಿಸಿದುವೆಂದು ಕ್ರಮಕ್ರಮವನ್ನು ಕಲ್ಪಿಸುವುವು. "ಪೃಥಿವ್ಯಧಿಕಾರ" "ತದಭಿಧ್ಯಾನಾದೇವತು" ಇವೆರಡಧಿಕರಣಗಳು "ತಾ ಅನ್ನಮಸೃಜಂತ" ಎಂಬ ಶ್ರುತಿಯಲ್ಲಿನ ಅನ್ನ ಪದಾರ್ಥವು ಪೃಥಿವಿಯೆಂದೂ, ತೇಜಸ್ಸು ಸೃಷ್ಟಿಸಿತು, ಜಲವು ಸೃಷ್ಟಿಸಿತು, ಎನ್ನುವ ಭೂತಸೃಷ್ಟಿಯಲ್ಲೆಲ್ಲಾ ಭೂತಾಂತರ್ಯಾಮಿಪರಮೇಶ್ವರನೇ ಸೃಷ್ಟಿಸಿದವನು ಎಂದರ್ಥವನ್ನು ಕಲ್ಪಿಸಬೇಕು ಎಂದು ನಿರ್ಣಯಿಸುವುವು. ॥೬೪॥

"ವಿಪರ್ಯಯೇಣ ಕ್ರಮೋತಉಪಪದ್ಯತೇಚ" ಈ ಅಧಿಕರಣವು ಭೂತಪ್ರಳಯ ಕ್ರಮವನ್ನು ವಿವರಿಸುವುದು. ಆಕಾಶಾದಿಗಳಿಂದ ಸೃಷ್ಟಿಯು ಪ್ರಾರಂಭವಾಗಿ ಭೂಮಿಪರ್ಯಂತವಾಗಿ ನಡೆಯುವಂತೆ ಅದಕ್ಕೆ ವಿಪರೀತವಾದ ಭೂಮಿಯಿಂದ ಮೊದಲುಗೊಂಡು ಆಕಾಶಪೂರ್ತಿಯಾಗಿ ಪ್ರಳಯವು ಆಗುವುದು. ಲೋಕದಲ್ಲಿ ಮೆಟ್ಟಲುಗಳನ್ನು ಯಾವರೀತಿಯಿಂದೇರುವರೋ, ಅದಕ್ಕೆ ವಿರುದ್ಧವಾದ ರೀತಿಯಿಂದ ಇಳಿಯುವಂತೆ ಸೃಷ್ಟಿಕ್ರಮಕ್ಕೆ ವಿಪರೀತವಾಗಿ ಪ್ರಳಯವಾಗುವುದು. "ಅಂತರಾ ವಿಜ್ಞಾನಮನಸೀ" ಈ ಅಧಿಕರಣವು ಬುದ್ಧಿಮನಸ್ಸುಗಳೂ ಭೌತಿಕ ವಾದುದರಿಂದ ಭೂತಕ್ರಮದಂತೆ ಉತ್ಪತ್ತಿಲಯಗಳನ್ನು ಹೊಂದುವುವು ಎಂದು ನಿರೂಪಿಸುವುದು. "ಚರಾಚರವ್ಯಪಾಶ್ರಯಸ್ತು" ಈ ಅಧಿಕರಣವು "ದೇವದತ್ತನು ಹುಟ್ಟಿದನು, ಸತ್ತನು" ಎಂದು ಮೊದಲಾದ ವ್ಯವಹಾರಕ್ಕನುಗ.ಣವಾಗಿ ಜೀವನಿಗೂ

ನಾತ್ಮಾ ಶ್ರುತೇಽ ನಿತ್ಯತಾ ಶಕ್ತಿಯೋಽಗಾನ್ನಾನೇವ ಭಾಸತ್ಯವಿಕಲ್ಪತೋಽ ಹಿ।
ಸಂತಾನ ಏವಾತ್ರ ಗತಾಗತಾನಾಂ ಸ್ವಾತ್ಮಾನಂ ಚೋತ್ಕ್ರಾಂತರಣೇ ನಾಣುರೇವ ॥೬೬॥

ಸ್ವಶಬ್ದೋಽನ್ಮಾನಾಭ್ಯಾಂ ಸುಖಯತಿ ಸದಾನಂದನತನುಂ
ವಿರೋಧಶ್ಚಾಂದ್ರ್ಯೈವ ದ್ರವ ಇವ ಸದಾತ್ಮಾ ನಿಖಿಲಗಃ ।
ಗುಣಾದಾಲೋಕೇಷು ವ್ಯತಿರಿಕ್ತವತೋಽ ಗಂಧವಹತಃ
ಪರೋಽ ದೃಷ್ಟೋಽಹ್ಯಾತ್ಮಾ ವ್ಯಪದಿಶತಿ ಪ್ರಜ್ಞಾನುಭವತಃ ॥೬೭॥

---

ಉತ್ಪತ್ತಿಪ್ರಳಯುಗಳಿವೆಯೇ ? ಎಂದು ಶಂಕಿಸಿ ಚರಾಚರಾತ್ಮಕವಾದ ಶರೀರಗಳ ಸಂಬಂಧದಿಂದ ಜನನಮರಣಗಳ ವ್ಯವಹಾರವೇ ವಿನಾ ಜೀವನಿಗೆ ವಸ್ತುತಃ ಜನನಮರಣಗಳಿಲ್ಲ, ಅಂದರೆ ಶರೀರಕ್ಕೆ ಜನನಮರಣಗಳೇ ವಿನಾ ಜೀವನಿಗಿಲ್ಲ ಎಂದು ನಿರೂಪಿಸುವುದು. ॥೬೫॥

"ನಾತ್ಮಾಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ" ಈ ಅಧಿಕರಣವು ಪುನಃ ಜೀವನಿಗೆ ಉತ್ಪತ್ತಿಯನ್ನು ಶ್ರುತ್ಯನುಸಾರವಾಗಿ ಶಂಕಿಸಿ "ನ ಜೀವೋ ಮ್ರಿಯತೇ" ಇತ್ಯಾದಿ ಶ್ರುತಿಗಳಿಂದಲೂ ಜೀವನು ಬ್ರಹ್ಮಸ್ವರೂಪನಾದುದರಿಂದಲೂ ಅವನಿಗೆ ಉತ್ಪತ್ತಿಯಿಲ್ಲವೆಂದು ನಿರ್ಣಯಿಸುವುದು. "ಉತ್ಕ್ರಾಂತಿಗತ್ಯಾಗತೀನಾಂ" ಈ ಅಧಿಕರಣವು ಜೀವನಿಗೆ ಗಮನಾಗಮನಗಳಿರುವುದರಿಂದ ಆತನು ಅಣುವು. ನಿತ್ಯನಾದುದರಿಂದ ಮಧ್ಯಮಪರಿಮಾಣನಲ್ಲ ಎಂಬ ಪೂರ್ವಪಕ್ಷವನ್ನು ಖಂಡಿಸುತ್ತಾ "ಸ ವಾ ಏಷ ಮಹಾನಜ" ಇತ್ಯಾದಿಶ್ರುತಿಗಳು ಜೀವನು ಅಣುವಲ್ಲವೆಂದೂ ಬ್ರಹ್ಮನೇ ಜೀವನಾಗಿ ಶರೀರವನ್ನು ಪ್ರವೇಶಿಸುವನೆಂದೂ ಹೇಳಿರುವುದರಿಂದ ಜೀವನು ಬ್ರಹ್ಮನೆಂದೂ, ಬುದ್ಧಿಸಂಬಂಧದಿಂದ ಆತ್ಮನಿಗೆ ಸಂಸಾರವೆಂದೂ ಆ ಸಂಸಾರವು ಅವಿದ್ಯಾಕೃತವೆಂದೂ ನಿರ್ಣಯಿಸುವುದು. ॥೬೬॥

"ಏಷೋಽಣುರಾತ್ಮಾ" ಎಂಬ ಶ್ರುತಿಯನುಸಾರವಾಗಿಯೂ "ಆರಾಗ್ರಮಾತ್ರಃ" ಸೂಜೀಮೊನೆಯಷ್ಟು ಸೂಕ್ಷ್ಮನೆಂದು ಶ್ರುತಿಯು ಹೇಳುವುದರಿಂದಲೂ, ಜೀವನು ಶ್ರುತಿಗನುಸಾರವಾಗಿಯೇ ಅಣುವೆಂದು ಪುನಃ ಪೂರ್ವಪಕ್ಷವನ್ನು ಶಂಕಿಸಿ ಬುದ್ಧಿಯ ಪರಿಮಾಣವನ್ನು ಅನುಸರಿಸಿ ಆ ಬುದ್ಧಿಸಂಬಂಧವುಳ್ಳ ಜೀವನಿಗೆ ಅಣುತ್ವಾದಿಗಳನ್ನು ಹೇಳಿದೆ. ವಸ್ತುತಃ ಅಣುತ್ವವಿಲ್ಲ ಎಂದು ನಿರ್ಣಯಿಸುವುದು. ॥೬೭॥

ಯಾವಚ್ಛಾತ್ಮಾ ನೈವ ದೃಶ್ಯೇತ ದೋಷೈಃ
ಪುಂಸ್ತ್ವಾದಿವತ್ತ್ವಸ್ಯಾತೋ ವ್ಯಕ್ತಿಯೋಗಾತ್ ।
ಮನೋನ್ಯತ್ರಾಯದಿ ಕಾರ್ಯೇಷು ಗೌಣಂ
ವಿಮುಖಃ ಕರ್ತಾ ಶಾಸ್ತ್ರತೋ ವಿಹರತಿ ಉಪಾದಾನವಶತಃ ॥೬೮॥

ಅಸ್ಯಾತ್ಮವ್ಯಪದೇಶತಃ ಶ್ರುತಿರಿಯಂ ಕರ್ತೃತ್ವವಾದಂ ವದತ್
ಉಪಾಲಬ್ಧುಂ ಶಕ್ತೇಃ ವಿಪರ್ಯಯಸಮಾಧ್ಯಕ್ಷುಭಿತತಯಾ ।
ಪರಾತ್ತತ್ತು ಶ್ರುತ್ಯಾಪ್ಯನುಕೃತಿಸುಯತ್ನಕ್ಷುಭಿತತಯಾ
ಪರೋ ಮಂತ್ರೋ ವರ್ಣೈರ್ಭಗವತಿ ಅನುಜ್ಞಾಪರಿಹರೌ ।
ತನೋಸ್ಸಂಬಂಧೇನ ಪ್ರವಿಶತಿ ಪರಂಜ್ಯೋತಿಕಲನೇ ॥೬೯॥

---

"ಯಾವದಾತ್ಮಭಾವಿತ್ವಾಚ್ಚ" "ಪುಂಸ್ತ್ವಾದಿವತ್ತ್ವಸ್ಯ" ಇವೆರಡು ಸೂತ್ರಗಳು ಬುದ್ಧಿ ಆತ್ಮರು ಭಿನ್ನರಾದುದರಿಂದ ಸೇರಿದ್ದರೂ ಪುನಃ ಬೇರೆಯಾಗಬಹುದು. ಸೇರುವೆಡೆ ಬೇರೆಯಾಗುವುದು ಕಂಡೇ ಇದೆ. ಹಾಗೆಯೇ ಆತ್ಮನಿಂದ ಯಾವಾಗಲಾದರೂ ಬೇರೆಯಾದ ಆಗ ಅವನಿಗೆ ಬುದ್ಧಿಕೃತವಾದ ಸಂಸಾರವಿಲ್ಲದಂತಾಗಿ ಅಸಂಸಾರಿತ್ವವೂ ಬಂದೀತು ಎಂದು ಶಂಕಿಸಿ, ಆತ್ಮನು ಜೀವನಾಗಿರುವವರೆಗೂ ಬುದ್ಧಿಸಂಯೋಗವು ತಪ್ಪಿದ್ದಲ್ಲ. ಜೀವತ್ವವನ್ನು ಬಿಟ್ಟಮೇಲೆ ಬುದ್ಧಿಯೂ ಇಲ್ಲ, ಆಗ ಅವನು ನಿಜವಾಗಿ ಅಸಂಸಾರಿಯಾಗುವನು. ಆಗ ಬ್ರಹ್ಮೈಕ್ಯವು ಆವಿರ್ಭವಿಸುವುದು. ಜನ್ಮಾಂತರದಲ್ಲೂ ಸಹ ಪುಂಸ್ತ್ವಾದಿಗಳು ತಾನಾಗಿ ಉದ್ಭವಿಸುವಂತೆ ಬುದ್ಧಿಸಂಸ್ಕಾರವೂ ತಾನಾಗಿ ಉದಯಿಸುವುದು, ಎಂದು ನಿರೂಪಿಸುವುವು. "ಕರ್ತಾ ಶಾಸ್ತ್ರಾರ್ಥವತ್ತ್ವಾತ್" ಈ ಅಧಿಕರಣವು "ವಿಜ್ಞಾನಂ ಯಜ್ಞಂ ತನುತೇ ಕರ್ಮಾಣಿ ತನುತೇಪಿ ಚ" ಎಂಬ ಶ್ರುತಿಗನುಸಾರವಾಗಿ ಜೀವನಿಗೆ ಕರ್ತೃತ್ವವನ್ನು ಸಾಧಿಸುವುದು. ಲೋಕದಲ್ಲೂ ಸಹ ಇಷ್ಟಾನಿಷ್ಟಕರ್ಮಗಳನ್ನಾಚರಿಸಿ ಜೀವನು ತಕ್ಕ ಫಲಗಳನ್ನು ಪಡೆಯುವನು. ॥೬೮॥

"ವ್ಯಪದೇಶಾಚ್ಚ" ಈ ಕೆಲವು ಸೂತ್ರಗಳೂ ಜೀವನಿಗೆ ಶ್ರುತಿಯಲ್ಲಿ ಕರಣಸಾಮಗ್ರಿಯನ್ನೂ, ವೈದಿಕಲೌಕಿಕಕ್ರಿಯೆಗಳಲ್ಲಿ ಕರ್ತೃತ್ವವನ್ನೂ ಹೇಳಿದುದರಿಂದ ಕರ್ತೃತ್ವವನ್ನೇ ವಿಸ್ತರವಾಗಿ ಸಾಧಿಸುವುವು. "ಪರಾತ್ತು ತಚ್ಛ್ರುತೇಃ" ಈ ಅಧಿಕರಣವು "ಏಷಹ್ಯೇವ ಸಾಧುಕರ್ಮಕಾರಯತಿ ಅಸಾಧುಕರ್ಮಕಾರಯತಿ" ಎಂಬ

ಅಸಂತತೇರ್ವ್ಯತಿಕರಂ ಪರರೂಪಭೇದೇ
ಆಭಾಸ ಏವ ಸುದೃಶಾ ನಿಯತೋ ನಿಯಮ್ಯಾತ್ ।
ಆಕಾಶವತ್ಸರ್ವಗತೋಽವ್ಯಯಾತ್ಮಾ
ಆಸಂಧಿಭೇದಾತ್ಪ್ರತಿದೇಶಭಾವಾತ್ ॥೨೦॥

---

ಶ್ರುತ್ಯನುಸಾರವಾಗಿ ಅಸರ್ವಜ್ಞನಾದ ಸಂಸಾರಿಯಾದ ಜೀವನ ಕರ್ತೃತ್ವವೂ ಈಶ್ವರೇಚ್ಛೆಗೆ ಅಧೀನವೆಂದು ನಿರ್ಣಯಿಸುವುದು. ಈಶ್ವರನು ಜೀವನ ಕರ್ಮಗಳಿಗನು ಸಾರವಾಗಿ ಪ್ರೇರಿಸಿ ಮಾಡಿಸುವನು. ಅವರವರ ಕರ್ಮಕ್ಕನುಸಾರವಾಗಿ ಉಚ್ಚ ನೀಚಕರ್ಮಗಳನ್ನು ಮಾಡಿಸುವುದರಿಂದ ಭೇದನಿರ್ಘೃಣತೆಗಳು ಈಶ್ವರನಿಗೆ ಬರ ಲಾರವು. “ಮಂತ್ರವರ್ಣಾಚ್ಚ” ಈ ಅಧಿಕರಣವು ಜೀವನು ಈಶ್ವರನ ಅಂಶವು. ಘಟಾಕಾಶವು ಮಹಾಕಾಶದ ಅಂಶವಾಗಿರುವಂತೆ ಎಂದು ಸ್ಥಾಪಿಸುವುದು. “ಮಮೈ ವಾಂಶೋ” ಎಂಬ ಗೀತೆಯೂ ಜೀವನು ಈಶ್ವರನ ಅಂಶವೆಂದು ಹೇಳುವುದು. ಸೂರ್ಯನ ಅಂಶವಾದ ಪ್ರಕಾಶವು ನಾನಾಕಡೆಯಲ್ಲಿ ಬಿದ್ದಿದ್ದು ಚಲಿಸಿದಂತೆ ತೋರಿ ದರೂ ಸೂರ್ಯನಿಗೆ ಚಲನಾದಿಗಳು ಹೇಗೆ ಇಲ್ಲವೋ, ಅದರಂತೆ ಅಂಶವಾದ ಜೀವ ನಿಂದ ಈಶ್ವರನಿಗೆ ಸುಖದುಃಖಸಂಬಂಧವಿಲ್ಲವು ಎಂದು ನಿರ್ಣಯವು. ॥೧೯॥

“ಅಸಂತತೇಶ್ಚಾವ್ಯತಿಕರಃ” ಈ ಸೂತ್ರವು, ಜೀವನಿಗೆ ಮಾತ್ರ ಅವಿದ್ಯಾಕೃತವಾದ ಕರ್ಮಫಲಸಂಬಂಧವಿದೆ ಅವಿದ್ಯೆಯಿಲ್ಲದುದರಿಂದ ಈಶ್ವರನಿಗಿಲ್ಲ, ಎಂದು ನಿರೂಪಿಸು ವುದು. “ಆಭಾಸ ಏವಚ” ಈ ಸೂತ್ರವು ಜೀವೇಶ್ವರರಿಗೆ ಬಿಂಬಪ್ರತಿಬಿಂಬಭಾವ ವನ್ನು ಹೇಳುತ್ತಾ ಸೂರ್ಯಪ್ರತಿಬಿಂಬಗಳ ವಿಕಾರಗಳಿಂದ ಸೂರ್ಯನಿಗೆ ವೃದ್ಧಿಹ್ರಾಸಾದಿಗಳು ಹೇಗಿಲ್ಲವೋ, ಹಾಗೆಯೇ ಜೀವನ ಸುಖದುಃಖಸಂಬಂಧವು ಈಶ್ವರನಿಗಿಲ್ಲ ಎಂದು ನಿರೂಪಿಸುವುದು. “ಪ್ರದೇಶಾದಿತಿಚೇನ್ನಾಂತರ್ಭಾವಾತ್” ಈ ಸೂತ್ರವು ಆಕಾಶವು ಹೇಗೆ ಸರ್ವವ್ಯಾಪಕವಾಗಿದ್ದರೂ ಘಟ ಮೊದಲಾದ ಉಪಾಧಿಭೇದಗಳಿಂದ ಘಟಾಕಾಶ, ಮಠಾಕಾಶ ಎಂದು ಮೊದಲಾಗಿ ಭೇದವನ್ನು ಪಡೆಯುವುದೋ, ಹಾಗೆಯೇ ಆತ್ಮನು ಅವಿದ್ಯೆಯ ದೆಸೆಯಿಂದ ಈಶ್ವರನಾಗುವನು. ನಾನಾ ಭಿನ್ನಭಿನ್ನ ಜೀವನಾಗುವನು. ಆದರೂ ವಸ್ತುತಃ ಆತ್ಮನು ಓರ್ವನೇ. ಮಹಾ ಕಾಶವು ಒಂದೇ ಆಗಿರುವಂತೆ, ಎಂದು ನಿರೂಪಿಸುವುದು. ॥೨೦॥

ತಥಾ ಪ್ರಾಣೋಗೌಣಃ ಪ್ರಕೃತಿವಿಧಿಪೂರ್ವಾರ್ಥಕಲನಾತ್
ಅಥೋ ಸ್ತೋಯೇ ಸ್ಪೃತ್ಯಃ ಪ್ರಥಿತಗತಿಶೇಷೇಣ ಕಥಿತಃ ।
ಹಸ್ತಾದಯಸ್ತ್ವಣವಃ ಪ್ರಾಣವಾಯೋಶ್ಚಕ್ಷುಸ್ತಥಾಕರಣತ್ವಾನ್ನದೋಷಃ
॥೭೧॥

ಯಃ ಪಂಚವೃತ್ತಿರ್ಮನವಚ್ಚ ದೃಶ್ಯತೇ ತಥಾಣುತೋಜ್ಯೋತಿರಸುಶ್ಚ ಖಾನಿ।
ಭೇದಶ್ರುತೇರ್ಲಕ್ಷಣಾವಿಪ್ರಯೋಗಾದಾತ್ಮಾದಿಭೇದೇ ತು ವಿಶೇಷವಾದಃ॥೭೨

---

“ತಥಾ ಪ್ರಾಣಾಃ” ಈ ಅಧಿಕರಣವು ಪ್ರಾಣಗಳಿಗೂ ಉತ್ಪತ್ತಿಯನ್ನು ಸಾಧಿಸುವುದು. ಕೆಲವೆಡೆ ಪ್ರಾಣಗಳಿಗೆ ಉತ್ಪತ್ತಿಯನ್ನು ಹೇಳದಿದ್ದರೂ ಕೆಲವೆಡೆ ಹೇಳಿರುವುದರಿಂದಲೂ, ಬ್ರಹ್ಮನನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವುದು. ಎಂಬ ಪ್ರತಿಜ್ಞೆಗೆ ಬ್ರಹ್ಮನಿಂದ ಎಲ್ಲವೂ ಜನಿಸುತ್ತದೆ ಎಂದಿಟ್ಟುಕೊಂಡರೆ ಸರಿಯಾಗುವುದು. ಕಾರಣವಸ್ತುವನ್ನು ತಿಳಿದರೆ ಕಾರ್ಯವನ್ನು ತಿಳಿದಂತಾಗುವುದು. ಆದುದರಿಂದ ಆಕಾಶಾದಿಗಳಂತೆ ಪ್ರಾಣವೂ ಬ್ರಹ್ಮನಿಂದ ಜನಿಸುವುದು. “ಸಪ್ತಗತೇರ್ವಿಶೇಷಿಕತ್ವಾತ್” ಈ ಅಧಿಕರಣವು ಶ್ರುತಿಗಳಲ್ಲಿನ ಪ್ರಾಣಗಳ ಸಂಖ್ಯಾಭೇದಗಳಿಂದ ಎಷ್ಟು? ಪ್ರಾಣಗಳೆಂದು ಶಂಕಿಸಿ ಹನ್ನೊಂದೇ ಪ್ರಾಣಗಳೆಂದು ನಿರ್ಣಯಿಸುವುದು. “ಅಣವಶ್ಚ” ಈ ಅಧಿಕರಣವು ಪ್ರಾಣಗಳು ಅಣುಗಳು ಅಂದರೆ ಸೂಕ್ಷ್ಮಗಳು ಮತ್ತು ಪರಿಚ್ಛಿನ್ನಗಳೆಂದು ನಿರ್ಣಯಿಸುವುದು. “ಶ್ರೇಷ್ಠಶ್ಚ” ಈ ಅಧಿಕರಣವೂ “ನವಾಯುವಿಕ್ರಿಯೆ” ಈ ಅಧಿಕರಣವೂ ಸಹ ಮುಖ್ಯಪ್ರಾಣವು ಉತ್ಪತ್ತಿಯುಳ್ಳದ್ದು. ಮಿಕ್ಕಪ್ರಾಣಗಳಿಗಿಂತ ಶ್ರೇಷ್ಠವಾದುದು. ವಾಯುವಿಗಿಂತ ಭಿನ್ನವಾದುದು. ಮತ್ತು ಸೂಕ್ಷ್ಮವೂ ಪರಿಚ್ಛಿನ್ನವೂ ಆದುದೆಂದೂ ಕರಣಸಾಮಗ್ರಿಯಿಲ್ಲದುದರಿಂದ ಹನ್ನೆರಡನೆಯ ಕಾರ್ಯವು ಇದರಿಂದ ಆಗಲಾರದೆಂದೂ ನಿರೂಪಿಸುವುವು. ॥೭೧॥

ಪ್ರಾಣಾಪಾನವ್ಯಾನೋದಾನಸಮಾನಗಳೆಂಬುವು ಈ ಮುಖ್ಯಪ್ರಾಣನ ಐದು ವೃತ್ತಿಗಳು. “ಜ್ಯೋತಿರಾದ್ಯಧಿಷ್ಠಾನಂತು” ಈ ಅಧಿಕರಣವು ಹಿಂದೆ ಹೇಳಿದ ಹನ್ನೊಂದು ಪ್ರಾಣಗಳು. ಅಗ್ನ್ಯಾದಿದೇವತೆಗಳ ಅಧಿಷ್ಠಾನದಿಂದ ಕಾರ್ಯಗಳನ್ನು ಗೈಯ್ಯುವುವು ಎಂದು ನಿರೂಪಿಸುವುದು. “ತ ಇಂದ್ರಿಯಾಣಿ” “ಭೇದಶ್ರುತೇಃ” ಈ ಅಧಿಕರಣವು ಮುಖ್ಯಪ್ರಾಣನೂ ಈ ಹನ್ನೊಂದು ಪ್ರಾಣಗಳೂ ಬೇರೆ ಬೇರೆ ಪರಸ್ಪರ ಸಂಬಂಧವಿಲ್ಲ. ಸುಷುಪ್ತಾವಸ್ಥೆಯಲ್ಲಿ ಚಕ್ಷುರಾದಿಯಾದ ಎಲ್ಲ ಪ್ರಾಣಗಳೂ

ಆತ್ಮೈಕತ್ವಾತ್ಪ್ರಾಣಗತೇಶ್ಚ ವಹ್ನೇ
ಸ್ತೇಜೋಗತೀವಾಶ್ರುತತ್ವಾನ್ನ ಚೇಷ್ಟಾ ।
ಭೋಕ್ತುರ್ನ ಚಾತ್ಮನ್ಯವಿದೀಕೃತಾ ಯೇ
ತೇ ಧೂಮಮಾರ್ಗೇಣ ಕಿಲ ಪ್ರಯಾಂತಿ ॥೭೩॥

ಚರಣಾದಿತಿ ಚಾನ್ಯಕಲ್ಪನಾಂ ಸ್ಮರಂತಿ
ಸಪ್ತೈವ ಗತಿಪ್ರರೋಹಾತ್ ।
ವ್ಯಾಪಾರವೈಧುರ್ಯಸಮೂಹವಿದ್ಯಾ
ತೇ ಕರ್ಮಣೋ ನೇಹ ತೃತೀಯೇಲಬ್ಧ್ವಾ ॥೭೪॥

---

ಸುಪ್ತವಾಗಿರಲು ಮುಖ್ಯಪ್ರಾಣವೊಂದು ಜಾಗೃತವಾಗಿರುವುದು. ಈ ವಿಶೇಷದಿಂದ ಮುಖ್ಯಪ್ರಾಣ ಮತ್ತು ಚಕ್ಷುರಾದಿ ಪ್ರಾಣಗಳು ಬೇರೆ ಬೇರೆಯವು ಎಂದು ನಿರ್ಣಯಿಸುವುವು. "ವೈಶೇಷ್ಯಾತ್ತು ತದ್ವಾದಸ್ತದ್ವಾದಃ" ಎಲ್ಲ ವಸ್ತುಗಳೂ ತ್ರಿವೃತ್ಕರಣದಿಂದ ಪೃಥಿವೀ ಜಲ ತೇಜಸ್ಸುಗಳಿಂದ ಕೂಡಿರುವುವಾದರೂ ಪೃಥಿವೀಭಾಗವು ಅತಿಯಾಗಿರುವುದರಿಂದ ಭೂಮಿಗೆ ಪೃಥಿವಿಯೆಂದೂ, ಜಲಭಾಗವು ಹೆಚ್ಚಾಗಿರುವುದರಿಂದ ನೀರಿಗೆ ನೀರೆಂದೂ, ತೇಜೋಭಾಗವು ಅಧಿಕವಾಗಿರುವುದರಿಂದ ತೇಜಸ್ಸಿಗೆ ತೇಜಸ್ಸೆಂದೂ ವ್ಯವಹಾರವೆಂದು ಈ ಸೂತ್ರವು ನಿರ್ಣಯಿಸುವುದು. ॥೭೨॥

"ತದಂತರಪ್ರತಿಪತ್ತೌ" "ಪ್ರಾಣಗತೇಶ್ಚ" ಈ ಅಧಿಕರಣವು ಉತ್ತಮವಾಗಿ ಉಪಾಸನೆಮಾಡಿದವರು ಅರ್ಚಿರಾದಿಮಾರ್ಗದಿಂದ ಉತ್ತಮಲೋಕವನ್ನು ಪಡೆಯುವರು. ಅವರು ದೇಹವನ್ನು ಬಿಡುವಾಗ ಜೊತೆಗೆ ಪ್ರಾಣಾದಿಗಳು ಬರುವುದಿಲ್ಲ. ಇಲ್ಲಿಯೇ ನಿವೃತ್ತವಾಗಿ ತಮ್ಮ ತಮ್ಮ ಭೂತಗಳಲ್ಲಿ ಲಯವಾಗುವುವು. ಇದರಂತೆ ಕರ್ಮಗಳನ್ನಾಚರಿಸಿದವರು ಧೂಮಾದಿಮಾರ್ಗದಿಂದ ಲೋಕಾಂತರವನ್ನು ಪಡೆಯುವರು ಎಂದು ನಿರೂಪಿಸುವುದು. ॥೭೩॥

"ಚರಣಾದಿತಿಚೇನ್ನೋಪಲಕ್ಷಣಾರ್ಥೇತಿ" ಈ ಅಧಿಕರಣವು ದೇಹೋತ್ಕ್ರಾಂತಿಯನ್ನು ಹೊಂದಿ ಚಂದ್ರಾದಿಲೋಕಗಳಲ್ಲಿ ಫಲೋಪಭೋಗವನ್ನು ಮಾಡಿದವನು ಪುನಃ ತನ್ನ ಕರ್ಮಕ್ಕನುಸಾರವಾಗಿ ತಕ್ಕ ಯೋನಿಗಳಲ್ಲಿ ಜನಿಸುವನು. ದುಷ್ಕರ್ಮಿಯಾಗಿದ್ದರೆ ದುರ್ಜನ್ಮವನ್ನು ತಾಳುವನು. ಸುಕರ್ಮಿಯಾಗಿದ್ದರೆ ಒಳ್ಳೆಯ ಜನ್ಮವನ್ನು ತಾಳುವನು ಎಂದು ನಿರೂಪಿಸುವುದು. "ಸ್ಮರಂತಿ ಚ" "ಅಪಿ ಚ

ತದ್ದರ್ಶನಂ ತದ್ವದತೋಽಪ್ಯವಿದ್ಯಾಸವ್ಯೋಽಪಪತ್ತೇರುತದ್ವೈ ವಿಶೇಷಾತ್ ।
ಚಿರಂ ತಪಶ್ಶುದ್ಧಿರತೌ ವಿಶೇಷಾತ್ತೇ ಸ್ಥಾವರೇ ಚಾವಿಶೇಷಾರ್ಥವಾದಃ ॥೭೫॥

ಸಂಧ್ಯಾಂಶಸ್ಸೃಷ್ಟ್ಯಾ ಕಿಲ ನಿರ್ಮಮೋ ಜಗತ್ಪುತ್ರೇಷು ಮಾಯಾಮಯ
ತೋಽನ್ಯಯಾತ್ಮಾ
ಕೃತ್ಸ್ನಂ ಮಾಯಾಮಯಂ ತಜ್ಜಗದಿದಮಸತೋ ನಾಮರೂಪಂ ತು
ಜಾತಂ ।
ಜಾಗ್ರತ್ಸ್ವಪ್ನಸುಷುಪ್ತಿತೋಽಪಿ ಪರಮಾನಂದಂ ತಿರೋಧಾನಕೃತ್ ॥೭೬॥

---

ಸಪ್ತ” “ತತ್ರಾಪಿ ತದ್ವ್ಯಾಪಾರಾವಿರೋಧಃ” “ವಿದ್ಯಾಕರ್ಮಣೋರಿತಿ” “ನತೃತೀಯೇ”– ಈ ಸೂತ್ರಗಳು, ಪಾಪಿಗಳಿಗೆ ಸ್ಮೃತಿಶ್ರುತ್ಯನುಸಾರವಾಗಿ ರೌರವಾದಿ ನರಕಪ್ರಾಪ್ತಿಯೇ ವಿನಾ ಚಂದ್ರಾದಿಲೋಕಗಳಿಲ್ಲ. ನರಕದಲ್ಲವರು ಯಮಯಾತನೆ ಗಳನ್ನನುಭವಿಸಿ ಭೂಮಿಯಲ್ಲಿ ದುರ್ಯೋನಿಗಳಲ್ಲಿ ಜನಿಸುವರು. ದೇವಮಾರ್ಗ ಕರ್ಮಮಾರ್ಗ, ಕ್ಷುದ್ರಮಾರ್ಗವೆಂದು ಮೂರುಮಾರ್ಗಗಳು. ಜ್ಞಾನಿಗಳು ಉಪಾಸನಾ ಮಾರ್ಗದಲ್ಲೂ, ಕರ್ಮಿಗಳು ಕರ್ಮಮಾರ್ಗದಲ್ಲೂ, ಪಾಪಿಗಳು ಕ್ಷುದ್ರಮಾರ್ಗದಲ್ಲೂ ಲೋಕಾಂತರಗಳನ್ನು ಪಡೆದು ಕರ್ಮಫಲವನ್ನನುಭವಿಸುವರು. ॥೭೪॥

“ತತ್ಸ್ವಾಭಾವ್ಯಾಪತ್ತಿರುಪಪತ್ತೇಃ” ಈ ಅಧಿಕರಣವು ಸುಕರ್ಮಿಗಳು ಚಂದ್ರಾದಿಲೋಕಗಳನ್ನು ಪಡೆದಮೇಲೆ ಅಲ್ಲಿಂದ ಹಿಂದಿರುಗಿ ಬರುವ ಕ್ರಮವನ್ನು ವಿವರಿಸುವುದು. ಶ್ರುತಿಯು ಲೋಕಗಳಿಂದ ಆಕಾಶವಾಗಿ, ಆಕಾಶದಿಂದ ವಾಯುವಾಗಿ ಈ ಕ್ರಮದಂತೆ ಭೂಮಿಯಲ್ಲಿ ಜನ್ಮತಾಳುವರು ಎನ್ನುವುದು, ಅದು ಹೇಗೆಂದರೆ? ಆಕಾಶಾದಿ ಸಾಮ್ಯವನ್ನು ಹೊಂದಿ ಜಾಗ್ರತೆಯಾಗಿ ಧಾನ್ಯಗಳ ಪರ್ಯಂತ ಭೂಮಿಗೆ ಬರುವರು, ಧಾನ್ಯಗಳಿಂದ ಮುಂದೆ ನಿಧಾನವಾಗಿ ರೇತಸ್ಸಿನ ಮೂಲಕ ಸ್ತ್ರೀಯ ಗರ್ಭದಿಂದ ಜನಿಸುವರು-ಎಂದು ನಿರೂಪಿಸುವುದು. ॥೭೫॥

“ಸಂಧ್ಯೇಸೃಷ್ಟಿರಾಹ ಹಿ” ಈ ಅಧಿಕರಣವು ಸ್ವಪ್ನಾವಸ್ಥೆಯಿಂದ ಜೀವಸ್ವರೂಪವನ್ನು ವಿಮರ್ಶಿಸುತ್ತಾ ಸ್ವಪ್ನವಸ್ತುಗಳನ್ನು ನಿರ್ಮಿಸುವವನು ಜೀವನೆಂದೂ, ಸ್ವಪ್ನಪದಾರ್ಥಗಳಿಗೆ ಸತ್ಯತ್ವವಿಲ್ಲವೆಂದೂ, ಅವೆಲ್ಲ ಮಾಯಾಮಯಗಳೆಂದೂ, ಅದರಂತೆ ಬ್ರಹ್ಮನ ಅಪೇಕ್ಷೆಯಿಂದ ಈ ಜಗತ್ತು ಮಾಯಾಮಯವೆಂದೂ ನಿರೂಪಿಸಿ, ಜೀವನು ಬ್ರಹ್ಮನ ಅಂಶವಾದರೂ ಬ್ರಹ್ಮನ ಜ್ಞಾನೈಶ್ವರ್ಯಶಕ್ತಿಗಳು ಅವಿದ್ಯೆಯ

ದೇಹಾಯೋಗಾದ್ವಾಪಸತೇ ವರ್ಧತೇ ಯಃ
ತತ್ರೈವಾನ್ಯತ್ಪಶ್ಯತೇ ಸೋಽಥ ಬೋಧಾತ್ ।
ಸಶೋಽಕುಚಾನಃ ಸ್ಮೃತಿಶಬ್ದಬೋಧಾ ॥೭೭॥

ನಾನಾಶಬ್ದಾದಿಭೇದಾತ್ಫಲವಿವಿಧಮಹಾಕರ್ಮವೈಚಿತ್ರ್ಯಯೋಗಾತ್
ಈಷ್ಟೇ ತಾಂ ಗುಣಧಾರಣಾಂ ಶ್ರುತಿಹಿತಾಂ ತದ್ದರ್ಶನೋದ್ಭೇಧತಃ ।
ತದ್ದರ್ಶನಾತ್ಸಿದ್ಧಿತ ಏವ ಸಿಧ್ಯತೇ ಆಚಾರಯೋಗಾದ್ಯತ ತಚ್ಛ್ರುತೇಶ್ಚ ॥೭೮॥

ವಾಚಾ ಸಮಾರಂಭಣತೋ ನಿಯಾಮತಃ
ತಸ್ಮಾಧಿಕಾ ಪ್ರಾತ್ವಕಸ್ಯೋಪದೇಶಾತ್ ।
ತುಲ್ಯಂ ದೃಶಾ ಸರ್ವತಸ್ಯಾದ್ವಿಭಾಗಃ
ಅಧ್ಯಾಪಯಾತ್ರಾನ್ನವಿಶೇಷತಃ ಸ್ಮೃತೇ ॥೭೯॥

---

ಮಹಿಮೆಯಿಂದ ಮರೆಯಾಗಿದೆಯೆಂದೂ, ಅವು ಬ್ರಹ್ಮಜ್ಞಾನದಿಂದ ಪ್ರಕಾಶಕ್ಕೆ ಬರುವುವೆಂದೂ ಅಲ್ಲಿನವರೆಗೂ ನಾಮರೂಪಭೇದಗಳಿಂದ ಪ್ರಪಂಚದಲ್ಲಿ ಕಾಣುವುದೆಂದೂ, ನಿರೂಪಿಸುವುದು. ॥೭೬॥

" ದೇಹಾಯೋಗಾದ್ವಾ ಸೋಽಪಿ " " ತದಭಾವೋ ನಾಡೀಷು " ಈ ಸೂತ್ರಾಧಿಕರಣಗಳು ಜೀವನಿಗೆ ದೇಹಸಂಬಂಧದಿಂದ ವೃದ್ಧಿಹ್ರಾಸಗಳಿವೆಯೆಂದೂ, ಸುಷುಪ್ತಿಯ ಸ್ಥಾನವು ಜೀವನೆಂದೂ, ಯಾವನು ಸುಷುಪ್ತನಾಗುವನೋ ಆತನೇ ಪುನಃ ಎಚ್ಚರಗೊಂಡು ಜಾಗ್ರದವಸ್ಥೆಗೆ ಬರುವನೆಂದೂ, ಇಲ್ಲದಿದ್ದರೆ ಹಿಂದಿನ ಸ್ಮರಣಾದಿಗಳು ಸರಿಯಾಗಿ ಹೊಂದಲಾರವೆಂದೂ, ನಿರೂಪಿಸುವುವು. ॥೭೭॥

" ನಾನಾಶಬ್ದಾದಿಭೇದಾತ್ " ಎಂಬ ಅಧಿಕರಣವು ದಹರಶಾಂಡಿಲ್ಯಾದಿ ನಾನಾ ಪ್ರಕಾರವಾದ ಬ್ರಹ್ಮವಿದ್ಯೆಗಳೂ, ಸಂವರ್ಗಾದಿ ಅನೇಕ ಪ್ರಾಣವಿದ್ಯೆಗಳೂ ಒಂದೇ ಅಲ್ಲ. ಸ್ವರ್ಗಫಲವೊಂದನ್ನುದ್ದೇಶಿಸಿ ಅನೇಕ ಅಗ್ನಿಹೋತ್ರ ಅಶ್ವಮೇಧಾದಿಗಳು ಇರುವಂತೆ ಬ್ರಹ್ಮವೊಂದನ್ನು ಅನೇಕ ದಹರಾದಿ ವಿದ್ಯೆಗಳೂ, ಪ್ರಾಣವೊಂದನ್ನು ಅನೇಕ ಸಂವರ್ಗಾದಿವಿದ್ಯೆಗಳೂ ಹೇಳಲ್ಪಟ್ಟಿವೆಯೆಂದು ನಿರ್ಧರಿಸುವುದು, "ಗುಣಸಾಧಾರಣ್ಯಶ್ರುತೇಶ್ಚ" ಈ ಅಧಿಕರಣವು ಉದ್ಗೀಥಾದಿವಿದ್ಯೆಗಳ ಸನ್ನಿಧಿಯಲ್ಲಿ ಹೇಳಿರುವ ಇತರೋಪಾಸನೆಗಳು ಸ್ವತಂತ್ರಗಳು ಎಂದು ನಿರ್ಣಯಿಸುವುದು. ॥೭೮॥

" ಆಚಾರದರ್ಶನಾತ್ " " ಸಮನ್ವಾರಂಭಣಾತ್ " ಎಂಬೀ ಹದಿನಾಲ್ಕು ಸೂತ್ರಗಳು ಬ್ರಹ್ಮವಿದ್ಯೆಯು ಕರ್ಮಾಂಗವೆಂಬ ಪೂರ್ವಪಕ್ಷವನ್ನು ಖಂಡಿಸುವುವು,

ವಿಮರ್ಶತೋ ಯಾತಿ ಸ್ವತಸ್ತತೋನ್ಯಃ
ಅನುಷ್ಠೇಯಂ ಚಾನ್ಯಃ ಶ್ರುತಿಶಿರಸಿ ನಿಷ್ಠಾ ಭ್ರಮವಶಾತ್ ।
ವಿಧಿಸ್ತತ್ಸ್ಯಾಭಾವಂ ಪ್ರವದತಿ ರಥಾಗ್ರೇ
ರಾಧಾನಮನುವದತಿ ಜ್ಞಾನಾಂಗಮಪಿ ಚ ॥೬೦॥

ಪ್ರಾಣಾತ್ಯಯೇ ವಾಪಿ ಸಮಂತಥಾನ್ನಂ
ಅಬಾಧತಃ ಸ್ಮೃತಿತಃ ಕಾಮಕಾರೇ ।
ವಿಹಿತಾಶ್ರಮಕರ್ಮತಃ ಸಹೈವ
ಕಾರ್ಯಾತ್ತಥೋಭಯೋರ್ಲಿಂಗಭಂಗಂ ಚ ದರ್ಶಯೇತ್ ॥೬೧॥

---

ಬ್ರಹ್ಮವಿದ್ಯೆಯು ಕರ್ಮಕ್ಕೆ ವಿರುದ್ಧವಾದುದರಿಂದಲೂ, ಶ್ರುತಿಯೂ ಸಹ ಕಾವಷೇಯಾದಿಋಷಿಗಳು ಕರ್ಮವನ್ನು ಬಿಟ್ಟು ವಿರಕ್ತರಾಗಿ ಬ್ರಹ್ಮಜ್ಞಾನಿಗಳಾದರೆಂದು ಹೇಳುವುದರಿಂದಲೂ, ಅಧಿಕಾರಿಭೇದದಿಂದಲೂ ಕಾಮಿಯು ಕರ್ಮಾಧಿಕಾರಿಯಾದುದರಿಂದಲೂ, ನಿಷ್ಕಾಮಿಯು ವಿದ್ಯಾಧಿಕಾರಿಯಾದುದರಿಂದಲೂ, ಸಂನ್ಯಾಸಿಗಳಿಗೆ ಹೇಗೆ ಅಗ್ನಿಹೋತ್ರಾದಿಗಳ ಅವಶ್ಯಕತೆಯಿಲ್ಲವೊ ಹಾಗೆ ವಿದ್ಯೆಗೂ ಕರ್ಮಾಂಗತ್ವವಾಗಲೀ ಕರ್ಮದ ಅವಶ್ಯಕತೆಯಾಗಲೀ ಇಲ್ಲವೇ ಇಲ್ಲವೆಂದು ನಿರೂಪಿಸುವುವು. ||೬೯||

"ಪರಾಮರ್ಶಂ ಜೈಮಿನಿಃ" "ಅನುಷ್ಠೇಯಂ ಬಾದರಾಯಣಃ" "ಸರ್ವಾಪೇಕ್ಷಾ ಚ" ಈ ಅಧಿಕರಣಗಳಲ್ಲಿ ಮೊದಲನೆಯದು ಜೈಮಿನಿಯ ಮತದಂತೆ ಸಂನ್ಯಾಸಾಶ್ರಮವು ಅನುಷ್ಠೇಯವಲ್ಲ, ಅದನ್ನು ಶ್ರುತಿಯಲ್ಲಿ ವಿಧಿಸಿಲ್ಲ-ಎಂದು ಪೂರ್ವಪಕ್ಷಿಸಿ, ಬಾದರಾಯಣಮತದಂತೆ "ಬ್ರಹ್ಮ ಸಂಸ್ಥೋಽಮೃತತ್ವಮೇತಿ" "ಪ್ರವ್ರಜೇತ್" ಇತ್ಯಾದಿ ಶ್ರುತಿಗಳಿಗನುಸಾರವಾಗಿ ಸಂನ್ಯಾಸವೂ ವಿಹಿತವಾಗಿದೆ. ಅದೂ ನಾಲ್ಕನೆಯ ಆಶ್ರಮವು, ಅದರಲ್ಲಿ ಶಮದಮಾದಿಗಳಿಂದ ಕೂಡಿ ಜ್ಞಾನಾಭ್ಯಾಸವನ್ನು ಮಾಡಬೇಕು-ಎಂದು ನಿರೂಪಿಸುವುವು. ||೬೦||

"ಸರ್ವಾನ್ನಾನುಮತಿಃ ಪ್ರಾಣಾತ್ಯಯೇ ತದ್ದರ್ಶನಾತ್" "ವಿಹಿತತ್ವಾಚ್ಚಾಶ್ರಮಕರ್ಮಾಪಿ" ಈ ಎರಡು ಅಧಿಕರಣಗಳಲ್ಲಿ ಮೊದಲನೆಯದು ಪ್ರಾಣವಿದ್ಯೆಯಲ್ಲಿ ಹೇಳುವ ಸರ್ವಾನ್ನ ಭಕ್ಷಣವು. ಪ್ರಾಣವಿದ್ಯೆಯ ಪ್ರಶಂಸೆಗಾಗಿಯೇ ವಿನಾ ಅನುಷ್ಠೇಯವಲ್ಲ, ಪ್ರಾಣಾಪಾಯ ಸಮಯದಲ್ಲಿ ಮಾತ್ರ ಅಭಕ್ಷ್ಯಭಕ್ಷಣವನ್ನು ಮಾಡಬಹುದು. ಇತರ ಸಮಯಗಳಲ್ಲಿ ಮಾಡಬಾರದು ಎಂದು ಶ್ರುತಿಸ್ಮೃತಿಗಳಿರುವುದರಿಂದ ಸರ್ವಾನ್ನಭಕ್ಷಣವು ವಿಹಿತವಲ್ಲ,—ಎಂದು ನಿರೂಪಿಸುವುದು. ಎರಡನೆಯದು ಕರ್ಮಕಾಂಡದಲ್ಲಿ ಹೇಳಿದ ಅಗ್ನಿಹೋತ್ರಾದಿ ಕರ್ಮಗಳು ಆಶ್ರಮಕರ್ಮಗ

ಕಾಮೋಪಮರ್ದೇ ನ ತದೂರ್ಧ್ವರೇತಸಃ
ಜ್ಯಾಯೋಽಪಿ ಲಿಂಗಾಭಯಭಾವನಾಧಿಕಾ ।
ಸ್ವೈವಾಧಿಕಾರಾದಶನಾತ್ತದುಕ್ತಂ
ಆಚಾರತಃ ಸ್ವಾಮಿನ ಈಜ್ಯಕೃತ್ಯಾ ॥೮೨॥

ಸ್ಮೃತೇಃ ಋತ್ವಿಕ್ಸಹಕಾರ್ಯಂ ಚ ಕೃತ್ಸ್ನಂ
ತನ್ಮೌನವಾಚಾ ವಚನೇನಾಕುರ್ವನ್ ।
ತದೈಹಿಕಂ ತದವಸ್ಥಾಧೃತೇಶ್ಚ ॥೮೩॥

---

ಗಳಾಗಿರುವಂತೆ ಬ್ರಹ್ಮವಿದ್ಯೆಗೂ ಅಂಗವಾಗಿ ಚಿತ್ತಶುದ್ಧಿಯನ್ನುಂಟುಮಾಡುವ ಮೂಲಕ ಬ್ರಹ್ಮವಿದ್ಯೆಗೆ ಅಂಗವಾಗುವುವೆಂದು ನಿರೂಪಿಸುವುದು. ॥೮೧॥

"ಅಂತರಾಚಾಪಿ ತು ತದ್ದೃಷ್ಟೇಃ" ಈ ಅಧಿಕರಣವು ಅನಾಶ್ರಮಿಗಳಾದ ವಿಧುರರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದೆ. ಶ್ರುತಿಯಲ್ಲೂ ಇತಿಹಾಸಗಳಲ್ಲೂ ರೈಕ್ವ ಸಂವರ್ತಾದಿಗಳು, ಅನಾಶ್ರಮಿಗಳು, ಬ್ರಹ್ಮವಿತ್ತುಗಳಾಗಿದ್ದರೆಂದು ಹೇಳಿದೆ, ಅವರಿಗಾದರೂ ಜಪೋಪವಾಸಾದಿಗಳಿಂದ ಹೆಚ್ಚಿನ ವಿದ್ಯಾಪ್ರಯೋಜನವುಂಟು, ಆದರೆ ಆಶ್ರಮಿಗಳಿಗಿರುವಷ್ಟುಮಟ್ಟಿನ ಅಧಿಕಾರಶ್ರೇಷ್ಠತೆಯು ಅನಾಶ್ರಮಿಗಳಿಗಿಲ್ಲ-ಎಂದು ನಿರೂಪಿಸುವುದು. "ನಚಾಧಿಕಾರಿಕಮಪಿ" ಈಅಧಿಕರಣವು ಸಂನ್ಯಾಸಿಗಳು ಸಂನ್ಯಾಸದಿಂದ ಕೆಟ್ಟು ಹಿಂತಿರುಗುವಂತಿಲ್ಲ. ಹಾಗೆ ಹಿಂತಿರುಗಿದವರಿಗೆ ಗತಿಯಿಲ್ಲ ವೆಂದು ಹೇಳಿದಮೇಲೆ ನೈಷ್ಠಿಕಬ್ರಹ್ಮಚಾರಿಯು ಬ್ರಹ್ಮಚರ್ಯೆಯನ್ನು ಕೆಡಿಸಿ ಕೊಂಡರೆ ವ್ರತಭಂಗಕ್ಕೆ ಯಾವ ಪ್ರಾಯಶ್ಚಿತ್ತವೋ ಅದೇ ಪ್ರಾಯಶ್ಚಿತ್ತವಿದೆಯೆಂದು ನಿರೂಪಿಸುವುದು. "ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ" ಈ ಅಧಿಕರಣವು ಸಂನ್ಯಾಸಚ್ಯುತನಾದಯತಿಯನ್ನು ಶ್ರುತಿಸ್ಮೃತ್ಯನುಸಾರವಾಗಿ ಸಮಾಜದಿಂದ ಹೊರಗೆ ಹಾಕಬೇಕು, ಅವನಿಗೆ ಪ್ರಾಯಶ್ಚಿತ್ತವಿಲ್ಲವೆಂದು ನಿರೂಪಿಸುವುದು. "ಸ್ವಾಮಿನಃ ಫಲಶ್ರುತೇಃ" ಈಅಧಿಕರಣವು ಫಲವತ್ತಾದ ಅಂಗೋಪಾಸನೆಗಳನ್ನು ಯಜಮಾನನೇ ಮಾಡಬೇಕಾಗಿಲ್ಲ. ಋತ್ವಿಜರು ಮಾಡಬೇಕು, ಅವರು ಮಾಡಿದರೂ ಯಜಮಾನನಿಗೇ ಫಲವು ಬರುವುದರಿಂದ ಫಲಶ್ರುತಿಗೆ ವೈಯರ್ಥ್ಯವಿಲ್ಲವೆಂದು ಶ್ರುತ್ಯನುಸಾರವಾಗಿ ನಿರೂಪಿಸುವುದು. ॥೮೨॥

"ಸಹಕಾರ್ಯಂತರವಿಧಿಃ" ಈ ಅಧಿಕರಣವು ಶ್ರವಣಮನನಗಳಂತೆ ನಿದಿಧ್ಯಾಸನವನ್ನು ಮಾಡಬೇಕು. ನಿದಿಧ್ಯಾಸನವೆಂದರೆ "ಬ್ರಹ್ಮಾಸ್ಮಿ" ಎಂದು ನಿರಂತರ

ಆವೃತ್ತ್ಯಾಪ್ಯಸಕೃತ್ತಥೋಪದಿಶತಸ್ಸ್ಯಾತ್ಮನ್ಯುಪಾಗಚ್ಛತಿ
ಗ್ರಾಹಂಯಾತಿ ಚ ಶಾಸ್ತ್ರತೋ ಪ್ರತೀಕಕಲನಾತ್ಸಾ ಬ್ರಹ್ಮದೃಷ್ಟಿಃ ಪ್ರಭೋಃ।
ಆದಿತ್ಯಾದಿಕೃತೀಷು ತಥಾ ಸತಿರಪಿ ಕರ್ಮಾಂಗತಾಧ್ಯಾನತೋ
ತಸ್ಮಾಚ್ಚಾಸ್ಥಿರತಾಂ ಸ್ಮರಂತಿ ಚ ಪುನಃ ಯತ್ರೈವ ತತ್ರ ಶ್ರುತಾ ॥೮೪॥

---

ವಾಗಿ ಧ್ಯಾನಿಸುವುದು, ಈ ನಿದಿಧ್ಯಾಸನವು ಜ್ಞಾನಾಭ್ಯಾಸಕ್ಕೆ ಸಹಕಾರಿ-ಎಂದು ನಿರೂಪಿಸುವುದು. "ಅನಾವಿಷ್ಕುರ್ವನ್ನನ್ವಯಾತ್" ಈ ಅಧಿಕರಣವು ಶ್ರುತಿಯಲ್ಲಿ ಹೇಳಿದ ಬಾಲ್ಯವು ಬಾಲಕನ ಚೇಷ್ಟೆಗಳಲ್ಲಿ, ದಂಭದರ್ಪಾದಿಗಳಿಲ್ಲದಿರುವುದು ಎಂದು ನಿರೂಪಿಸುವುದು. ಇಂತಹ ದಂಭಾದಿರಾಹಿತ್ಯವೂ ಜ್ಞಾನಾಭ್ಯಾಸಕ್ಕೆ ಸಹಕಾರಿ. "ಐಹಿಕಮಪಿ" ಈ ಅಧಿಕರಣವು ಜ್ಞಾನಾಭ್ಯಾಸದಿಂದ ಪ್ರಾರಬ್ಧಕರ್ಮಗಳು ಕ್ಷಯವಾಗಿದ್ದರೆ ಈ ಜನ್ಮದಲ್ಲೇ ಮುಕ್ತನಾಗುವನು, ಇಲ್ಲದಿದ್ದರೆ ಜನ್ಮಾಂತರದಲ್ಲಿ ಮುಕ್ತಿ ದೊರಕುವುದು ಎಂದು ನಿರೂಪಿಸುವುದು. ॥೮೩॥

"ಆವೃತ್ತಿರಸಕೃದುಪದೇಶಾತ್" ಈ ಅಧಿಕರಣವು ಶ್ರವಣಮನನ ನಿದಿಧ್ಯಾಸನಗಳನ್ನು ಒಂದೊಂದುಬಾರಿ ಮಾತ್ರ ಮಾಡಿದರೆ ಸಾಲದು. ಜ್ಞಾನೋದಯವಾಗುವವರೆಗೂ, ಮಾಡಬೇಕು ; ಅಕ್ಕಿಯಾಗುವವರೆಗೆ ಬತ್ತವನ್ನು ಕುಟ್ಟುವಂತೆ, ಎಂದು ನಿರೂಪಿಸುವುದು. "ಆತ್ಮೇತೂಪಗಚ್ಛಂತಿಗ್ರಾಹಯಂತಿ ಚ" ಈ ಅಧಿಕರಣವು "ಅಹಂ ಬ್ರಹ್ಮಾಸ್ಮಿ" ಇತ್ಯಾತಿಶ್ರುತ್ಯನುಸಾರವಾಗಿ ಪರಮಾತ್ಮನನ್ನು "ನಾನೇ ಪರಮಾತ್ಮ" ನೆಂದು ಜ್ಞಾನಾಭ್ಯಾಸದಿಂದ ಉಪಾಸಿಸಬೇಕು ಎಂದು ನಿರೂಪಿಸುವುದು. "ನ ಪ್ರತೀಕೇ ನಹಿ ಸಃ" ಈ ಅಧಿಕರಣವು "ಆದಿತ್ಯೋಬ್ರಹ್ಮೇತ್ಯಾದೇಶಃ" ಮೊದಲಾದ ಆದಿತ್ಯಾದ್ಯುಪಾಸನೆಗಳಲ್ಲಿ "ನಾನೇ ಆದಿತ್ಯ" ನೆಂದು ಉಪಾಸನೆಮಾಡಬಾರದು, ಎಂದು ನಿರೂಪಿಸುವುದು. "ಬ್ರಹ್ಮದೃಷ್ಟಿರುತ್ಕರ್ಷಾತ್" ಈ ಅಧಿಕರಣವು ನೀಚದಲ್ಲಿ ಉತ್ತಮದೃಷ್ಟಿಯೆಂಬ ನ್ಯಾಯದಂತೆ "ಆದಿತ್ಯೋಬ್ರಹ್ಮೇ"ತ್ಯಾದ್ಯುಪಾಸನೆಗಳಲ್ಲಿ ಆದಿತ್ಯನಲ್ಲಿ ಬ್ರಹ್ಮದೃಷ್ಟಿಯೆಂದು ನಿರ್ಣಯಿಸುವುದು. ಇದರಂತೆ ಆದಿತ್ಯಾದಿದೃಷ್ಟಿಯನ್ನು ಉದ್ಗೀಥಾದಿಗಳಲ್ಲಿ ಮಾಡಬೇಕು-ಎಂದು "ಆದಿತ್ಯಾದಿಮತಯಃ" ಎಂಬ ಸೂತ್ರವು ನಿರೂಪಿಸುವುದು. ಆದಿತ್ಯಾದ್ಯುಪಾಸನೆಗಳನ್ನು ವಿರೋಧವಾಗದಂತೆ ಪದ್ಮಾದ್ಯಾಸನಗಳಲ್ಲಿ ಕುಳಿತೇ ಮಾಡಬೇಕು. ಮತ್ತು ಏಕಾಗ್ರತೆಗೆ ಅನುಕೂಲವಾದಂತಹ ದಿಕ್ಕು, ದೇಶ,

ಆದ್ರಾಯಣಾತ್ತತ್ರ ದೃಷ್ಟಂ ಹಿ ಯತ್ರ
ತತ್ರಾಗಮಪೂರ್ವಯೋಃಶ್ಲೇಷನಾಶೌ ।
ತಥೇತರಸ್ಯಾಪಿ ಪತೇದಸಂಸ್ಕೃತೌ
ಅನಾರಬ್ಧಾದಗ್ನಿಹೋತ್ರಾದಿಕಾರ್ಯೇ ॥೮೫॥

ಅತೋಽನ್ಯೇಷಾಮುಭಯೋ ಯತ್ರ ಯೋ
ವಿದ್ಯಾಭೋಗೇನ ವಾಙ್ಮನಸೀ ದರ್ಶನಾಚ್ಚ ।
ಸರ್ವಾಣ್ಯನುಮನಸಾ ಪ್ರಾಣ ಏವ
ಸೋಧ್ಯಕ್ಷೇತ ಉಪದರ್ಶೇನ ಕಶ್ಚಿತ್ ॥೮೬॥

---

ಕಾಲಗಳನ್ನಾಶ್ರಯಿಸಬೇಕು ಎಂದು "ಆಸೀನಃ ಸಂಭವಾತ್" ಯತ್ರೈಕಾಗ್ರತಾ ತತ್ರಾವಿಶೇಷಾತ್" ಎಂಬ ಈಎರಡಧಿಕರಣಗಳು ನಿರೂಪಿಸುವುವು ||೮೪||

"ಆದ್ರಾಯಣಾತ್ತತ್ರಾಪಿ ಹಿದೃಷ್ಟಂ" ಈ ಅಧಿಕರಣವು ಉಪಾಸನೆಗಳನ್ನು ಮರಣಪರ್ಯಂತವಾಗಿಯೂ ಮಾಡಬೇಕು,—ಎಂದು ನಿರೂಪಿಸುವುದು." "ತದಧಿಗಮ" ಈ ಅಧಿಕರಣವು ಜ್ಞಾನೋದಯದಿಂದ, ಸಂಚಿತ ಆಗಾಮಿಕ ಕರ್ಮಗಳೆರಡೂ ನಾಶವಾಗುವುವು, ಅಂದರೆ ಸಂಚಿತವು ನಾಶವಾಗುವುದು, ಆಗಾಮಿಯು ಸಂಬಂಧಿಸಲಾರದು-ಎಂದು ನಿರೂಪಿಸುವುದು. "ಇತರಸ್ಯಾಪ್ಯೇವಂ" ಈ ಅಧಿಕರಣವು ಪಾಪಕರ್ಮಗಳಂತೆ ಪುಣ್ಯಕರ್ಮಗಳೂ ಜ್ಞಾನದಿಂದ ನಾಶವನ್ನೈದುವುವು ಎಂದು ನಿರೂಪಿಸುವುದು. "ಅನಾರಬ್ಧಕಾರ್ಯೇ" ಈ ಅಧಿಕರಣವು ಜ್ಞಾನದಿಂದ ಪ್ರಾರಬ್ಧಕರ್ಮವು ಕ್ಷಯಿಸಲಾರದು, ಪ್ರಯೋಗಿಸಿದ ಬಾಣವು ವೇಗಕ್ಷಯವಾಗುವ ವರೆಗೆ ನಿಲ್ಲದಿರುವಂತೆ ಫಲವನ್ನು ಕೊಡುತ್ತಿರುವ ಪ್ರಾರಬ್ಧಕರ್ಮವು ತಾನಾಗಿ ಕ್ಷಯಿಸುವ ವರೆಗೂ ನಾಶವಾಗಲಾರದು ಎಂದು ನಿರೂಪಿಸುವುದು. ನಿತ್ಯಕರ್ಮಗಳಿಂದ ಚಿತ್ತಶುದ್ಧಿಯೊದಗಿ ಜ್ಞಾನಕ್ಕೆ ಸಹಾಯವಾಗುವುದು. ||೮೫||

ಉಪಾಸನಾಯುಕ್ತವಾದ ಕರ್ಮವೂ ಕೇವಲ ಕರ್ಮವೂ ಸಹ ಜ್ಞಾನಸಹಕಾರಿಗಳು. ಮತ್ತು ಪ್ರಾರಬ್ಧಕರ್ಮವು ಭೋಗದಿಂದ ಕ್ಷಯಿಸುವುದು. ಆಮೇಲೆ ವಿದೇಹಮುಕ್ತಿಯೆಂದು "ಯದೇವ ವಿದ್ಯಯೇತಿಹಿ" "ಭೋಗೇನತ್ವಿತರೇ" ಈ ಎರಡಧಿಕರಣಗಳು ನಿರೂಪಿಸುವುವು. "ವಾಙ್ಮನಸಿ ದರ್ಶನಾಚ್ಚ" ಈ ಅಧಿಕರಣವು ಉತ್ಕ್ರಾಂತಿಯಾದಮೇಲೆ ವಾಕ್ಕು ಮನಸ್ಸಿನಲ್ಲಿ ಲೀನವಾಗುವುದು-ಎಂದಿರುವುದು.

ಸೂಕ್ಷ್ಮೋ ಪ್ರಮಾಣೋಪಲಬ್ಧೋಪಮರ್ದಃ ।
ಸ್ಥಿತಿಶ್ಚ ತಥೋಪಪತ್ತೇರೇಷ ಊಷ್ಮಾರಸ್ಯೈಕೇ ।| ॥೮೭॥

ಅತ್ರಸ್ಮರ್ಯನಾನುಪರತಾ ವಿಧಿವಾಕ್ಯಸಿದ್ಧೇ
ವೈಯಾಸಕಿರ್ಮುನಿರೇಷೋಽವ್ಯಯಾತ್ಮಾ ।
ಅವಿಭಾಗೋ ವಚನಾದ್ಧಾರ್ದ ಏವ ರಶ್ಮ್ಯನುಸಾರೀ
ನಿಶಿತೋ ದಕ್ಷಿಣಾಯನೇ ಯೋಗಿನಃ ಪ್ರತಿಸ್ಮೃತೇಃ ।
ತಥಾರ್ಚಿರಾದ್ವಾಯುಮುಘಟ್ಟಿತೋ ವರುಣೇನ ॥೮೮॥

---

ಅಂದರೆ ವಾಕ್ಕಿನವೃತ್ತಿಯು ಲಯವಾಗುವುದು ಎಂದರ್ಥವು, ಇದರಂತೆ ಸರ್ವೇಂದ್ರಿಯ ವೃತ್ತಿಗಳೂ ಮನಸ್ಸಿನಲ್ಲಿ ಲೀನವಾಗುವುವು. "ತನ್ಮನಃ ಪ್ರಾಣ ಉತ್ತರಾತ್" ಈ ಅಧಿಕರಣವು, ಮನಸ್ಸೂ ಸಹ ವೃತ್ತಿಯ ಮೂಲಕ ಪ್ರಾಣದಲ್ಲಿ ಲೀನವಾಗುವುದು, ಎಂದು ನಿರೂಪಿಸುವುದು. "ಸೋಧ್ಯಕ್ಷೇ" ಈ ಅಧಿಕರಣವು ಪ್ರಾಣವು ಅವಿದ್ಯಾ ಕರ್ಮಗಳಿಂದ ಕೂಡಿದ ವಿಜ್ಞಾನಾತ್ಮನಲ್ಲಿ ಲೀನವಾಗುವುದು, ಎಂದು ನಿರೂಪಿಸುವುದು. ಒಟ್ಟಿನಲ್ಲಿ ವಾಕ್ಕು ಮನಸ್ಸಿನಲ್ಲಿಯೂ, ಮನಸ್ಸು ಪ್ರಾಣದಲ್ಲಿಯೂ, ಪ್ರಾಣವು ತೇಜೋಧಿಷ್ಠಿತನಾದ ಪ್ರಜ್ಞಾನಾತ್ಮನಲ್ಲಿಯೂ ಲೀನವಾಗುವುವು. ॥೮೬॥

"ಸೂಕ್ಷ್ಮಂ ಚ ಪ್ರಾಣತಶ್ಚ" ಈ ಅಧಿಕರಣವು "ತೇಜಃ ಪರಸ್ಯಾಂ ದೇವತಾಯಾಂ" ಎಂಬ ಶ್ರುತಿಯಲ್ಲಿ ಹೇಳಿದ ತೇಜಸ್ಸು ಸೂಕ್ಷ್ಮರೂಪದಿಂದ ಮೃತಜೀವನೊಡನೆಯೇ ಇರುವುದು, ಶರೀರದಲ್ಲಿರುವುದಿಲ್ಲ. ಆದುದರಿಂದಲೇ ಮೃತ ನಾದವನ ಶರೀರದಲ್ಲಿ ತೇಜಸ್ಸಿನ ಬಿಸಿಯಿಲ್ಲದೆ ತಣ್ಣಗಾಗಿರುವುದು ಎಂದು ನಿರೂಪಿಸುವುದು. ಬ್ರಹ್ಮಜ್ಞಾನವುದಯಿಸುವ ವರೆಗೂ ಭೂತಸೂಕ್ಷ್ಮಗಳು ಜೀವನೊಡನೆಯೇ ಇದ್ದು ಜನ್ಮಾಂತರಗ್ರಹಣಕ್ಕನುಕೂಲವಾಗುವುವು. ॥೮೭॥

"ಸ್ಮರ್ಯತೇ ಚ" ಈ ಅಧಿಕರಣವು ಬ್ರಹ್ಮವಿತ್ತನಾದವನಿಗೆ ಗತ್ಯುತ್ಕ್ರಾಂತಿಗಳಲ್ಲ, ದೇಹವನ್ನು ಬಿಟ್ಟು ಅವನು "ಅತ್ರೈವ ಸಮವಲೀಯಂತೇ" ಎಂಬ ಶ್ರುತ್ಯನುಸಾರವಾಗಿ ಇಲ್ಲಿಯೇ ಬ್ರಹ್ಮವಸ್ತುವಿನಲ್ಲಿ ಐಕ್ಯನಾಗುವನು ಎಂದು ನಿರೂಪಿಸುವುದು. "ತಾನಿಪರೇ" ಈ ಅಧಿಕರಣವು ಬ್ರಹ್ಮಜ್ಞಾನಿಯ ಇಂದ್ರಿಯಗಳೂ ಭೂತಗಳೂ ಬ್ರಹ್ಮನಲ್ಲಿಯೇ ಲೀನವಾಗುವವೆಂದು ನಿರೂಪಿಸುವುದು.

ಆತಿವಾಹಿಕವಿಧೇಸ್ತದಲಿಂಗಾತ್
ತದ್ವದತ್ರಉಭಯೋರಪಿ ಸಿದ್ಧಿಃ।
ತದ್ವೈತೇನ ಗತಿರಪ್ಯುಪಾವೃತೋ
ವಿಶೇಷಸಾಮೀಪ್ಯಸಕಾರ್ಯಹೇತೌ ॥೪೯॥

---

"ಅವಿಭಾಗೋ ವಚನಾತ್" ಈ ಅಧಿಕರಣವು ನಿಶ್ಶೇಷವಾಗಿ ಬ್ರಹ್ಮಜ್ಞಾನಿಯ ಪ್ರಾಣಾದಿಗಳೆಲ್ಲವೂ ಲಯವನ್ನೈದುವುದು. "ಹಾರ್ದಾನುಗೃಹೀತಃ" ಈ ಅಧಿಕರಣವು ಉಪಾಸಕನ ಗತಿಯನ್ನು ರೂಪಿಸುತ್ತಾ ಉಪಾಸಕನು ನೆತ್ತಿಯಿಂದಲೇ ಊರ್ಧ್ವಲೋಕಗಳನ್ನು ಪಡೆಯುವನು ಎಂದು ನಿರ್ಣಯಿಸುವುದು. "ರಶ್ಮ್ಯನುಸಾರೀ" ಈ ಅಧಿಕರಣವು ನಾಡೀರಶ್ಮಿಗಳೊಡನೆ ಉಪಾಸಕನು ಲೋಕಾಂತರಗಳಿಗೆ ತೆರಳುವನೆಂದು ತಿಳಿಸುವುದು. "ಅತಶ್ಚಾಯನೇಪಿ ದಕ್ಷಿಣೇ" ಈ ಅಧಿಕರಣವು ಉಪಾಸಕನ ಗತಿಯನ್ನು ನಿರೂಪಿಸುತ್ತಾ ಉಪಾಸಕನು ಬ್ರಹ್ಮರಂಧ್ರದಿಂದಲೇ ಊರ್ಧ್ವಲೋಕಗಳನ್ನು ಪಡೆಯುವನು ಎಂದು ನಿರ್ಣಯಿಸುವುದು. "ಅತಶ್ಚಾಯನೇಪಿ ದಕ್ಷಿಣೇ" ಈ ಅಧಿಕರಣವು ಉಪಾಸಕನು ದಕ್ಷಿಣಾಯನದಲ್ಲಿ ಮೃತನಾದರೂ ಕಾಲನಿಯಮವಿಲ್ಲದೇ ಉತ್ತಮಲೋಕಗಳನ್ನು ಪಡೆಯುವನು ಎಂದೂ ತಿಳಿಸುವುದು, "ಅರ್ಚಿರಾದಿನಾ ತತ್ಪ್ರಥಿತೇಃ" ಈ ಅಧಿಕರಣವು ಬ್ರಹ್ಮೋಪಾಸಕರೆಲ್ಲರೂ ಅರ್ಚಿರಾದಿಮಾರ್ಗದಿಂದಲೇ ಲೋಕಾಂತರಗಳನ್ನು ಪಡೆಯುವರೆಂದು ತಿಳಿಸುವುದು. "ವಾಯುಮಬ್ದಾತ್" "ತಟಿತೋಧಿ" ಈ ಅಧಿಕರಣಗಳು ದೇವಯಾನಮಾರ್ಗವನ್ನು ವಿವರಿಸುತ್ತಾ ಸಂವತ್ಸರದಿಂದ ವಾಯುಲೋಕವನ್ನು ಪಡೆಯುವನು, ವರುಣಲೋಕದಿಂದ ವಿದ್ಯುತ್ತನ್ನು ಹೊಂದುವನು, ಎಂದು ನಿರೂಪಿಸುವುವು. ॥೪೮॥

"ಆತಿವಾಹಿಕಾಸ್ತಲ್ಲಿಂಗಾತ್" ಈ ಅಧಿಕರಣವು ಮೃತನಾದವನಿಗೆ ಹೇಳುವ ಲೋಕಗಳು ಮಾರ್ಗಗಳಲ್ಲಿ ಲೋಕಾಂತರಗಳನ್ನು ಹೊಂದಿಸುವ ಆ ಲೋಕಾಭಿಮಾನೀ ದೇವತೆಗಳು ಉಪಾಸಕನನ್ನು ಒಯ್ಯುವರು. ವಿದ್ಯುಲ್ಲೋಕದಿಂದ ಮುಂದೆ ಅಮಾನವಪುರುಷನೇ ಒಯ್ಯುವನು, ಎಂದು ನಿರೂಪಿಸುವುದು. "ಕಾರ್ಯಂ ಬಾದರಿಃ" ಈ ಅಧಿಕರಣವು ಆ ಅಮಾನುಷಪುರುಷನು ಚತುರ್ಮುಖನ ಲೋಕಕ್ಕೆ ತಲಪಿಸುವನು ಎಂದು ತಿಳಿಸುವುದು. ॥೪೯॥

ಸ್ಮೃತಿಸ್ತಥಾನ್ಯೋಽಪಿ ಚ ದರ್ಶನೇನ
ಕಾರ್ಯೇ ತಥಾ ಪ್ರತಿಪತ್ತಿಪ್ರತೀಕೇ ।
ವಿಶೇಷದೃಷ್ಟ್ಯಾ ಸಂಪದಾವಿರ್ಭವೇನ
ಸ್ವೇನಾಂಶತ್ವಾನ್ಮುಕ್ತಿವಿಜ್ಞಾನತೋ ಹಿ ॥೯೦॥

ಆತ್ಮಪ್ರಕಾಶಾದವಿಭಾಗೇನ ದೃಷ್ಟಃ
ತದ್ಬ್ರಹ್ಮಣೋನ್ಯದ್ದ್ಯುತಿತನ್ಮಾತ್ರತೋನ್ಯಃ ।
ಉಪನ್ಯಾಸಾದನ್ಯಸಂಕಲ್ಪಭೂತ್ಯಾ
ರಥಾವಾನ್ಯೋಽಪ್ಯಥಾಹ (?) ॥೯೧॥

---

ಸ್ಮೃತೇಶ್ಚ—ಈ ಸೂತ್ರವು, ಸ್ಮೃತಿಯವಾಕ್ಯಾನುಸಾರವಾಗಿ ಬ್ರಹ್ಮಲೋಕಕ್ಕೆ ಹೋದ ಉಪಾಸಕನು ಕಲ್ಪಾಂತರದಲ್ಲಿ ಆ ಬ್ರಹ್ಮನೊಡನೆಯೇ ಮುಕ್ತನಾಗುವನು ಎಂದು ನಿರೂಪಿಸುವುದು. "ಅಪ್ರತೀಕಾಲಂಬನಾನ್ನಯತೀತಿ." ಈ ಅಧಿಕರಣವು ಪ್ರತೀಕೋಪಾಸಕರನ್ನು ಬಿಟ್ಟು ಬ್ರಹ್ಮೋಪಾಸಕರೆಲ್ಲರನ್ನೂ ಆ ಅಮಾನವಪುರುಷನು ಬ್ರಹ್ಮಲೋಕಕ್ಕೆ ಒಯ್ಯುವನೆಂದು ತಿಳಿಸುವುದು. "ಸಂಪದ್ಯಾವಿರ್ಭಾವಃ ಸ್ವೇನಶಬ್ದಾತ್" ಈ ಅಧಿಕರಣವು ಬ್ರಹ್ಮವಿದ್ಯೆಯ ವಿಷಯವನ್ನು ಪ್ರಸ್ತಾಪಿಸುತ್ತಾ ಬ್ರಹ್ಮಜ್ಞಾನದಿಂದ ವಿದೇಹಮುಕ್ತನಾದವನು ವಿಶೇಷರೂಪವನ್ನು ಹೊಂದುವುದಿಲ್ಲ. ತನ್ನ ಆತ್ಮಸ್ವರೂಪವನ್ನೇ ಹೊಂದುವನು. ಅಲ್ಲಿಯ ವರೆಗೆ ಅವಿದ್ಯೆಯಿಂದ ಮರೆಯಾಗಿದ್ದ ಆತನ ನಿಜಸ್ವರೂಪವು ಆವಿರ್ಭವಿಸುವುದು ಎಂದು ನಿರೂಪಿಸುವುದು. ॥೯೦॥

"ಅವಿಭಾಗೇನ ದೃಷ್ಟತ್ವಾತ್" ಈ ಸೂತ್ರವು ಸ್ವಸ್ವರೂಪವನ್ನು ಬ್ರಹ್ಮಜ್ಞಾನಿಯು ಹೊಂದುವುದೆಂದರೆ ಪರಮಾತ್ಮಸ್ವರೂಪವನ್ನೇ ಹೊಂದುವನು. ಮಾಯೆಯಿಂದ ಮರೆಯಾದ ತನ್ನ ರೂಪವು ಆಗ ಆವಿರ್ಭವಿಸುವುದು ಎಂದು ನಿರೂಪಿಸುವುದು. "ಬ್ರಾಹ್ಮಣಜೈಮಿನಿರುಪನ್ಯಾಸಾದಿಭ್ಯಃ" ಎಂಬಲ್ಲಿ ಮತಾಂತರಗಳಿವೆ. ಜೈಮಿನಿಯು ಪರಮಾತ್ಮನ ಸತ್ಯಸಂಕಲ್ಪತ್ವಾದಿಗುಣಗಳಿಂದ ಕೂಡಿದ ಸ್ವರೂಪವನ್ನು ಹೊಂದುವನು ಎಂದೂ, ಆ ಗುಣಗಳೇ ಪರಮಾತ್ಮಸ್ವರೂಪವು ಮತ್ತು ನಿತ್ಯವೆಂದೂ ಹೇಳುವನು. ಇದನ್ನು ಖಂಡಿಸುತ್ತಾ ಔಡುಲೋಮಿಮುನಿಯು ಚೈತನ್ಯವು ಮಾತ್ರ ಪರಮಾತ್ಮನ ಸತ್ಯಸ್ವರೂಪವು, ಮಿಕ್ಕವೆಲ್ಲ ಅತ್ಯಂತಾಸತ್ತುಗಳು, ಆ ಚೈತನ್ಯಸ್ವರೂಪವನ್ನೇ ಮುಕ್ತನು ಹೊಂದುವನು ಎಂದು ಹೇಳುವನು. ಬಾದರಾಯಣಾಚಾರ್ಯನು

ಭಾವಮನ್ಯೋ ಉಭಯಂ ನಸ್ವಭಾವಾ
ಭಾವೇ ಸ್ವಾಪ್ಯೇ ಸಂಪತ್ತಿರೇವಂ ಜಗತ್ಸ್ಯಾತ್ ।
ಪ್ರತ್ಯಕ್ಷೇಣೋಪದೇಶಸ್ಥಿತಿರಪಿ ಜಗತೋವ್ಯಕ್ತಿಭಾವಾದುಪಾಸಾ
ಭೇಧಾಭಾಸಸ್ಥಿತಿರವಿಸ್ಮೃವರಾವರ್ತಿರಿತಿ ಚ ॥೯೨॥

ತಥಾ ದೃಷ್ಟೇರ್ದೃಷ್ಟುರ್ವಿಪರಿತಿರದೃಷ್ಟೇಃ ಶ್ರುತಿವಶಾತ್
ತಥಾ ಬುದ್ಧೇರ್ಬಾಧೋ ಭವತಿ ಅನುಮಾನೇನ ಹಿ ಬುಧಃ ।

---

ವ್ಯವಹಾರಾಪೇಕ್ಷೆಯಿಂದ ಸತ್ಯಕಾಮತ್ವಾದಿಗಳು ಪರಮೇಶ್ವರನಲ್ಲಿವೆ, ವಸ್ತುತಃ ಚೈತನ್ಯವೇ ಪರಮಾತ್ಮನ ನಿಜಸ್ವರೂಪವೆಂದು ಸಿದ್ಧಾಂತಿಸುವನು. "ಸಂಕಲ್ಪಾದೇವ ತು ತಚ್ಛ್ರುತೇಃ" ಈ ಅಧಿಕರಣವು ಹಾರ್ದವಿದ್ಯೋಪಾಸನೆಯಿಂದ ಸ್ವರ್ಗವನ್ನು ಪಡೆದವನು ಸ್ಮರಿಸಿದ ಕೂಡಲೇ ಆತನ ಪಿತೃಗಳು ಬಂದು ಬೇಕಾದ ಭೋಗ ಗಳನ್ನು ಕಲ್ಪಿಸುವರು ಎಂದು ಶ್ರುತಿಯಲ್ಲಿದೆ. ಇಲ್ಲಿ ಪಿತ್ರಾದಿಗಳು ಬರುವುದಕ್ಕೆ ಉಪಾಸಕನ ಸಂಕಲ್ಪವೇ ಮುಖ್ಯಕಾರಣವು, ಇನ್ನಾವ ಕಾರಣಾಪೇಕ್ಷೆಯೂ ಇಲ್ಲ ವೆಂದು ಶ್ರುತ್ಯನುಸಾರವಾಗಿ ಸಿದ್ಧಾಂತಿಸುವುದು. ॥೯೧॥

"ದ್ವಾದಶಾಹವದುಭಯವಿಧಂ ಬಾದರಾಯಣೋತಃ" ಈ ಅಧಿಕರಣವು ಮುಕ್ತನಿಗೆ ಬೇಕಾದ ಭೋಗಗಳನ್ನು ಸಂಕಲ್ಪಿಸಿಕೊಳ್ಳಲು ಮನವಿರುವಂತೆ ಶರೀರೇಂ ದ್ರಿಯಗಳಿರುವುದಿಲ್ಲವೆಂಬ ಬಾದರಿಮುನಿಯ ಮತವನ್ನೂ, ಶರೀರೇಂದ್ರಿಯಗಳಿರುವ ವೆಂಬ ಜೈಮಿನಿಮತವನ್ನೂ, ಪೂರ್ವಪಕ್ಷವಾಗಿ ವಿವರಿಸಿ ಬಾದರಾಯಣರ ಮತದಂತೆ ಸಂಕಲ್ಪಾನುಗುಣವಾಗಿ ಸಶರೀರತೆಯು ಮುಕ್ತಾತ್ಮನಿಗಿರುವುದೆಂದೂ ಸತ್ಯಸಂಕಲ್ಪ ನಾದುದರಿಂದ ಸಶರೀರತೆಯನ್ನು ಸಂಕಲ್ಪಿಸಿಕೊಂಡರೆ ಸಶರೀರನೂ, ಅಶರೀರತೆ ಯನ್ನು ಸಂಕಲ್ಪಿಸಿಕೊಂಡರೆ ಅಶರೀರನೂ, ಆಗಿರುವನೆಂದೂ ಸಿದ್ಧಾಂತಿಸುವುದು. "ಪ್ರತ್ಯಕ್ಷೋಪದೇಶಾದಿತಿ" ಈ ಅಧಿಕರಣವು ಸಗುಣಬ್ರಹ್ಮೋಪಾಸನೆಯಿಂದ ಈಶ್ವರಸಾಯುಜ್ಯವನ್ನು ಪಡೆದವರಿಗೆ ನಿತ್ಯಸಿದ್ಧವಾದ ಈಶ್ವರತ್ವವಿಲ್ಲದುದರಿಂದ ನಿರಂಕುಶವಾದ ಐಶ್ವರ್ಯವು ಇಲ್ಲ. ಜಗತ್ತಿನ ಉತ್ಪತ್ತ್ಯಾದಿಗಳಿಗೆ ಆ ಉಪಾಸಕರು ಕಾರಣರಾಗಲಾರರು, ಜಗತ್ಸೃಷ್ಟ್ಯಾದಿಗಳನ್ನು ಬಿಟ್ಟು ಮಿಕ್ಕ ಅಣಿಮಾದ್ಯೈಶ್ವರ್ಯ ಗಳು ಅವರಿಗಿದೆಯೆಂದು ನ್ಯಾಯಶ್ರುತ್ಯನುಸಾರವಾಗಿ ಸಿದ್ಧಾಂತಿಸುವುದು. ॥೯೨॥

ದೃಶ್ಯಗಳ ದೃಕ್ಸ್ವರೂಪನಾದ ಈಶ್ವರನಿಗೆ ವಿಕಾರಸ್ಥಿತಿಯೇ ಇಲ್ಲ. ಅದು ಉಪಾಸನೆ ಮಾತ್ರ ಎಂದು ನಿರೂಪಿಸಿ "ಭೋಗಮಾತ್ರಸಾಮ್ಯಲಿಂಗಾಚ್ಚ" ಈ

ಭೋಗೇ ಸಾಮಾನ್ಯಲಿಂಗಾಚ್ಛಿವಭಜನಭವೇ ಮಾನ್ಯಮನಸಾ
ಅನಾವೃತ್ತಿಃಶ್ಶಬ್ದೋ ಭವತಿ ವಿಧಿವಾಕ್ಯೇನ ನಿಯತಂ ॥೯೩॥

ತವೋಕ್ತಾಃ ಸೂತ್ರಾಣಾಂ ವಿಧಿರಪಿ ಚ ಸಾಮಾನ್ಯಮುಭಯಃ ।
ಪ್ರಕೃಷ್ಟಃ ಶ್ರುತ್ಯೈವ ಪ್ರಭವತಿ ಮಹಾನಂದಸದನೇ ॥೯೪॥

॥ ಸ್ಕಂದ ಉವಾಚ ॥

ತ್ರಿಣೇತ್ರವಕ್ತ್ರಸುಚರಿತ್ರರೂಪಂ
ಮಂತ್ರಾಪವಾದಾಂಬುಜಮಿತ್ರರೂಪಾಃ ।
ನಿಕೃಷ್ಟರೂಪಾ ಮುನಯೋ ವಿತೇನಿರೇ

---

ಸೂತ್ರವು ಉಪಾಸನೆಯಿಂದ ಈಶ್ವರಸಾಯುಜ್ಯವನ್ನು ಹೊಂದಿದವನಿಗೆ ಕೇವಲವಾಗಿ ಈಶ್ವರತೆಯ ಭೋಗವೇ ವಿನಾ ಇನ್ನಾವ ನಿರಂಕುಶವಾದ ಐಶ್ವರ್ಯವೂ ಇಲ್ಲವೆಂದು ನಿರೂಪಿಸುವುದು. "ಅನಾವೃತ್ತಿಶಬ್ದಾದನಾವೃತ್ತಿಶ್ಶಬ್ದಾತ್" ಈ ಅಧಿಕರಣವು "ನ ಸ ಪುನರಾವರ್ತತೇ" ಎಂಬ ಶ್ರುತ್ಯರ್ಥವನ್ನು ನಿರೂಪಿಸುತ್ತಾ ಸಗುಣೋಪಾಸನೆಯಿಂದ ದೇವಯಾನಮಾರ್ಗದಿಂದ ಬ್ರಹ್ಮಲೋಕಗಳನ್ನು ಪಡೆದು ಸಾಂಕುಶವಾದ ಐಶ್ವರ್ಯವನ್ನನುಭವಿಸುವ ಉಪಾಸಕನು ಇತರೋಪಾಸಕರಂತೆ ಹಿಂತಿರುಗಿ ಭೂಮಿಯಲ್ಲಿ ಜನ್ಮತಾಳುವುದಿಲ್ಲ. ಕಲ್ಪಾಂತದಲ್ಲಿ ಬ್ರಹ್ಮನೊಡನೆ ಅವನೂ ಮುಕ್ತನಾಗುವನು. ಅಲ್ಲಿ ಪುನಃ ಪುನಃ ಚತುರ್ಮುಖಬ್ರಹ್ಮನೊಡನೆ ಜ್ಞಾನಾಭ್ಯಾಸವನ್ನು ಮಾಡಿ ಸ್ವಸ್ವರೂಪವನ್ನೇ ಹೊಂದುವನು, ಬ್ರಹ್ಮೀಭೂತನಾಗುವನು-ಎಂದು ಸಿದ್ಧಾಂತಿಸುವುದು. ॥೯೩॥

ಎಂದು ಋಭುಮುನಿಯು ನಿದಾಘಮುನಿಯೊಡನೆ ಹೇಳಿ, ಸಾಮಾನ್ಯವಾಗಿ ವೇದಾಂತಸೂತ್ರಗಳ ಅಭಿಪ್ರಾಯವನ್ನು ಸಂಗ್ರಹಿಸಿ ನಿನಗೆ ಈಗ ಹೇಳಿರುವೆನು, ಈ ಸೂತ್ರಗಳು ವೇದಾಂತವಾಕ್ಯಗಳ ಸಿದ್ಧಾಂತಗಳಿಗನುಸಾರವಾಗಿರುವುವು, ಇವುಗಳನ್ನು ವಿಮರ್ಶಿಸಿದರೆ ವೇದಾಂತವಾಕ್ಯಗಳನ್ನು ವಿಮರ್ಶಿಸಿದಷ್ಟು ಪ್ರಯೋಜನವಾಗುವುದು ಎಂದನು. ॥೯೪॥

ಪರಶಿವರೂಪಿಯಾದ ಪರಮಾತ್ಮಸ್ವರೂಪವನ್ನು ವಿಸ್ತರಿಸುವ ಈ ಸೂತ್ರಗಳನ್ನು ಕೆಲವರು ಮೂಢರಾದ ಮುನಿಗಳು ತಮ್ಮ ಮನಸ್ಸಿಗೆ ಬಂದಂತೆ ಅರ್ಥ ಕಲ್ಪಿಸುತ್ತಾ ವೇದಾಂತವಾಕ್ಯಗಳಿಗೆ ವಿಪರೀತಾರ್ಥವನ್ನು ಕಲ್ಪಿಸಿ, ಸಂಕುಚಿತಬುದ್ಧಿಯಿಂದ

ಮತಾನುಸಾರೀಪ್ಯಥ ಸೂತ್ರಿತಾನಿ ।
ನತಾನಿ ಬುದ್ಧ್ಯುದ್ಭವಬೋಧದಾನಿ
ವಿಶ್ವೇಶಪಾದಾಂಬುಜಭಕ್ತಿದಾನಿ ॥೯೫॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ದ್ವಿತೀಯೋಽಧ್ಯಾಯಃ

---

ತಮ್ಮ ತಮ್ಮ ಮತಗಳಿಗನುಸಾರವಾಗಿ ಭೇದಪರವಾಗಿ ಟೀಕಿಸಿ ಪ್ರಚುರಪಡಿಸುವರು. ಅಂತಹವರ ವಿವರಣೆಗಳು ನಿಜವಾದ ಬ್ರಹ್ಮಜ್ಞಾನವನ್ನುಂಟುಮಾಡಲಾರವು, ಅದರಿಂದ ಪರಮೇಶ್ವರನಲ್ಲಿ ಭಕ್ತಿಯೂ ಆವನ ಅನುಗ್ರಹವೂ ಜನಿಸಲಾರದು, ಎಂದು ಕುಮಾರಸ್ವಾಮಿಯು ಜೈಗೀಷವ್ಯಾದಿಗಳಿಗೆ ಶಿವಪ್ರೋಕ್ತವಾದ ಜ್ಞಾನಸ್ವರೂಪವನ್ನು ವಿವರಿಸಿದನು. ॥೯೫॥

ಇಲ್ಲಿಗೆ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತೃತೀಯೋಽಧ್ಯಾಯಃ

॥ ಸೂತ ಉವಾಚ ॥

ತತೋ ಮಹೇಶಾತ್ಸಂಶ್ರುತ್ಯ ಸೂತ್ರಾಣಿ ಋಭುರೇವ ಹಿ ।
ಕೈಲಾಸೇಶಂ ಮಹಾದೇವಂ ತುಷ್ಟಾವ ವಿನಯಾಂಜಲಿಃ ॥೧॥

ಲಬ್ಧಜ್ಞಾನೋ ಮಹಾದೇವಾನ್ಮುನಿಭ್ಯಃ ಕಥಯಚ್ಚ ತತ್ ।
ತತ್ಸ್ತುತಿಂ ಚ ಶೃಣುಷ್ವೇತಿ ಜಗಾದ ಗಿರಿಜಾಸುತಃ ॥೨॥

ಜೈಗೀಷವ್ಯಂ ಮಹಾತ್ಮಾನಂ ಜಿತಷಡ್ವರ್ಗಮುತ್ತಮಂ ॥೩॥

---

## ಮೂರನೆಯ ಅಧ್ಯಾಯ

ಸೂತಮುನಿಯು ಶೌನಕಾದಿಗಳನ್ನು ಕುರಿತು, "ಋಭುವು ಮಹೇಶ್ವರನಿಂದ ವೇದಾಂತಸೂತ್ರಾರ್ಥವನ್ನು ಕೇಳಿ ಸಂತಸಗೊಂಡು ವಿನಯದಿಂದ ಕೈಜೋಡಿಸಿ ಆ ದೇವನನ್ನು ಈರೀತಿ ಸ್ತುತಿಸಿದನು. ॥೧॥

ಮತ್ತು ಈಶ್ವರನು ಉಪದೇಶಿಸಿದ ವೇದಾಂತಜ್ಞಾನವನ್ನು ಋಭುವು ಇತರ ಮುನಿಗಳಿಗುಪದೇಶಿಸಲಾರಂಭಿಸಿದನು. ಅದೇ ಋಭುವಿನ ಶಿವಸ್ತುತಿಯನ್ನು ಸ್ಕಂದನು, ಮಹಾತ್ಮನೂ ಜಿತೇಂದ್ರಿಯನೂ ಆದ ಜೈಗೀಷವ್ಯನಿಗೆ ಹೇಳಿದನು" ಎಂದು ಅದೇ ವಿಷಯವನ್ನು ತಾನು ವಿವರವಾಗಿ ಹೇಳಲುಪಕ್ರಮಿಸಿದನು. ॥೨-೩॥

॥ ಸ್ಕಂದ ಉವಾಚ ॥

ಸಂಸ್ತುತ್ಯ ಸಾಂಬಮೀಶಾನಂ ಋಭುರ್ಜ್ಞಾನಮವಿಂದತ ।
ಶಾಂಭವಃ ಸುಮಹಾಯೋಗೀ ತುಷ್ಟಾವಾಷ್ಟತನುಂ ಹರಂ ॥೪॥

॥ ಋಭುರುವಾಚ ॥

ಗಂಧದ್ವಿಪವರಬೃಂಹತ್ವಚಿ ರುಚಿಬಂಧೋದ್ಧೃತ ಪಟಗಂಧಪ್ರ-
ಮುಖಮುಂಡಾಧವ್ರಜದರಿಹರಿಮುಖನಖರೋದ್ಧೃತ್ಸ್ಕಂದೋದ್ಧೃ-
ತಮುಖಬಂಧಕ್ಷುರನಿಭನಿರ್ಯದ್ರಸಗಸ್ಪೃಭಿಂದನ್ನಗಧರಂ ವಿಂ-
ಧ್ಯಪ್ರಭ ಶಿವ ಮೇಧ್ಯಪ್ರಭುವರ ಮೇಧ್ಯೋತ್ತಮಶಿವಭೇ-
ದ್ಯಾಖಿಲಜಗದುದ್ಯದ್ರವಿಗತ ವೇದ್ಯಾಗಮಶಿಖಗದ್ಯಸ್ತುತಪದ-
ಪದ್ಯಪ್ರಕಟಿಹೃದುದ್ಯಭವಗದವೈದ್ಯೋತ್ತಮ ಪಾಹಿ ಶಂಭೋ- ॥೪॥

ಚಂಡದ್ವಿಪಕರಕಾಂಡಪ್ರಭಭುಜದಂಡೋದ್ಧೃತ ನಗಖಂಡತ್ರಿಪುರ-
ಮಹಾಂಡಸ್ಫುಟ ಉಡುಪಶಿಖಂಡದ್ಯುತಿವರಗಂಡದ್ವಯ ಕೋದಂಡಾಂ-
ತಕಕೆದಂಡಿತಪಾದ ಪಾಹಿ ಶಂಭೋ ॥೫॥

---

ಎಲೈ ಜೈಗೀಷವ್ಯನೇ, ಋಭುಮುನಿಯು ಹೀಗೆ ಶಂಕರನಿಂದ ಜ್ಞಾನವನ್ನು ಪಡೆದು ಈ ರೀತಿ ಸ್ತುತಿಸಿದನು. ॥೪॥

ಮದಿಸಿದ ಆನೆಯ ಚರ್ಮವನ್ನುಡುವವನೂ, ಮದ್ದಾನೆಯ ಕುಂಭಸ್ಥಳ ವನ್ನು ಸೀಳಿ ರಕ್ತಮಯವಾದ ಸಿಂಹದ ಮೊನೆಯಾದ ಉಗುರಿನಂತೆ ಮಹಾತೇಜಸ್ವಿಯೂ, ಸ್ಕಂದನಿಂದ ಓಲೈಸಿಕೊಳ್ಳುವವನೂ, ಮೇರುಗಿರಿಯನ್ನು ಧನುಸ್ಸನ್ನಾಗಿ ಧರಿಸಿದವನೂ, ವಿಂಧ್ಯಗಿರಿಯಂತೆ ಉನ್ನತನೂ, ಮಂಗಳಮೂರ್ತಿಯೂ, ಪವಿತ್ರ ಸ್ವರೂಪನೂ, ಜಗತ್ತೆಲ್ಲವನ್ನು ಪ್ರಳಯಕಾಲದಲ್ಲಿ ಸಂಹರಿಸುವವನೂ, ಸೂರ್ಯ ಮಂಡಲದಲ್ಲಿ ನೆಲಸಿರುವವನೂ, ವೇದಾಂತವಾಕ್ಯಗಳಿಂದ ಸ್ತುತಿಸಲ್ಪಡುವವನೂ, ಸಂಸಾರರೋಗವನ್ನು ಹೋಗಲಾಡಿಸುವ ಮಹಾವೈದ್ಯನೂ ಆದ ಓ ದೇವನೇ, ನನ್ನನ್ನು ಪಾಲಿಸು. ॥೪॥

ಮದಗಜದ ಸೊಂಡಿಲಿನಂತೆ ನೀಳವಾದ ಮತ್ತು ಪುಷ್ಟವಾದ ತೋಳುಳ್ಳವನೂ, ತ್ರಿಪುರಾಸುರರನ್ನು ಸಂಹರಿಸಿದ ಮಹಾವೀರನೂ, ಜಟೆಯಲ್ಲಿ ಚಂದ್ರಕಲೆಯನ್ನು

ಕಿಂಚಿಜ್ಜಲಲವಸಿಂಚದ್ದ್ವಿಜಕುಲಮುಂಚದ್ವೃಜಿನಕುಲ ದ್ವಿಜಪತಿ-
ಚಂಚಚ್ಛುಭಜಟ, ಕುಂಚತ್ಪದನಖ ಮುಂಚನ್ನತವರ ಕರು-
ಣಾ ಸಾಹಿ ಶಂಭೋ ॥೬॥

ದೇವ ಶಂಕರ ಹರ ಮಹೇಶ್ವರ ಪಾಪತಸ್ಕರಾಮರಮಯಸ್ಕರ ಶಿವದ
ಶಂಕರ ಪುರಹರೇಶ್ವರ ಪಾಹಿ ಶಂಭೋ ॥೭॥

ಅಂಗಜಭಂಗಂ ತುಂಗರಥಾಂಗಂ ಜಲಧಿನಿಷಂಗಂ ಧೃತಭುಜ
ಗಾಂಗಂ ದೃಶಿಸುಪತಂಗಂ ಕರಸುಕುರಂಗಂ ಜಟಧೃತಗಂಗಂ ।
ಯಮಿಹೃದಿಸಂಗಂ ಭಜಶಿವಲಿಂಗಂ ಭವಭಯಭಂಗಂ ॥೮॥

ಶಂಬರಕರ ಶರದಂಬರವರಚರಡಂಬರಘೋಷಣೋದುಂಬರ
ಫಲಜಗನಿಕುರುಂಬಭರಣಹರ ಬಿಂಬಿತಹೃದಿಚಿರಲಂಬಿತಪದಯುಗ
ಲಂಬೋದರಜನಕಾಂತಕಹರ ಶಿವ ಬಿಂದುವರಾಸನಬಿಂದುಗಹನಶರ
ದಿಂದುವದನವರ ಕುಂದಧವಳ ಗಣವೃಂದವಿನತಭವ ಭಯಹರ
ಪರವರ ಕರುಣಾಕರ ಫಣಿವರಭೂಷಣಸ್ಮರಹರ ನಗಧರ ಪರಿಪಾಹಿ ॥೯॥

---

ಧರಿಸಿದವನೂ, ಯಮನನ್ನು ಶಿಕ್ಷಿಸಿದ ಮೃತ್ಯುಂಜಯನೂ ಆದ ಓ ದೇವನೇ ಪಾಲಿಸು. ॥೫॥

ಪವಿತ್ರವಾದ ಸ್ವಲ್ಪಮಾತ್ರ ಜಲವನ್ನಾದರೂ ಶಿವಲಿಂಗಕ್ಕಭಿಷೇಚಿಸುವ ಬ್ರಾಹ್ಮಣರ ಪಾಪಗಳೆಲ್ಲವನ್ನು ಕಳೆಯುವವನೂ, ಚಂದ್ರಶೇಖರನೂ, ಜಟಾಧಾರಿಯೂ, ಭಕ್ತಿಯಿಂದ ಆರಾಧಿಸುವವರನ್ನುದ್ಧರಿಸುವವನೂ ಆದ ಓ ದೇವನೇ ಪಾಲಿಸು. ॥೬॥

ಓ ಜ್ಞಾನಜ್ಯೋತಿಸ್ವರೂಪನಾದ, ಪಾಪನಾಶಕನಾದ, ಮಂಗಳಕರನಾದ, ದೇವದೇವನೇ, ಓ ಶಂಕರ, ತ್ರಿಪುರವೈರಿಯೇ, ಓ ಮಹಾದೇವನೇ ನನ್ನನ್ನು ಪಾಲಿಸು. ॥೭॥

ಮನ್ಮಥನನ್ನು ದಹಿಸಿ, ಭೂಮಿಯೇ ರಥವಾಗುಳ್ಳ, ಸಮುದ್ರವೇ ಬತ್ತಳಿಕೆಯಾಗುಳ್ಳ, ನಾಗಭೂಷಣನಾದ ಉರಿಗಣ್ಣನಾದ, ಕೈಯಲ್ಲಿ ಮೃಗವನ್ನು ಧರಿಸಿರುವ, ಜಟೆಯಲ್ಲಿ ಗಂಗೆಯನ್ನುಳ್ಳ, ಯತಿಗಳ ಹೃದಯದಲ್ಲಿ ನೆಲಸುವ, ಸಂಸಾರಭಯವನ್ನು ಹೋಗಲಾಡಿಸುವ ಶ್ರೀಶಂಕರನ ದಿವ್ಯಲಿಂಗವನ್ನು ಸದಾಭಜಿಸಿರಿ. ॥೮॥

ದೇವದೇವೋತ್ತಮನೂ, ದಿಗಂಬರನೂ, ಜಗವೆಲ್ಲವನ್ನು ಪಾಲಿಸುವವನೂ, ಯೋಗಿಗಳ ಹೃದಯದಲ್ಲಿ ಸ್ಥಿರವಾಗಿ ನೆಲಸಿರುವವನೂ, ವಿನಾಯಕನ ಪಿತನೂ,

ರಾಸಭವೃಷಭೇಭಶರಭಾನನಗಣಗುಣನಂದಿತ ತ್ರಿಗುಣಪಥಾತಿಗ
ಶರವಣಭವನುತ ತರಣಿಸ್ಥಿತ ವರುಣಾಲಯಕೃತಪಾರಣಮುನಿಶರಣಾ
ಯಿತಪದಪದ್ಮಾರುಣ ಪಿಂಗಜಟಾಧರ ಕುರು ಕರುಣಾಕರ ಶಂಕರ ಶಂ
ಕುರು ಮೇ ॥೧೦॥

ಜಂಭಪ್ರಹರಣಕುಂಭೋದ್ಭವನುತ ಶುಂಭಪ್ರಮಥ ನಿಶುಂಭದ್ಯುತಿಹರ
ಭಿಂದಪ್ರಣಗಣ ಡಿಂಭಾಯಿತಸುರತಾರಕಹರಸುತ ಕುಂಭ್ಯುದ್ಧೃತಪದ
ವಿಂಧ್ಯಸ್ಥಿತದಿತಿಮಾಂದ್ಯಪ್ರಹರ ಮದಾಂಧದ್ವಿಪವರಕೃತ್ತಿಪ್ರವರ ।
ಸುಧಾಂಧಸನುತಪದ ಬುಧ್ಯಾಗಮ ಶಿವ ಮೇಧ್ಯಾತಿಥಿವರದ ಮಮಾವಂ
ಧ್ಯಂ ಕುರು ದಿವಸಂ ತವ ಪೂಜನತಃ ಪರಿಪಾಹಿ ಶಂಭೋ ॥೧೧॥

---

ಯಮನನ್ನು ಸಂಹರಿಸಿದ ಮೃತ್ಯುಂಜಯನೂ, ಓಂಕಾರಸ್ವರೂಪನೂ, ಭಯ ನಾಶಕನೂ, ಚಂದ್ರನಂತಹ ಮುಖವುಳ್ಳವನೂ, ಗಿರಿಮಲ್ಲಿಗೆಯಂತಹ ಶುಭ್ರದೇಹ ವುಳ್ಳವನೂ, ಸರ್ವೋತ್ತಮನೂ, ಕರುಣಾನಿಧಿಯೂ, ನಾಗಭೂಷಣನೂ ಆದ ಓ ದೇವದೇವನೇ ಪರಿಪಾಲಿಸು. ॥೯॥

ಕತ್ತೆಯ ಮುಖದ, ಎತ್ತಿನ ಮುಖದ, ಆನೆಯ ಮುಖದ, ಶರಭದ ಮುಖದ, ಗಣಗಳಿಂದ ಸೇವಿಸಲ್ಪಡುವವನೂ, ನಿರ್ಗುಣನೂ, ಸ್ಕಂದಸ್ವಾಮಿಯಿಂದ ಸೇವಿಸಲ್ಪಡುವವನೂ, ಸೂರ್ಯಮಂಡಲದಲ್ಲಿ ನೆಲಸಿರುವವನೂ, ಸಮುದ್ರವನ್ನು ಕುಡಿದ ಅಗಸ್ತ್ಯಮುನಿಯಿಂದ ಪೂಜಿಸಲ್ಪಟ್ಟವನೂ, ಚಿನ್ನದ ಬಣ್ಣದ ಜಟೆಯುಳ್ಳವನೂ ಆದ ಓ ಶಂಕರನೇ, ನನ್ನಲ್ಲಿ ದಯೆಯುಳ್ಳವನಾಗು, ನನಗೆ ಸುಖವನ್ನುಂಟುಮಾಡು. ॥೧೦॥

ಇಂದ್ರ ವರುಣರಿಂದ ವಂದಿಸಲ್ಪಡುವವನೂ, ಶುಂಭನಿಶುಂಭಾಸುರರನ್ನು ಸಂಹರಿಸಿದವನೂ, ತಾರಕನನ್ನು ಸಂಹರಿಸಿದ ಸ್ಕಂದನನ್ನೇ ಮಗನಾಗುಳ್ಳವನೂ, ಅಗಸ್ತ್ಯನು ವಾಸವಾಗಿರುವ ವಿಂಧ್ಯಗಿರಿಯ ತಪ್ಪಲಲ್ಲಿ ನೆಲಸಿರುವವನೂ, ದಿತೀ ದೇವಿಯ ಮಂದತನವನ್ನು ಹೋಗಲಾಡಿಸಿದವನೂ, ಗಜಚರ್ಮಧಾರಿಯೂ, ದೇವವಂದ್ಯನೂ, ಮೇಧ್ಯಾತಿಥಿಮುನಿಯನ್ನನುಗ್ರಹಿಸಿದವನೂ, ಆದ ಓ ದೇವನೇ, ನಿನ್ನ ಪೂಜೆಯಿಂದ ನಾನು ದಿವಸವೆಲ್ಲವನ್ನೂ ಕಳೆಯುವಂತೆ ಅನುಗ್ರಹಿಸಿ ಪರಿಪಾಲಿಸು. ॥೧೧॥

ಕುಂದಸದೃಶ ಮಕರಂದನಿಭ ಸುರವೃಂದವಿನುತ ಕುರುವಿಂದಮಣಿಗಣ
ವೃಂದನಿಭಾಂಘ್ರಿಜಮುಂದರವಸದಿಂದುಮುಕುಟಶರದಂಬುಜ ಕೃಶಗರ ।
ನಿಂದನಗಲ ಸುಂದರಗಿರಿತನಯಾಕೃತಿದೇಹವರಾಂಕಗಬಿಂದುಕಲಿತ ಶಿವ
ಲಿಂಗುಗಹನಸುತಸಿಂದುರವರಮುಖಬಂಧುರವರ ಸಿಂಧುನದೀತಲ
ಲಿಂಗನಿವಹ ವರದಿಗ್ವಸ ಪಾಹಿ ಶಂಭೋ ॥೧೨॥

ದಕ್ಷಾಧ್ವರವರಶಿಕ್ಷಪ್ರಭು ವರತ್ರ್ಯಕ್ಷ ಪ್ರಬಲಮಹೋಕ್ಷಸ್ಥಿತ ಸಿತ
ವಕ್ಷಃಸ್ಥಲಕುಲಚಕ್ಷುಶ್ರವಸವರಾಕ್ಷಸ್ರಜ ಹರ ವೀಕ್ಷಾನಿಹತ ಅಧೋ
ಕ್ಷಾತ್ಮಜವರ ಕಕ್ಷಾಶ್ರಯಪುರಪಕ್ಷವಿದಾರಣಲೀಕ್ಷಾಯಿತಸುರ
ಭಿಕ್ಷಾಶನ ಹರ ಪದ್ಮಾಕ್ಷಾರ್ಚನತುಷ್ಟ ಭಗಾಕ್ಷಿಹರಾವ್ಯಯ ಶಂಕರ,
ಮೋಕ್ಷಪ್ರದ ಪರಿಪಾಹಿ ಮಹೇಶ್ವರ ॥೧೩॥

ಅಕ್ಷಯಫಲದ ಶುಭಾಕ್ಷಹರಾಂತಕಕ್ಷತ ತಕ್ಷಕರ ಗರ
ಭಕ್ಷ ಪರಿಸ್ಫುರದಕ್ಷಕ್ಷಿತಿರಥ ಸುರಪಕ್ಷಾವ್ಯಯ ಪುರಹರ-
ಭವಹರ ಹರಿಶರ ಶಿವಶಿವಶಿವ ಶಂಕರ ಕುರು ಕರುಣಾಂ,
ಪರಶಿವಮೌಳೇ ॥೧೪॥

---

ಗಿರಿಮಲ್ಲಿಗೆಯಂತೆ ಬಿಳಿಯದೇಹವುಳ್ಳವನೂ, ದೇವವಂದ್ಯನೂ, ಕುರುವಿಂದ ಮಣಿಯಂತಿರುವ ಕಾಲುಗಳುಳ್ಳವನೂ, ಮಂದರಗಿರಿವಾಸಿಯೂ, ಚಂದ್ರಶೇಖರನೂ, ನೀಲಕಂಠನೂ, ಗಿರಿಜೆಯನ್ನು ಎಡಶರೀರದಲ್ಲಿ ಧರಿಸಿದ ಅರ್ಧನಾರೀಶ್ವರನೂ, ಓಂಕಾರಸ್ವರೂಪನೂ, ಗಜಮುಖನನ್ನೇ ಮಗನಾಗುಳ್ಳವನೂ, ಸಿಂಧುನದಿಯ ತೀರಗಳಲ್ಲಿ ಶಿವಲಿಂಗಗಳ ರೂಪದಿಂದ ನೆಲಸಿರುವವನೂ, ದಿಗಂಬರನೂ ಆದ ಓ ಶಂಕರನೇ, ಪಾಲಿಸು. ॥೧೨॥

ದಕ್ಷಬ್ರಹ್ಮನ ಯಾಗವನ್ನು ಧ್ವಂಸಮಾಡಿದವನೂ, ವೃಷಭವಾಹನನೂ, ನಾಗಭೂಷಣನೂ, ಮನ್ಮಥನನ್ನು ದಹಿಸಿದ ಮುಕ್ಕಣ್ಣನೂ, ತ್ರಿಪುರಾಸುರರನ್ನು ಸಂಹರಿಸಿದವನೂ, ನಾರಾಯಣನಿಂದ ಅರ್ಚಿಸಲ್ಪಡುವವನೂ, ಭಗನೆಂಬ ಸೂರ್ಯನ ಕಣ್ಣುಗಳನ್ನು ಕಿತ್ತವನೂ, ನಾಶರಹಿತನೂ ಆದ ಶಂಕರ ಪಾಲಿಸು. ॥೧೩॥

ಮುಕ್ತಿಯನ್ನು ಕರುಣಿಸುವವನೂ, ಯಮನನ್ನು ಶಿಕ್ಷಿಸಿದವನೂ, ನಾಗ ಕಂಕಣನೂ, ವಿಷಪಾನವನ್ನು ಮಾಡಿದವನೂ, ಭೂಮಿಯೇ ರಥವಾಗುಳ್ಳವನೂ,

ಭಜಾಮ್ಯಗಸುತಾಧವಂ ಪಶುಪತಿಂ ಮಹೋಕ್ಷಧ್ವಜಂ,
ಮಲಕ್ಷಭಸಿತೋಜ್ವಲಂ ಪ್ರಕಟಿದಕ್ಷದಾಹಾಕ್ಷಿಕಂ ।
ಭಗಾಕ್ಷಿಹರಣಂ ಶಿವಂ ಪ್ರಮಥಿತೋರುದಾಕ್ಷಾಧ್ವರ-
ಪ್ರಪಕ್ಷ ಸುರತಾಮುನಿಪ್ರಮಥ ಶಿಕ್ಷಿತಾಧೋಕ್ಷಜಂ ॥೧೫॥

ಶ್ರೀನಾಥಾಕ್ಷಿಸರೋಜರಾಜಿತಪದಾಂಭೋಜೈಕಪೂಜೋತ್ಸವೈಃ
ನಿತ್ಯಂ ಮಾನಸಮೇತದಸ್ತು ಭಗವನ್ ರುದ್ರಾಕ್ಷಮೌಳೀ ಹರ ।
ಭೂಷಾಭೂತಭುಜಂಗಸಂಗತ ಮಹಾಭಸ್ಮಾಂಗನೇತ್ರೋಜ್ವಲ-
ಜ್ಜ್ವಾಲಾದಗ್ಧಮನಂಗದೃಗುಮಾಕಾಂತಾವ ಗಂಗಾಧರ ॥೧೬॥

ಸ್ವಾತ್ಮಾನಂದಪರಾಯಣಾಂಬುಜಭವ ಸ್ತುತ್ಯಾಧುನಾ ಪಾಹಿ ಮಾಂ
ಗಿರಿಜಾಮುಖಲಸನ್ಮುಖ ಷಣ್ಮುಖ ಪಂಚಮುಖೋದ್ಯತ ದುರ್ಮುಖ,
ಮುಖಹರ । ಆಖುವಹೋನ್ಮುಖ ಲೇಖಗಣೋನ್ಮುಖ ಶಂಕರ
ಖಗವಹ-ಪರಿಪೂಜ್ಯ ॥೧೭॥

---

ನಾಶರಹಿತನೂ, ಸಂಸಾರದುಃಖನಾಶಕನೂ, ಹರಿಯೇ ಬಾಣವಾಗುಳ್ಳವನೂ, ಮಂಗಳರೂಪನೂ, ಸುಖಕರನೂ ಆದ ಓ ಶಂಕರ ನನ್ನಲ್ಲಿ ಅನುಗ್ರಹವುಳ್ಳವನಾಗು. ॥೧೪॥

ಗಿರಿಜೆಯ ಪ್ರಿಯಪತಿಯೂ, ವೃಷಭವಾಹನನೂ, ಪವಿತ್ರಭಸ್ಮಧಾರಿಯೂ, ಮನ್ಮಥನನ್ನು ದಹಿಸಿದವನೂ, ದಕ್ಷಯಜ್ಞದಲ್ಲಿ ತನಗೆ ವಿರೋಧಿಗಳಾದ ಭಗದೇವತೆಗಳ ಕಣ್ಣುಗಳನ್ನು ಕಿತ್ತವನೂ, ಹರಿಯೇ ಮೊದಲಾದ ದೇವತೆಗಳ ಸೊಕ್ಕನ್ನಡಗಿಸಿದವನೂ ಆದ ಪರಮೇಶ್ವರನನ್ನು ಭಕ್ತಿಯಿಂದ ಭಜಿಸುವೆನು. ॥೧೫॥

ಶ್ರೀಹರಿಯ ನೇತ್ರಕಮಲದಿಂದ ಅರ್ಚಿಸಲ್ಪಟ್ಟ ಓ ಮಹಾದೇವನೇ, ಯಾವಾಗಲೂ ನನ್ನ ಮನಸ್ಸು ನಿನ್ನ ಮಾನಸಪೂಜೆಯಲ್ಲಾಸಕ್ತವಾಗಿರಲಿ. ನಾಗಭೂಷಣನೂ, ಉರಿಗಣ್ಣಿನ ಜ್ವಾಲೆಯಿಂದ ಮನ್ಮಥನನ್ನು ದಹಿಸಿದವನೂ ಆದ ಉಮಾಪತಿಯೇ, ಗಂಗಾಧರನೇ, ಕರುಣೆಯಿಂದ ನನ್ನನ್ನು ಸಲಹು. ॥೧೬॥

ಆತ್ಮಾನಂದವನ್ನನುಭವಿಸುವವನೂ, ಬ್ರಹ್ಮವಂದಿತನೂ, ಗಿರಿಜೆಯ ಮುಖವನ್ನರಳಿಸುವವನೂ, ಷಣ್ಮುಖನ ಪ್ರಿಯಜನಕನೂ, ಐದುಮುಖಗಳುಳ್ಳವನೂ

ಕೋಟಿಜನ್ಮವಿಪ್ರಕರ್ಮಶುದ್ಧಚಿತ್ತವರ್ತ್ಮನಾಂ,
ಶ್ರೌತಸಿದ್ಧಶುದ್ಧಭಸ್ಮದಿಗ್ಧಸರ್ವವರ್ಷ್ಮಣಾಂ,
ರುದ್ರಭುಕ್ತಮೇಧ್ಯಭುಕ್ತಿದಗ್ಧ ಸರ್ವಪಾಪ್ಮನಾಂ
ರುದ್ರಸೂಕ್ತಿಸೂಕ್ತಭಕ್ತಿಭುಕ್ತಿಮುಕ್ತಿದಾಯಿನಾಂ ॥೧೮॥

ಪುರಹರ ಇಷ್ಟತುಷ್ಟಿಮುಕ್ತಿಲಾಸ್ಯವಾಸಭಕ್ತಿ
ಭಾಸ ಕೈಲಾಸಮೀಶ ಆಶು ಲಭ್ಯತೇ ॥೧೯॥

॥ ಸ್ಕಂದ ಉವಾಚ ॥

ತತ್ಸ್ತುತ್ಯಾ ತೋಷಿತಃ ಶಂಭುಃ ತಮಾಹ ಋಭುಮೀಶ್ವರಃ ।
ಪ್ರಸನ್ನಃ ಕರುಣಾಂಭೋಧಿರಂಭೋಜಸುತನೋದನಃ ॥೨೦॥

ವೇದಾಂತಪಾಠಪಠನೇನ ಹಠಾದಿಯೋಗೈಃ
ಶ್ರೀನೀಲಕಂಠಪದಭಕ್ತಿವಿಕುಂಠಭಾವಾಃ ।
ಯೇ ಕರ್ಮಠಾ ಯತಿವರಾ ಹರಿಸೌರಿಗೇಹೇ
ಸಾಲಾವೃಕೈರ್ವರಕಕಠೋರಕುಠಾರಘಾತ್ಯೈಃ ॥೨೧॥

---

ದುಷ್ಟರನ್ನು ಶಿಕ್ಷಿಸುವವನೂ, ಗಣೇಶಜನಕೂ, ದೇವವಂದ್ಯನೂ, ಹರಿಯಿಂದರ್ಚಿಸಲ್ಪಡುವವನೂ ಆದ ಶಂಕರನೇ, ನನ್ನನ್ನು ಪಾಲಿಸು. ॥೧೭॥

ಕೋಟಿಬ್ರಾಹ್ಮಣಜನ್ಮಗಳ ಪುಣ್ಯಕರ್ಮಗಳಿಂದ ಶುದ್ಧವಾದ ಮನಸ್ಸುಳ್ಳವರೂ, ಮಂತ್ರಪೂತವಾದ ಭಸ್ಮವನ್ನು ಮೈಗೆ ಲೇಪಿಸಿಕೊಳ್ಳುವವರೂ, ರುದ್ರಸೂಕ್ತ ಪಠನದಿಂದ ಪರಿಶುದ್ಧರಾದವರೂ, ರುದ್ರನೈವೇದ್ಯವನ್ನು ಭುಜಿಸಿ ಪವಿತ್ರರೂ ಆದಂತಹ ಮಹಾತ್ಮರಿಗೆ ಮುಕ್ತಿಯ ಕ್ರೀಡಾರಂಗವಾದ ಕೈಲಾಸವು ಬಹುಬೇಗ ಲಭಿಸುವುದು. ॥೧೮-೧೯॥

ಋಭುವಿನ ಈ ಸ್ತುತಿಯಿಂದ ಸಂತುಷ್ಟನಾಗಿ ಶಂಕರನು ಪರಮಾನುಗ್ರಹದಿಂದ ಅವನನ್ನು ನೋಡಿ ಆಗ ಹೀಗೆ ಹೇಳಿದನು. ॥೨೦॥

ಕೇವಲ ವೇದಾಂತವನ್ನು ಪಠಿಸುತ್ತಾ, ಹಠಯೋಗಾದಿಗಳನ್ನು ಅಭ್ಯಾಸ ಮಾಡುತ್ತಾ, ಯಾರು ಶಿವಭಕ್ತಿಯಿಲ್ಲದೆ ಅಂಧಕರಾಗಿರುವರೋ ಅವರು

ಭಿನ್ನೋತ್ತಮಾಂಗಹೃದಯಾಶ್ಚ ಭುಸುಂಡಿಭಿಸ್ತೇ
ಭಿಕ್ಷಾಶನಾ ಜರಠರಾಸಭವತ್ ಭ್ರಮಂತಿ ॥೨೨॥

ವಿದ್ಯುಚ್ಚಂಚಲಜೀವಿತೇಽಪಿ ನ ಮನಾಗುತ್ಪದ್ಯತೇ ಶಾಂಭವೇ
ಭಕ್ತಿರ್ಭೀಮಪದಾಂಬುಜೋತ್ತಮಪದೇ ಭಸ್ಮತ್ರಿಪುಂಡ್ರೇಽಪಿ ಚ ।
ರುದ್ರಾಕ್ಷಾಮಲರುದ್ರಸೂಕ್ತಜಪನೇ ನಿಷ್ಠಾ ಕನಿಷ್ಠಾತ್ಮನಾಂ
ವಿಷ್ಟಾನಿಷ್ಟಕುನಿಷ್ಠಕಷ್ಟಕುಧಿಯಾಂ ದುಷ್ಟಾತ್ಮನಾಂ ಸರ್ವದಾ ॥೨೩॥

ಭ್ರಷ್ಟಾನಾಂ ದುರದೃಷ್ಟತೋ ಜನಿಜರಾನಾಶೇನ ನಿಷ್ಠಾತ್ಮನಾಂ
ಜ್ಯೇಷ್ಠಶ್ರೀಶಿಪಿವಿಷ್ಟಚಾರುಚರಣಾಂಭೋಜಾರ್ಚನಾನಾದರಃ ।
ತೇನಾನಿಷ್ಟಪರಂಪರಾಸಮುದಯೈರಷ್ಟಾಕೃತೇರ್ನ ಸ್ಮೃತಿಃ
ವಿಷ್ಟಾಪೂರಿತದುರ್ಮುಖೇಷು ನರಕೇ ಭ್ರಾಷ್ಟ್ರೇ ಚಿರಂ ಸಂಸ್ಥಿತಿಃ ॥೨೪॥

ಅಜ್ಞಾಯ ತೇಽಪ್ಯಭಿಜ್ಞಾಃ ಸುರವರನಿಕರಂ ಸ್ತೋತ್ರಶಾಸ್ತ್ರಾದಿತುಷ್ಟಂ
ಸತ್ರಾಶಂ ಮಂತ್ರಮಾತ್ರೈರ್ವಿಧಿವಿಹಿತಧಿಯಾ ಸೋಮಭಾಗೈರ್ಯಜಂತಿ ।

---

ಯಮಲೋಕದಲ್ಲಿ ತೋಳಗಳ ಕಡಿತ, ಕೊಡಲಿಯ ಹೊಡೆತಗಳಂತಹ ಮಹಾಶಿಕ್ಷೆಯನ್ನು ಅನುಭವಿಸಿ ಅತಿದರಿದ್ರರಾಗಿ ಹುಟ್ಟಿ ತಿರಿಯುತ್ತಾ ಮುದಿಕತ್ತೆಯಂತೆ ಏನೂ ಪ್ರಯೋಜನವಿಲ್ಲದೇ ಊರೂರು ಅಲೆಯುವರು. ||೨೧-೨೨||

ಮಿಂಚಿನಂತೆ ಜೀವನವು ಅಸ್ಥಿರವೆಂದು ತಿಳಿಯದೇ ಮೂಢರು, ಶಂಕರನಲ್ಲಿ ಭಕ್ತಿಯಿಲ್ಲದೇ, ಭಸ್ಮರುದ್ರಾಕ್ಷಿಧಾರಣೆಯಲ್ಲಿ ಆಸಕ್ತಿಯಿಲ್ಲದೆ, ರುದ್ರಸೂಕ್ತಜಪದಲ್ಲಿ ನಿಷ್ಠೆಯಿಲ್ಲದೆ ಸದಾ ದುಷ್ಟಮಾರ್ಗದಲ್ಲೇ ಆಸಕ್ತಿತೋರಿಸುತ್ತಾನಡೆಯುವರು ||೨೩||

ಅಂತಹ ಭ್ರಷ್ಟರಿಗೆ ಅವರ ದುರದೃಷ್ಟದಿಂದ ಶ್ರೀಪರಮೇಶ್ವರನ ಅರ್ಚನೆಯಲ್ಲಿ ಆದರವುಂಟಾಗಲಾರದು. ಆ ದೇವನ ಸ್ಮರಣೆಯೂ ಅವರಿಗಾಗದು. ಅದರಿಂದ ಅವರು ಮಲಮೂತ್ರಗಳಿಂದ ತುಂಬಿದ ನರಕದಲ್ಲಿ ಬಹುಕಾಲ ಕೊಳೆಯುವರು. ಮತ್ತು ಘೋರವಾದ ನರಕಯಾತನೆಗಳಲ್ಲಿ ಕಾಲಕಳೆಯುವರು. ||೨೪||

ಅವರಲ್ಲಿ ಕೆಲವರು ಪಂಡಿತರೆಂದು ಕೊಂಡವರು ಶಾಸ್ತ್ರಾರ್ಥಗಳನ್ನು ಮಾಡುತ್ತಾ, ಯಾಗವನ್ನು ನಡೆಸಿ, ತುಚ್ಛರಾದ ದೇವತೆಗಳನ್ನು ಹವಿಸ್ಸಿನಿಂದ ಸಂತೋಷಪಡಿಸುವರು. ಮತ್ತೆ ಕೆಲವರು ಇಲ್ಲದ ಪಿತೃಗಳನ್ನು ಕಲ್ಪಿಸಿಕೊಂಡು

ಶ್ರಾದ್ಧೇ ಶ್ರದ್ಧಾಹರಣಭರಣಭ್ರಾಂತರೂಪಾನ್ ಪಿತೄಂಸ್ತೇ
ತತಃ ಶ್ರದ್ಧಾಸಮುದಿತಮನಾಃ ಸ್ವಾಂತರಾ ಶಂಭುಮೀಶಂ ॥೨೫॥

ನಾಭ್ಯರ್ಚಂತಿ ಪ್ರಣತಶರಣಂ ಮೋಕ್ಷದಂ ಮಾಂ ಮಹೇಶಂ ॥೨೬॥

ಆರ್ಯಾಃ ಶರ್ವಸಮರ್ಚನೇನ ಸತತಂ ದೂರ್ವಾದಲೈಃ ಕೋಮಲೈಃ
ಬಿಲ್ವಾಖರ್ವದಲೈಶ್ಚ ಶಂಕರಮಹಾಭಾಗಂ ಹೃದಂತಃಸದಾ ।
ಪರ್ವಸ್ವಪ್ಯವಿಶೇಷಿತೇನ ಮನಸಾ ಗರ್ವಂ ವಿಹಾಯಾದರಾತ್
ದುರ್ಗಾಣ್ಯಾಶು ತರಂತಿ ಶಂಕರಕೃಪಾಪೀಯೂಷಧಾರಾರಸೈಃ ॥೨೭॥

ಶ್ರೀಚಂದ್ರಚೂಡಚರಣಾಂಬುಜಪೂಜನೇತಿ
ಕಾಲಂ ನಯಂತಿ ಪಶುಪಾಶವಿಮುಕ್ತಿಹೇತೋಃ ।
ಭಾವಾಃ ಪರಂ ಭಸಿತಫಾಲಲಸತ್ತ್ರಿಪುಂಡ್ರ
ರುದ್ರಾಕ್ಷಕಂಕಣಲಸತ್ಕರದಂಡಯುಗ್ಮಾಃ ॥೨೮॥

ಪಂಚಾಕ್ಷರಪ್ರಣವಸಕ್ತಧಿಯಾ ವದಂತಿ
ನಾಮಾನಿ ಶಾಂಭವಮನೋಹರದಾನಿ ಶಂಭೋಃ ।
ಮುಕ್ತಿಪ್ರದಾನಿ ಸತತಂ ಶಿವಭಕ್ತವರ್ಯಾಃ
ಯೇ ಬಿಲ್ವಮೂಲಶಿವಲಿಂಗಸಮರ್ಚನೇನ ॥೨೯॥

---

ಅವರಿಗೆ ಶ್ರದ್ಧೆಯನ್ನು ತೋರ್ಪಡಿಸಿ ಶ್ರಾದ್ಧವನ್ನು ಮಾಡಿ ವ್ಯರ್ಥವಾಗಿ ಕಾಲ ಕಳೆಯುವರು. ಆದರೆ ತಮ್ಮ ಹೃದಯದಲ್ಲಿ ಸರ್ವೇಶ್ವರನಾದ ಶಂಕರನನ್ನು ಸದಾ ಅರ್ಚಿಸಲು ತಿಳಿಯಲಾರರು. ॥೨೫-೨೬॥

ಆದರೆ ಸತ್ಪುರುಷರು ಸದಾ ಶಂಕರನನ್ನು ಧ್ಯಾನಿಸುತ್ತಾ ದೂರ್ವೆಬಿಲ್ವಗಳಿಂದ ಅರ್ಚಿಸುತ್ತಾ, ಗರ್ವವನ್ನು ಬಿಟ್ಟು, ಆ ದೇವನನ್ನು ಸ್ತುತಿಸುತ್ತಾ ಆ ಪರಶಿವನ ಕೃಪೆಯಿಂದ ಎಲ್ಲ ಕಷ್ಟಗಳನ್ನೂ ಕಳೆದುಕೊಂದು ಸುಖಿತರಾಗುವರು. ॥೨೭॥

ಆ ಮಹಾತ್ಮರು ಹಣೆಯಲ್ಲಿ ಭಸ್ಮವನ್ನು ಧರಿಸಿ ರುದ್ರಾಕ್ಷಿಮಾಲೆಯನ್ನು ಕರಕಂಠಗಳಲ್ಲಿ ಇಟ್ಟು ಸಂಸಾರಬಂಧನವನ್ನು ಹರಿದೊಗೆಯಲೋಸುಗ ಶ್ರೀಶಂಕರನನ್ನು ಅರ್ಚಿಸುವರು. ॥೨೮॥

ಆ ಶಿವಭಕ್ತರು ಶಿವಪಂಚಾಕ್ಷರ ಮಂತ್ರ ಮತ್ತು ಓಂಕಾರಗಳನ್ನು ಜಪಿ

ಕಾಲಂ ನಯೇದ್ದ್ವಿಮಲಕೋಮಲಬಿಲ್ವಪತ್ರೈಃ
ನೋ ತಸ್ಯ ಕಾಲಜಭಯಂ ಭವತಾಪಪಾಪಂ ।
ಸಂತಾಪಭೂಪಜನಿತಂ ಭಜತಾಂ ಮಹೇಶಂ ॥೩೦॥

ಶಶ್ವದ್ವಿಶ್ವೇಶಪಾದೌ ಯಮಶಮನಿಯಮೈರ್ಭೂತಿರುದ್ರಾಕ್ಷಗಾತ್ರೋ
ವಿಶ್ವತ್ರಸ್ತೋ ಭುಜಂಗಾಂಗದ ವರಗಿರಿಜಾನಾಯಕೇ ಲಬ್ಧಭಕ್ತಿಃ ।
ಮುಗ್ಧೋಽಪ್ಯಧ್ಯಾತ್ಮವಿದ್ಯೋ ಭವತಿ ಭವಹರಸ್ಯಾರ್ಚಯಾ ಪ್ರಾಪ್ತಕಾಮಃ
॥೩೧॥

ಶಬ್ದೈರಬ್ಧಶತೇಽಪಿ ನೈವ ಸಲಭೇತ್ ಜ್ಞಾನಂ ನ ತರ್ಕಭ್ರಮೈಃ
ಮೀಮಾಂಸಾಹ್ವಯತೋ ತಥಾಽದ್ವಯಪದಂ ಕಿಂ ಸಾಂಖ್ಯಸಂಖ್ಯಾ ವದ ।
ಯೋಗಾಯಾಸಪರಂಪರಾದಿವಿಹಿತೈರ್ವೇದಾಂತಕಾಂತಾರಕೇ
ಭ್ರಾಮ್ಯನ್ ಭಕ್ತಿವಿವರ್ಜಿತೇನ ಮನಸಾ ಶಂಭೋಃ ಪದೇ ಮುಕ್ತಯೇ॥೩೨॥

ಕಿಂ ಗಂಗಯಾ ವಾ ಮಕರೇ ಪ್ರಯಾಗ
ಸ್ನಾನೇನ ವಾ ಯೋಗಮುಖಕ್ರಿಯಾದ್ಯೈಃ ।

---

ಸುತ್ತಾ ಶಿವನ ದಿವ್ಯನಾಮಗಳನ್ನು ಕೀರ್ತಿಸುತ್ತಾ, ಬಿಲ್ವದಳಗಳಿಂದ ಶಿವಲಿಂಗವನ್ನು ಅರ್ಚಿಸುತ್ತಾ, ಕಾಲವನ್ನು ಕಳೆಯುವರು. ॥೨೯॥

ಮಹೇಶ್ವರನನ್ನು ಭಕ್ತಿಯಿಂದ ಬಿಲ್ವಪತ್ರೆಗಳಿಂದರ್ಚಿಸುವ ಆ ಮಹಾತ್ಮರಿಗೆ ಯಮನ ಭಯವಿಲ್ಲವು, ಸಂಸಾರದುಃಖಗಳ ಭಯವೂ ಅವರಿಗಿರುವುದಿಲ್ಲ. ॥೩೦॥

ಪರಮೇಶ್ವರನ ಅಡಿದಾವರೆಯನ್ನು ಶಮದಮ-ಮೊದಲಾದ ನಿಯಮಗಳುಳ್ಳವನಾಗಿ ಭಸ್ಮರುದ್ರಾಕ್ಷಿಧಾರಿಯಾಗಿ ಭಕ್ತಿಯಿಂದ ಅರ್ಚಿಸುವವನು ಮೂಢನಾಗಿದ್ದರೂ ಸಹ ಸಂಸಾರದುಃಖನಾಶಕನಾದ ಶಿವನ ಅನುಗ್ರಹದಿಂದ ಮಹಾಜ್ಞಾನಿಯಾಗುವನು. ಮತ್ತು ಆಮೂಲಕ ಮುಕ್ತಿಯನ್ನು ಪಡೆಯುವನು. ॥೩೧॥

ಭಕ್ತಿಯಿಲ್ಲದ ಒಣತರ್ಕಗಳಿಂದ ಪರಶಿವನು ನೂರು ವರ್ಷಗಳಾದರೂ ಲಭಿಸಲಾರನು. ಮೀಮಾಂಸೆಸಾಂಖ್ಯಗಳಿಂದ ಅದ್ವಿತೀಯನಾದ ಆ ದೇವನು ಲಭಿಸಲಾರನು. ಅನುಭವವಿಲ್ಲದೇ ಒಣವೇದಾಂತದಿಂದ ಮುಕ್ತಿಗಾಗಿ ಶ್ರಮಿಸಿದರೂ ಸಿದ್ಧಿಸಲಾರದು. ಯೋಗಾಭ್ಯಾಸದ ಆಯಾಸದಿಂದಲೂ ಪ್ರಯೋಜನವಾಗಲಾರದು. ॥೩೨॥

ಗಂಗೆಯ ಯಾತ್ರೆಯಿಂದೇನು? ಮಕರಮಾಸದಲ್ಲಿ ಪ್ರಯಾಗದಲ್ಲಿ ಸ್ನಾನ ಮಾಡಿದುದರಿಂದ ಪ್ರಯೋಜನವೇನು? ಯೋಗ, ಯಜ್ಞಮೊದಲಾದವುಗಳಿಂದ ಏನು

ಯಾತ್ರಾರ್ಚಿತಂ ಲಿಂಗವರಂ ಶಿವಸ್ಯ
ತತ್ರೈವ ಸರ್ವಾರ್ಥಪರಂಪರಾ ಸ್ಯಾತ್ ॥೩೩॥

ಶ್ರೀಶೈಲೇ ಹಿಮಭೂಧರೇಽರುಣಗಿರೌ ವೃದ್ಧಾದ್ರಿಗೋಪರ್ವತೆ
ಶ್ರೀಮದ್ಧೇಮಸಭಾವಿಹಾರ ಭಗವನ್ ನೃತ್ತಂ ತ್ರಿನೇತ್ರೋ ಗಿರಿಃ ।
ಕೈಲಾಸೋತ್ತರದಕ್ಷಿಣೌ ಚ ಭಗವಾನ್ ಯತ್ರಾರ್ಚ್ಯತೇ ಶಂಕರೋ
ಲಿಂಗೇ ಸನ್ನಿಹಿತೋ ವಸತ್ಯನುದಿನಂ ಶಾಂಗಸ್ಯ ಹೃತ್ಪಂಕಜೇ ॥೩೪॥

ತತ್ರಾವಿಮುಕ್ತಂ ಶಶಿಚೂಡವಾಸವೋಂಕಾರಕಾಲಂಜರರುದ್ರಕೋಟಿಂ ।
ಗಂಗಾಂಬುಧೇಸ್ಸಂಗಮಮಂಬಿಕಾಪತಿಪ್ರಿಯಂ ತು ಗೋಕರ್ಣಕಸಹ್ಯಜಾ
ತಟಿಂ ॥೩೫॥

ಯತ್ರಾಭ್ಯರ್ಣಗತಂ ಮಹೇಶಕರುಣಾಪೂರ್ಣಂ ತು ತೂರ್ಣಂಹೃದಾ
ಲಿಂಗಂ ಪೂಜಿತಮಪ್ಯಪಾಸ್ತದುರಿತಂ ತೀರ್ಥಾನಿ ಗಂಗಾದಯಃ ।
ಪುಣ್ಯಾಶ್ರಮಸಂಘಕಾ ಗಿರಿವರಕ್ಷೇತ್ರಾಣಿ ಶಂಭೋಃ ಪದಂ ॥೩೬॥

---

ಪ್ರಯೋಜನ ? ಎಲ್ಲಿ ಭಕ್ತಿಯಿಂದ ಶಿವಲಿಂಗವನ್ನು ಅರ್ಚಿಸುವನೋ ಅಲ್ಲಿಯೇ ಎಲ್ಲ ಇಷ್ಟಾರ್ಥಗಳು ಸಿದ್ಧಿಸುವುವು. ॥೩೩॥

ಶ್ರೀಶೈಲ, ಹಿಮಾಲಯ, ಅರುಣಗಿರಿ, ವೃದ್ಧಾಚಲ, ವೃಷಭಾಚಲ, ಹೇಮಸಭೆ, ಕೈಲಾಸಗಿರಿ ಮೊದಲಾದ ಯಾವ ಸ್ಥಳದಲ್ಲಾದರೂ ಭಗವಂತನಾದ ಶಂಕರನನ್ನು ಶಿವಲಿಂಗದಲ್ಲಿ ಭಕ್ತಿಯಿಂದ ಅರ್ಚಿಸಿದರೆ ಅಲ್ಲಿಯೇ ಸನ್ನಿಹಿತನಾಗುವನು, ಹೆಚ್ಚೇನು ? ಶಾಂಭವನ ಹೃದಯದಲ್ಲಿ ಶಿವಲಿಂಗದಲ್ಲಿ ಸದಾ ನೆಲಸಿರುವನು. ॥೩೪॥

ಶಿವಭಕ್ತನ ಹೃದಯದಲ್ಲಿಯೇ, ಅವಿಮುಕ್ತತೀರ್ಥ, ಓಂಕಾರಕ್ಷೇತ್ರ, ಕಾಲಂಜರತೀರ್ಥ, ರುದ್ರಕೋಟಿ, ಗಂಗಾಸಾಗರಸಂಗಮ, ಗೋಕರ್ಣ, ಕಾವೇರೀತೀರ ಮೊದಲಾದ ಪುಣ್ಯಕ್ಷೇತ್ರಗಳೆಲ್ಲವೂ ಶಿವಕ್ಷೇತ್ರಗಳೇ. ॥೩೫॥

ಶಿವಲಿಂಗದ ಸಾನ್ನಿಧ್ಯವುಳ್ಳ ಗಂಗಾದಿನದಿಗಳೂ, ಗಿರಿಕ್ಷೇತ್ರಗಳೂ, ತೀರ್ಥಗಳೂ, ಪುಣ್ಯಾಶ್ರಮಗಳೂ ಸಹ ಅತಿಪವಿತ್ರವಾದವುಗಳು. ಅವುಗಳಲ್ಲಿ ಶಿವನ ದಿವ್ಯಲಿಂಗವನ್ನು ಭಕ್ತಿಯಿಂದರ್ಚಿಸಿದರೆ ಸಕಲ ಪಾಪಗಳೂ ನಾಶವಾಗುವುವು. ॥೩೬॥

ಭಕ್ತಿಯುಕ್ತಭಜನೇನ ಮಹೇಶೇ ಶುಕ್ತಿವಜ್ಜಗದಿದಂ ಪರಿಭಾತಿ ।
ಕರ್ಮಾದಿವೃದ್ಧಾವಪಿ ವೇದಮೌಳಿಸಿದ್ಧಾಂತವಾಕ್ಯಕಲನೇಪಿ ಭವಂತಿ
ಮಂದಾಃ ॥೩೭॥

ಕಾಮಾದಿಬದ್ಧಹೃದಯಾಃ ಸಿತಭಸ್ಮಪುಂಡ್ರ
ರುದ್ರಾಕ್ಷಶಂಕರಸಮರ್ಚನತೋ ವಿಹೀನಾಃ ।
ಹೀನಾ ಭವಂತಿ ಸುಬುಧಾಽಪ್ಯಬುಧಾ ಭ್ರಮಂತಿ
ಮತ್ಪ್ರೇಮವಾಸಸದನೇಷು ವಿಹೀನವಾಸಾಃ ॥೩೮॥

ಅಷ್ಟಮ್ಯಾಮಷ್ಟಮೂರ್ತಿಂ ನಿಶಿ ಶಶಿದಿವಸೇ ಸೋಮಚೂಡಂ ತು ಮುಕ್ತ್ಯೈ
ಭೂತಾಯಾಂ ಭೂತನಾಥಂ ಧೃತಭಸಿತತನುರ್ವೀತದೋಷೇ ಪ್ರದೋಷೇ।
ಗವ್ಯೈಃ ಪಂಚಾಮೃತಾದ್ಯೈಃ ಫಲವರರಸಜೈಃ ಬಿಲ್ವಪತ್ರೈಶ್ಚ ಲಿಂಗೇ
ತುಂಗೇ ಶಾಂಗೇಽಷ್ಟಸಂಗೋ ಭಜತಿ ಯುತಹೃದಾ ನಕ್ತಭುಕ್ತ್ಯೈವ ಭಕ್ತಃ॥೩೯

---

ಪರಶಿವನನ್ನು ಭಕ್ತಿಯಿಂದ ಭಜಿಸಿದರೆ, ನಿಜವಾದ ವೇದಾಂತಜ್ಞಾನವು ಉದಯಿಸಿ, ಜಗತ್ತೆಲ್ಲವೂ ಚಿಪ್ಪಿನಲ್ಲಿ ಕಾಣುವ ಬೆಳ್ಳಿಯಂತೆ ಅಸತ್ಯವೆಂದು ಕಾಣುವುದು. ಇದನ್ನು ತಿಳಿಯದೇ ಮೂಢರು ಶಿವನನ್ನು ಭಜಿಸದೆ ವ್ಯರ್ಥವಾಗಿ ಕರ್ಮಗಳನ್ನಾಚರಿಸುವರು. ॥೩೭॥

ರಾಗದ್ವೇಷಾದಿಗಳಿಗೆ ಒಳಗಾಗಿ ಕೆಲವರು ಭಸ್ಮರುದ್ರಾಕ್ಷಿಗಳನ್ನು ಧರಿಸದೇ ಶಂಕರನನ್ನರ್ಚಿಸದೇ ವ್ಯರ್ಥವಾಗಿ ಕಾಲಕಳೆಯುವರು. ಅವರು ಬುದ್ಧಿವಂತರಾದರೂ ಮೂಢರಂತಾಗಿ ದುಃಖದಲ್ಲಿ ತೊಳಲುವರು. ಅವರಿಗೆ ನನ್ನ ದಿವ್ಯಲೋಕವು ಎಂದೂ ಸಿಗಲಾರದು. ॥೩೮॥

ಸೋಮವಾರದಿಂದ ಕೂಡಿದ ಅಷ್ಟಮಿಯಲ್ಲಿ ಅರ್ಧರಾತ್ರಿಯಲ್ಲಿ ಅಷ್ಟಮೂರ್ತಿಯಾದ ಶಿವನನ್ನೂ, ಚತುರ್ದಶೀ, ಅಷ್ಟಮೀತಿಥಿಗಳಲ್ಲಿ ಭೂತನಾಥನನ್ನು ಪ್ರದೋಷಕಾಲದಲ್ಲೂ ಉಪವಾಸವಿದ್ದು ಪಂಚಾಮೃತ, ಹೂವುಹಣ್ಣುಗಳು, ಬಿಲ್ವಪತ್ರಗಳಿಂದ ಭಕ್ತಿಪೂರ್ವಕವಾಗಿ ಅರ್ಚಿಸಿದರೆ ತಪ್ಪದೇ ಮುಕ್ತಿಯು ಲಭಿಸುವುದು. ॥೩೯॥

ಜ್ಞಾನಾನುತ್ಪತ್ತಯೇ ತದ್ಧರಿವಿಧಿಸಮತಾಬುದ್ಧಿರೀಶಾನಮೂರ್ತೌ
ಭಸ್ಮಾಕ್ಷಾಧೃತಿರೀಶಲಿಂಗಭಜನಾಶೂನ್ಯಂ ತು ದುರ್ಮಾನಸಂ ।
ಶಂಭೋಸ್ತೀರ್ಥಮಹತ್ಸು ತೀರ್ಥಕರಕೇ ನಿಂದಾ ವರೇ ಶಾಂಭವೇ
ದ್ರೋಹಸ್ತದರ್ಥೇಷು ಚ ಶ್ರೀಮದ್ರುದ್ರಜಪಾದ್ಯಕರಣಾತ್ ಜ್ಞಾನಂ
ನ ಚೋತ್ಪದ್ಯತೇ ॥೪೦॥

ಈಶೋತ್ಕರ್ಷಧಿಯೈಕಲಿಂಗನಿಯಮಾದಭ್ಯರ್ಚನಂ ಭಸ್ಮಧೃಕ್
ರುದ್ರಾಕ್ಷಾಮಲತಾರಮಂತ್ರಸುಮಹಾಪಂಚಾಕ್ಷರೇ ಜಾಪಿನಾಂ ।
ಈಶಾಸ್ಥಾನನಿವಾಸಶಾಂಭವಕಥಾಭಕ್ತಿಶ್ಚ ಸಂಕೀರ್ತನಂ
ಭಕ್ತಸ್ಯಾರ್ಚನತೋ ಭವೇತ ಸುಮಹಾಜ್ಞಾನಂ ಪರಂ ಮುಕ್ತಿದಂ ॥೪೧॥

ಆದ್ಯಂತಯೋರ್ಯಃ ಪ್ರಣವೇನ ಯುಕ್ತಂ
ಶ್ರೀರುದ್ರಸೂಕ್ತಂ ಪ್ರಜಪೇದಘಘ್ನಂ ।
ತಸ್ಯಾಂಘ್ರಿರೇಣುಂ ಶಿರಸಾ ವಹಂತಿ
ಬ್ರಹ್ಮಾದಯಃ ಸ್ವಾಘನಿವೃತ್ತಿಕಾಮಾಃ ॥೪೨॥

---

ಆದರೆ ಶಿವನು ಹರಿಬ್ರಹ್ಮರಂತೆ ಓರ್ವ ಸಾಮಾನ್ಯದೇವನೆಂದು ತಿಳಿಯುವುದು, ಭಸ್ಮರುದ್ರಾಕ್ಷಿಗಳನ್ನು ಧರಿಸದಿರುವುದು, ಶಿವಲಿಂಗವನ್ನು ಪೂಜಿಸದಿರುವುದು, ಶಿವಕ್ಷೇತ್ರಗಳನ್ನೂ ಶಿವನನ್ನೂ ಶಿವಭಕ್ತರನ್ನೂ ನಿಂದಿಸುವುದು, ರುದ್ರಜಪಾದಿಗಳನ್ನು ಮಾಡದಿರುವುದು, ಇವುಗಳಿಂದ ಮಾನವರಿಗೆ ಮುಕ್ತಿದಾಯಕವಾದ ಜ್ಞಾನವು ಎಂದೂ ಉದಯಿಸದು. ॥೪೦॥

ಶಿವನು ಸರ್ವೋತ್ತಮನೆಂದು ತಿಳಿದು ಅವನ ದಿವ್ಯಲಿಂಗವನ್ನರ್ಚಿಸುವುದು, ಭಸ್ಮರುದ್ರಾಕ್ಷಿಧಾರಣೆ, ಶಿವಪಂಚಾಕ್ಷರಮಂತ್ರಜಪ, ಶಿವಕ್ಷೇತ್ರವಾಸ, ಶಿವಕಥೆಗಳಲ್ಲಿ ಭಕ್ತಿ, ಶಿವಭಕ್ತರಲ್ಲಿ ಗೌರವ ಇವುಳ್ಳವರಿಗೆ ಮುಕ್ತಿದಾಯಕವಾದ ಜ್ಞಾನವು ಜಾಗ್ರತೆಯಾಗಿ ಉದಯಿಸುವುದು. ॥೪೧॥

ಶ್ರೀರುದ್ರಸೂಕ್ತವನ್ನು ಆದಿ ಮತ್ತು ಕೊನೆಗಳಲ್ಲಿ ಓಂಕಾರದೊಡನೆ ಯಾವನು ಪಠಿಸಿ ಜಪಿಸುವನೋ, ಆವನ ಪಾಪವೆಲ್ಲವೂ ನಾಶವಾಗುವುದು, ಹರಿಬ್ರಹ್ಮಾದಿಗಳೂ ಆ ಪುಣ್ಯಾತ್ಮನನ್ನು ತಮ್ಮ ಪಾಪನಾಶಕ್ಕಾಗಿ ಸೇವಿಸುವರು. ॥೪೨॥

ಅಪೂರ್ವಾರ್ಥರ್ವೋಕ್ತಶ್ರುತಿಶಿರಸಿ ವಿಜ್ಞಾನಮನಘಂ
ಮಹಾಖರ್ವಾಜ್ಞಾನಪ್ರಶಮನಕರಂ ಯೋ ವಿರಚಯೇತ್ ।
ಮುನೇ ಹೃತ್ಪೂರ್ವಾಣಾಂ ವಿಶಸನಕರಂ ಸಪ್ತಮನುಭಿಃ
ವ್ರತಂ ಶೀರ್ಷಣ್ಯಂ ಯೋ ವಿರಚಯತಿ ತಸ್ಯೇದಮುದಿತಂ ॥೪೩॥

ಗುರೌ ಯಸ್ಯ ಪ್ರೇಮ ಶ್ರುತಿಶಿರಸಿ ಸೂತ್ರಾರ್ಥಪದಗಂ
ಮಯಿ ಶ್ರದ್ಧಾವೃದ್ಧಾ ಭವತಿ ಭವತಿ ಕಿಲ ತಸ್ಯೈಷ ಸುಲಭಃ ।
ಅನನ್ಯೋ ಮಾರ್ಗೋಽಯಂ ಅಕಥಿತ ಮಿದಂ ತ್ವಯ್ಯಪಿ ಸದಾ
ಯದಾ ಗೋಪ್ಯೋ ಮುಗ್ಧೇ ಸುವಿಹಿತಮುನಿಷ್ವೇವ ದಿಶ ವೈ ॥೪೪॥

॥ ಸ್ಕಂದ ಉವಾಚ ॥

ಇತಿ ಶ್ರುತ್ವಾ ಶಂಭೋಃ ಪ್ರಮುದಿತಮನಾಸ್ತ್ವೇಷ ಸ ಋಭುಃ
ಮುನಿರ್ನತ್ವಾ ದೇಹಂ ನಗಮುಗಮುದೀಶಾಸ್ಯನಿಲಯಂ ।
ಯತೋ ಗಂಗಾ ತುಂಗಾ ಪ್ರಪತತಿ ಹಿಮಾದ್ರೇಃ ಶಿಖರತೋ
ಮುನೀಂದ್ರೇಷ್ವಾಹೇದಂ ತದಪಿ ಶೃಣು ವಿಪ್ರೋತ್ತಮ ಹೃದಾ ॥೪೫॥

---

ಅಥರ್ವವೇದಾಂತದಲ್ಲಿ ಹೇಳಿದ ಅಜ್ಞಾನನಾಶಕವಾದ ಶಿವಸ್ವರೂಪಜ್ಞಾನವೇ ಇಲ್ಲಿ ಹೇಳಿದುದು, ಅದನ್ನುಳ್ಳವರಿಗೆ ಹೃದಯದ ಅಜ್ಞಾನವೆಲ್ಲವೂ ನಾಶವಾಗಿ ಮುಕ್ತಿಯು ಜಾಗ್ರತೆಯಾಗಿ ಲಭಿಸುವುದು. ಮತ್ತು ಸಪ್ತಮಂತ್ರಗಳಿಂದ ಶಿರೋವ್ರತ ವನ್ನು ನಡೆಸುವ ಭಕ್ತಿಯುದಯಿಸುವುದು. ॥೪೩॥

ಎಲೈ ಮುನಿಯೇ, ನಾನು ಹೇಳಿದ ಈ ಮುಕ್ತಿಮಾರ್ಗವು ಗುರುವಿನಲ್ಲಿಯೂ ನನ್ನಲ್ಲಿಯೂ ಭಕ್ತಿಯಿರುವವನಿಗೂ ವೇದಾಂತದಲ್ಲಿ ನಂಬಿಕೆಯಿರುವವನಿಗೂ ಸುಲಭ ವಾದುದು, ಅತ್ಯುತ್ತಮವಾದ ಮಾರ್ಗವಿದು, ಇದನ್ನಾರಿಗೂ ಇದುವರೆಗೆ ನಾನು ಉಪದೇಶಿಸಿಲ್ಲ. ನೀನೂ ಸಹ ಈ ವೇದಾಂತಮಾರ್ಗವನ್ನು ಯೋಗ್ಯರಾದ ಮುನಿಗ ಳಿಗೆ ಮಾತ್ರ ಉಪದೇಶಿಸು, ಅಯೋಗ್ಯರಿಗೆ ಹೇಳಬೇಡ. ॥೪೪॥

ಹೀಗೆ ಪರಮೇಶ್ವರನಿಂದ ವೇದಾಂತತತ್ವವನ್ನು ಕೇಳಿ ಆ ಋಭುಮುನಿಯು ಆ ದೇವನಿಗೆ ನಮಸ್ಕರಿಸಿ, ಶಿವನ ಉತ್ತಮ ಸಾನ್ನಿಧ್ಯವುಳ್ಳಂತಹ, ಗಂಗೆಯ ಹರಿಯು ವಿಕೆಯಿಂದ ಪವಿತ್ರವಾದ ಹಿಮವತ್ಕೇದಾರವೆಂಬ ಪುಣ್ಯಸ್ಥಳಕ್ಕೆ ತೆರಳಿದನು, ಅಲ್ಲಿ ಮುನಿಗಳಿಗೆ ಆ ತತ್ವವನ್ನು ಉಪದೇಶಿಸಿದನು ಅದನ್ನೂ ಹೇಳುವೆನು ಕೇಳು. ॥೪೫॥

ಪತಂತ್ವಶನಯೋ ಮುಹುರ್ಗಿರಿವರೈಸ್ಸಮುದ್ರೋರ್ವರಾ
ಭವತ್ವಥರಸಂಪ್ಲವಾ ಗ್ರಹಗಣಾಃ ಸುರಾ ಯಾಂತ್ವಧಃ ।
ಭವಜ್ಜನಿಮಪೂಜನಾನ್ಮಮ ಮನೋ ನಯಾತ್ವನ್ಯತಃ
ಶಪಾಮಿ ಪ್ರಪದೇ ಪ್ರಭೋಸ್ತವ ಸರೋರುಹಾಭೇ ಹರ ॥೪೬॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ತೃತೀಯೋಧ್ಯಾಯಃ

---

" ಓ ಪರಶಿವನೆ, ಸಿಡಿಲುಬೇಕಾದರೂ ನನ್ನ ಮೇಲೆ ಬೀಳಲಿ, ಬೆಟ್ಟಗಳುರುಳಲಿ, ಸಮುದ್ರವು ಉಕ್ಕಿ ಹರಿಯಲಿ, ಭೂಮಿಯು ಮುಳುಗಲಿ, ಗ್ರಹಗಳೂ ದೇವತೆಗಳೂ ಭೂಮಿಗುರುಳಿ ಬೀಳಲಿ, ಏನಾದರೂ ನಾನು ನನ್ನ ಮನಸ್ಸನ್ನು ನಿನ್ನ ಪೂಜೆಯಿಂದ ಹಿಂತೆಗೆಯಲಾರೆನು '' ಈರೀತಿಯಾಗಿ ನಿನ್ನ ಅಡಿದಾವರೆಗಳಲ್ಲಿ ಆಣೆಯಿಟ್ಟುಕೊಂಡಿರುವೆನು, ಓ ದೇವ ನನ್ನನ್ನು ರಕ್ಷಿಸು. ಎಂದು ಋಭುಮಹರ್ಷಿಯು ಪರಶಿವನನ್ನು ಪ್ರಾರ್ಥಿಸಿದನು. ॥೪೬॥

ಶಿವರಹಸ್ಯದಲ್ಲಿ ಆರನೆಯ ಶಂಕರಾಂಶದಲ್ಲಿ ಮೂರನೆಯ ಅಧ್ಯಾಯವು
ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಚತುರ್ಥೋಽಧ್ಯಾಯಃ

॥ ಸ್ಕಂದ ಉವಾಚ ॥

ಹಿಮಾದ್ರಿಶಿಖರೇ ತತ್ರ ಕೇದಾರೇ ಸಂಸ್ಥಿತಂ ಋಭುಂ ।
ಕೇದಾರೇಶಂ ಪೂಜಯಂತಂ ಶಾಂಭವಂ ಮುನಿಸತ್ತಮಂ ॥೧॥
ಭಸ್ಮರುದ್ರಾಕ್ಷಸಂಪನ್ನಂ ನಿಸ್ಪೃಹಂ ಮುನಯೋಽಬ್ರುವನ್ ॥೨॥

॥ ಮುನಯ ಊಚುಃ ॥

ಪದ್ಮೋದ್ಭವಸುತಶ್ರೇಷ್ಠ ತ್ವಯಾ ಕೈಲಾಸಪರ್ವತೇ ।
ಆರಾಧ್ಯ ದೇವಮೀಶಾನಂ ತಸ್ಮಾತ್ಸೂತ್ರಶ್ರುತೀರಿದಂ ॥೩॥

---

## ನಾಲ್ಕನೆಯ ಅಧ್ಯಾಯ

ಸ್ಕಂದನು ಜೈಗೀಷವ್ಯನೊಡನೆ ಮತ್ತೆ ಹೀಗೆಂದನು—ಎಲೈ ಜೈಗೀಷವ್ಯನೇ, ಹಿಂದೆ ಹೇಳಿದಂತೆಯೇ ಋಭುಮುನಿಯು ಹಿಮವತ್ಕೇದಾರಕ್ಷೇತ್ರದಲ್ಲಿ ವಾಸಿಸುತ್ತಾ ಭಸ್ಮರುದ್ರಾಕ್ಷಿಧಾರಿಯಾಗಿ ಕೇದಾರೇಶ್ವರನನ್ನು ಭಕ್ತಿಯಿಂದ ಅರ್ಚಿಸುತ್ತಿದ್ದನು. ಒಂದು ದಿನ ಮುನಿಗಳೆಲ್ಲರೂ ಬಂದು ಆ ಮುನಿಯನ್ನು ಕುರಿತು ಹೀಗೆ ಪ್ರಶ್ನಿಸಿದರು. ॥೧-೨॥

“ ಬ್ರಹ್ಮದೇವನ ಪುತ್ರನಾದ ಎಲೈ ಋಭುಮುನಿಯೇ, ನೀನು ಕೈಲಾಸಗಿರಿಯಲ್ಲಿ ಪರಮೇಶ್ವರನನ್ನಾರಾಧಿಸಿ ವೇದಾಂತಸೂತ್ರಗಳ ಜ್ಞಾನವನ್ನು ಹೊಂದಿರುವೆ

ಜ್ಞಾನಂ ಲಬ್ಧಂ ಮುನಿಶ್ರೇಷ್ಠ ತನ್ನೋ ಬ್ರೂಹಿ ವಿಮುಕ್ತಯೇ ।
ಯೇ ಸಂಸಾರವಾರಾಶೇಃ ಸಮುತ್ತೀರ್ಣಾ ಭವಾಮಹೇ ॥೪॥

॥ ಸೂತ ಉವಾಚ ॥

ಋಭುರ್ಮುನೀನಾಂ ವಚಸಾ ತುಷ್ಟಃ ಶಿಷ್ಟಾನ್ ಸಮೀಕ್ಷ್ಯತಾನ್ ।
ಅಷ್ಟಮೂರ್ತಿಪದಧ್ಯಾನನಿಷ್ಠಾನ್ ತಾನಭ್ಯುವಾಚ ಹ ॥೫॥

॥ ಋಭುರುವಾಚ ॥

ನ ಗೋಪ್ಯಂ ಭವತಾಮಸ್ತಿ ಶಾಂಭವೇಷು ಮಹಾತ್ಮಸು ।
ತ್ರಿನೇತ್ರಪ್ರೇಮಸದನಾನ್ ಯುಷ್ಮಾನ್ವೀಕ್ಷ್ಯ ವದಾಮಿ ತತ್ ॥೬॥

ಶಾಂಕರಂ ಸೂತ್ರವಿಜ್ಞಾನಂ ಶ್ರುತಿಶೀರ್ಷಮಹೋದಯಂ ।
ಶೃಣುಧ್ವಂ ಬ್ರಹ್ಮವಿಚ್ಛ್ರೇಷ್ಠಾಃ ಶಿವಜ್ಞಾನಮಹೋದಯಂ ॥೭॥

ಯೇನ ತೀರ್ಣಾಸ್ಯ ಸಂಸಾರಾಚ್ಛಿವಭಕ್ತ್ಯಾ ಜಿತೇಂದ್ರಿಯಾಃ ।
ನಮಸ್ಕೃತ್ಯ ಮಹಾದೇವಂ ವಕ್ಷ್ಯೇ ವಿಜ್ಞಾನಮೈಶ್ವರಂ ॥೮॥

---

ಯಷ್ಟೆ, ಆ ತತ್ತ್ವಜ್ಞಾನವನ್ನು ನಮಗೆ ಉಪದೇಶಿಸು. ಅದರಿಂದ ನಾವು ಈ ಸಂಸಾರಸಾಗರವನ್ನು ದಾಟುವವರಾಗುವೆವು.'' ॥೩-೪॥

ಶಿವಭಕ್ತರಾದ, ಸತ್ಪುರುಷರಾದ, ಸುಜ್ಞಾನಿಗಳಾದ ಮುನಿಗಳ ಆ ಮಾತನ್ನು ಕೇಳಿ ಋಭುಮುನಿಯು ಸಂತುಷ್ಟನಾಗಿ ಹೀಗೆ ನುಡಿದನು. ॥೫॥

"ಮುನಿಗಳೇ, ಕೇಳಿರಿ. ಮಹಾತ್ಮರಾಗಿ ಪರಶಿವಭಕ್ತರಾದ ನಿಮಗೆ ತಿಳಿಸದಂತಹ ತತ್ವವು ಯಾವುದೂ ಇಲ್ಲ. ಶಿವನ ಅನುಗ್ರಹಕ್ಕೆ ಪಾತ್ರರಾದ ನಿಮ್ಮನ್ನು ನೋಡಿ ಈಗ ಆ ಶಿವನುಪದೇಶಿದ ವೇದಾಂತಜ್ಞಾನವನ್ನು ಹೇಳುವೆನು. ॥೬॥

ವೇದಾಂತವಾಕ್ಯಗಳಲ್ಲಿ ಹೇಳಿರುವಂತಹ ವೇದಾಂತಸೂತ್ರಾರ್ಥವನ್ನು ಶಿವನಿಂದ ತಿಳಿದಂತೆ ನಾನು ನಿಮಗೆ ಹೇಳುವೆನು. ಮಹಾಬ್ರಹ್ಮವಾದಿಗಳಾದ ನೀವು ಅದನ್ನು ಸಾವಧಾನದಿಂದ ಕೇಳಿರಿ. ॥೭॥

ಆ ಜ್ಞಾನದಿಂದ ಸಂಸಾರಸಾಗರವನ್ನು ಎಲ್ಲರೂ ಸುಲಭವಾಗಿ ದಾಟಬಹುದು. ಅಂತಹ ಶಿವಜ್ಞಾನವನ್ನು ನಿಮಗೆ ಶಿವನಿಗೆ ನಮಸ್ಕರಿಸುತ್ತಾ ಹೇಳುವೆನು. ॥೮॥

॥ ಋಭುರುವಾಚ ॥

ವಿಶ್ವಸ್ಯ ಕಾರಣಮುಮಾಪತಿರೇವ ದೇವೋ
ವಿದ್ಯೋತಕೋ ಜಡಜಗತ್ಪ್ರಮುದೈಕಹೇತುಃ ।
ನ ತಸ್ಯ ಕಾರ್ಯಂ ಕರಣಂ ಮಹೇಶಿತುಃ
ಸ ಏವ ತತ್ಕಾರಣಮೀಶ್ವರೋ ಹರಃ ॥೯॥

ಸೂತಃ ಸಾಯಕಸಂಭವಃ ಸಮುದಿತಾಃ ಸೂತಾನನೇಭ್ಯೋ ಹಯಾಃ
ನೇತ್ರೇ ತೇ ರಥಿನೋ ರಥಾಂಗಯುಗಲೀ ಯುಗ್ಯಾಂತವ್ಯಗ್ಯೋ ರಥೀ ।
ಮೌರ್ವೀ ಮೂರ್ಧ್ನಿ ರಥಃ ಸ್ಥಿತೋ ರಥವಹೋ ಚಾಪಃ ಶರವ್ಯಂ ತ್ರಯಂ
ಯೋದ್ಧುಂ ಕೇಶಚರಾಃ ಸ ಏವ ನಿಖಿಲಸ್ಥಾಣೋರಣುಃ ಪಾತು ವಃ ॥೧೦॥

---

ಪರಮೇಶ್ವರನೇ ಜಗತ್ತಿಗೆ ಕಾರಣನು, ಈ ಜಡವಾದ ಜಗತ್ತು ಅವನಿಂದಲೇ ಪ್ರಕಾಶಿಸುವುದು ಮತ್ತು ನಡೆಯುತ್ತಿರುವುದು. ಆದರಾಶಿವನಿಗೆ ಈ ಜಗತ್ತನ್ನು ಸೃಷ್ಟಿಸಲು ಯಾವ ಸಾಧನವೂ ಬೇಕಿಲ್ಲ, ಅವನಲ್ಲಿ ಮಾಯೆಯಿಂದ ತಾನಾಗಿಯೇ ತೋರುವುದು, ಚಿಪ್ಪಿನಲ್ಲಿ ಬೆಳ್ಳಿಯು ಸುಳ್ಳಾಗಿ ತೋರುವಂತೆ, ಅಂದರೆ ಬೆಳ್ಳಿಯಂತೆ ಕಂಡ ಮುತ್ತಿನಚಿಪ್ಪಿನಲ್ಲಿ ಬೆಳ್ಳಿಯು ವಸ್ತುತಃ ಇಲ್ಲದಿರುವಂತೆ, ಈ ಪ್ರಪಂಚವೂ ಪರಮೇಶ್ವರನ ಹೊರತಾಗಿ ಬೇರೆ ಇಲ್ಲವು. ॥೯॥

ಮಹಾವೀರನಾದ ಮತ್ತು ಮಹಾಮಹಿಮನಾದ ಆ ಪರಶಿವನ ಯುದ್ಧಸಾಮಗ್ರಿಯು ಅದ್ಭುತವಾದುದು. ಅವನ ಸಾರಥಿಯು ಅವನ ಬಾಣದಿಂದ (ಹರಿಯಿಂದ) ಜನಿಸಿದವನು ಅಂದರೆ ಬ್ರಹ್ಮನು. ಕುದುರೆಗಳು ಆ ಸಾರಥಿಯ ಮುಖದಿಂದಲೇ ಹೊರಟವು (ವೇದಗಳು) ಅವನ ಕಣ್ಣುಗಳೇ (ಸೂರ್ಯಚಂದ್ರರೇ) ರಥಚಕ್ರಗಳು, ಧನುಸ್ಸು ರಥ (ಭೂಮಿ) ವನ್ನು ಸ್ಥಿರವಾಗಿರಿಸಿರುವಂತಹುದು (ಮೇರುಗಿರಿ). ಮೌರ್ವಿಯು ಆ ದೇವನ ತಲೆಯ ಮೇಲೆಯೇ ಇರುವಂತಹುದು (ಆದಿಶೇಷ). ರಥದ ದಾರಿಯೇ (ಭೂಮಿಯೇ) ಆ ದೇವನಿಗೆ ರಥ. ರಥಿಕನಾದ ಅವನಾದರೊ ಅವನ ಕುದುರೆ (ವೇದ)ಗಳಿಂದ ಹುಡುಕಲ್ಪಡುವಂತಹ ಮಹಾತ್ಮ. ಗುರಿಯಾದರೂ ಕೇವಲ ಮೂವರು (ತ್ರಿಪುರಾಸುರರು). ಅವರೂ ಸಹ ಯಾವಾಗಲೂ ಆ ದೇವನ ತಲೆ (ಆಕಾಶ)ಯಲ್ಲಿಯೇ ಸಂಚರಿಸುವವರು. ಇಂತಹ ಮಹಾಮಹಿಮನಾದ, ದೊಡ್ಡವುಗಳಲ್ಲಿ ಅತಿದೊಡ್ಡವನಾದ ಮತ್ತು ಸೂಕ್ಷ್ಮವಸ್ತುಗಳಲ್ಲಿ ಅತಿಸೂಕ್ಷ್ಮನಾದ ಶಂಕರನು ನಮ್ಮನ್ನೂ ನಿಮ್ಮನ್ನೂ ರಕ್ಷಿಸಲಿ. ॥೧೦॥

ನಿದಾಘಮಥ ಸಂಬೋಧ್ಯ ತತೋ ಭೃಗುರುವಾಚ ಹ ।
ಅಥಾತ್ಮನಿರ್ಣಯಂ ವಕ್ಷ್ಯೇ ನಾಸ್ತಿ ಕಾಲತ್ರಯೇಷ್ವಪಿ ॥೧೧॥

ಶಿವೋಪದಿಷ್ಟಂ ಸಂಕ್ಷಿಪ್ಯ ಗುಹ್ಯಾದ್ಗುಹ್ಯತರಂ ಸದಾ ।
ಅನಾತ್ಮೇತಿ ಪ್ರಸಂಗಾಚ್ಚ ಅನಾತ್ಮೇತಿ ಮನೋಪಿ ವಾ ॥೧೨॥

ಅನಾತ್ಮೇತಿ ಜಗದ್ವಾಪಿ ನಾಸ್ತ್ಯನಾತ್ಮೇತಿ ನಿಶ್ಚಿನು ।
ಸರ್ವಸಂಕಲ್ಪಶೂನ್ಯತ್ವಾತ್ ಸರ್ವಾಕಾರವಿವರ್ಜನಾತ್ ॥೧೩॥

ಕೇವಲಂ ಬ್ರಹ್ಮಭಾವತ್ವಾತ್ ನಾಸ್ತ್ಯನಾತ್ಮೇತಿ ನಿಶ್ಚಿನು ।
ಚಿತ್ತಾಭಾವೇ ಚಿಂತನೀಯೋ ದೇಹಾಭಾವೇ ಜರಾ ನ ಚ ॥೧೪॥

ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ।
ಪಾದಾಭಾವಾದ್ಗತಿರ್ನಾಸ್ತಿ ಹಸ್ತಾಭಾವಾತ್ಕ್ರಿಯಾ ನ ಚ ॥೧೫॥

ಕೇವಲಂ ಬ್ರಹ್ಮಭಾವತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ।
ಬ್ರಹ್ಮಾಭಾವಾಜ್ಜಗನ್ನಾಸ್ತಿ ತದಭಾವೇ ಹರಿರ್ನಚ ॥೧೬॥

---

ಆಮೇಲೆ ಋಭುವು ನಿದಾಘನೆಂಬ ಮುನಿಯನ್ನು ಕುರಿತು ಹೀಗೆ ಹೇಳಿದನು—ಎಲೈ ಮುನಿಯೇ, ಆತ್ಮನಿರ್ಣಯವನ್ನು ಹೇಳುವೆನು ಕೇಳು. ॥೧೧॥

ಶಿವನು ಉಪದೇಶಿಸಿದುದನ್ನು ಸಂಗ್ರಹಿಸಿ ಹೇಳುವೆನು. ಅದು ಅತಿ ರಹಸ್ಯವಾದುದು, ಜಗತ್ತಿಗಿಂತ ಹೊರತಾಗಿ ಆತ್ಮನಿಲ್ಲವೆನ್ನುವದು ಸರಿಯಲ್ಲ, ಎಲ್ಲರೂ ನಾನು ತಾನು ಎಂದು ಆತ್ಮನನ್ನೇ ಸಂಬೋಧಿಸುವರು, ಆತ್ಮನಿಲ್ಲದಿದ್ದರೆ ಕೇವಲ ಜಡವಾದ ಜಗತ್ತು ಏನನ್ನೂ ಮಾಡಲಾರದು, ಜಡವಾದ ಮನಸ್ಸು ಏನನ್ನೂ ನಿಶ್ಚಯಿಸಲಾರದು, ಆದುದರಿಂದ ಆತ್ಮನಿಲ್ಲವೆನ್ನುವುದು ಸರಿಯಲ್ಲ. ಅದು ಅನರ್ಥವಾದ ನಾಸ್ತಿಕವಾದ. ಆ ಆತ್ಮನು ಸಂಕಲ್ಪಶೂನ್ಯನು, ಆಕಾರವಿಲ್ಲದವನು, ಆಕಾಶದಂತೆ ಸರ್ವವ್ಯಾಪಕನು, ಪರಿಶುದ್ಧನಾದವನು. ಆದುದರಿಂದ ಆತ್ಮ ಆಕಾರವುಳ್ಳ, ಸಂಕಲ್ಪವುಳ್ಳ, ಶರೀರ ಮತ್ತು ಮನಸ್ಸುಗಳಲ್ಲ. ಅವುಗಳಿಗಿಂತ ಬೇರೆಯಾದವನು. ಆತ್ಮನಿಗೆ ಮನಸ್ಸಿಲ್ಲದುದರಿಂದ ಸಂಕಲ್ಪವೂ ಇಲ್ಲ, ಶರೀರವಿಲ್ಲದುದರಿಂದ ಮುಪ್ಪೂ ಇಲ್ಲ, ಕೇವಲ ಅದ್ವಿತೀಯವಾದ ಬ್ರಹ್ಮಸ್ವರೂಪನವನು, ಜ್ಞಾನಸ್ವರೂಪನು, ಜಡನಲ್ಲ, ನಿರಾಕಾರನಾದ ಆತ್ಮನಿಗೆ ಕಾಲುಗಳಿಲ್ಲದುದರಿಂದ ಗಮನವಿಲ್ಲ, ಕೈಗಳಿಲ್ಲದುದರಿಂದ

ಮೃತ್ಯುರ್ನಾಸ್ತಿ ಜರಾಭಾವೇ ಲೋಕವೇದದುರಾಧಿಕಂ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೧೭॥

ಧರ್ಮೋ ನಾಸ್ತಿ ಶ್ರುತಿರ್ನಾಸ್ತಿ ಸತ್ಯಂ ನಾಸ್ತಿ ಭಯಂ ನ ಚ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೧೮॥

ಅಕ್ಷರೋಚ್ಚಾರಣಂ ನಾಸ್ತಿ ಅಕ್ಷರಂ ಸಜಮಂಡಲಂ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೧೯॥

ಗುರುರಿತ್ಯಪಿ ನಾಸ್ತ್ಯೇವ ಶಿಷ್ಯೋ ನಾಸ್ತೀತಿ ತತ್ತ್ವತಃ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೨೦॥

ಏಕಾಭಾವಾದ್ದ್ವಿತೀಯಂ ನ ನ ದ್ವಿತೀಯಾನ್ನಚೈಕತಾ ।
ಸತ್ಯತ್ವಮಸ್ತಿಚೇತ್ಕಿಂಚಿತ್ಸತ್ಯತ್ವಂ ಚ ನ ಸಂಭವೇತ್ ॥೨೧॥

---

ಕರ್ಮವಿಲ್ಲ. ಯಾವ ಕರ್ಮಗಳಿಗೂ ಒಳಗಾಗದ ಸ್ವತಂತ್ರನವನು, ಆತ್ಮನು ಯಾವ ಕರ್ಮವನ್ನೂ ಮಾಡದವನಾದುದರಿಂದ ಸೃಷ್ಟಿಕರ್ತನೂ ಇಲ್ಲ, ಸೃಷ್ಟಿಕರ್ತನಿಲ್ಲದುದರಿಂದ ಸೃಷ್ಟಿಯೂ ನಿಜವಾಗಿಲ್ಲ. ಸೃಷ್ಟಿಯಿಲ್ಲದ ಮೇಲೆ ಅದನ್ನು ಪಾಲಿಸುವನೆನ್ನುವ ಹರಿಯೂ ಇಲ್ಲ. ॥೧೨-೧೩-೧೪-೧೫-೧೬॥

ಶರೀರವಿಲ್ಲದುದರಿಂದ ಆತ್ಮನಿಗೆ ಮುಪ್ಪಿಲ್ಲ, ಜರೆಯಿಲ್ಲದುದರಿಂದ ಸಾವೂ ಇಲ್ಲ. ॥೧೭॥

ಅದ್ವಿತೀಯನಾದ ಆತ್ಮನು ಹೊರತಾಗಿ ಧರ್ಮವೂ ಇಲ್ಲ, ವೇದವೂ ಇಲ್ಲ, ಸತ್ಯವೂ ಇಲ್ಲ, ಯಾವ ಭಯವೂ ಇಲ್ಲ. ಎರಡು ವಸ್ತುಗಳಿದ್ದರೆ ಒಂದರಿಂದೊಂದಕ್ಕೆ ಭಯವಿರುವುದು. ಇರುವುದು ಆತ್ಮವಸ್ತುವೊಂದೇ. ॥೧೮॥

ಮುಖವಿಲ್ಲದುದರಿಂದ ಅಕ್ಷರೋಚ್ಚಾರಣವೇ ಇಲ್ಲ. ಉಚ್ಚಾರಣೆ ಇಲ್ಲದ ಮೇಲೆ ಅಕ್ಷರವೂ ಇಲ್ಲ. ಆತ್ಮನೊಬ್ಬನೇ ಇರುವವನು. ॥೧೯॥

ಅಕ್ಷರವನ್ನು ಹೇಳುವ ಗುರುವೂ ಇಲ್ಲ, ಕಲಿಯುವ ಶಿಷ್ಯನೂ ಇಲ್ಲ. ಎಲ್ಲವೂ ಆತ್ಮವೊಬ್ಬನೇ. ॥೨೦॥

ಒಂದು ಎಂಬ ಏಕತ್ವವಿಲ್ಲದುದರಿಂದ ಒಂದರ ಮುಂದಿನ ಎರಡೂ ಇಲ್ಲ. ಎರಡೆಂಬುದಿಲ್ಲವಾದುದರಿಂದ ಒಂದೆಂಬುದೂ ಇಲ್ಲ. ಸತ್ಯತ್ವವೆಂಬುದೊಂದು

ಅಸತ್ಯತ್ವಂ ಯದಿ ಭವೇತ್ಸತ್ಯತ್ವಂ ನಘಟಿಷ್ಯತಿ ।
ಶುಭಂ ಯದ್ಯಶುಭಂ ವಿದ್ಧಿ ಅಶುಭಂ ಶುಭಮಸ್ತಿ ವಾ ॥೨೨॥

ಭಯಂ ಯದ್ಯಭಯಂ ವಿದ್ಧಿ ಅಭಯಾದ್ಭಯಮಾಪತೇತ್ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೨೩॥

ಬಂಧತ್ವಮಸ್ತಿಚೇನ್ಮೋಕ್ಷೋ ಬಂಧಾಭಾವೇ ನ ಮೋಕ್ಷತಾ ।
ಮರಣಂ ಯದಿ ಚೇಜ್ಜನ್ಮ ಜನ್ಮಾಭಾವೇ ಮೃತಿರ್ನಹಿ ॥೨೪॥

ತ್ವಮಿತ್ಯಪಿ ಭವೇಚ್ಚಾಹಂ ತ್ವಂ ನೋ ಚೇದಹಮೇವ ನ ।
ಇದಂ ಯದಿ ತದೇವಾಪಿ ತದಭಾವೇ ಇದಂ ಚ ನ ॥೨೫॥

---

ಬೇರೆಯಾಗಿರುವುದಾದರೆ ಆತ್ಮನು ಸತ್ಯನಾಗಲಾರನು. ಆದುದರಿಂದ ಸತ್ಯತ್ವವು ಇಲ್ಲ. ಸತ್ಯಸ್ವರೂಪನವನು. ॥೨೧॥

ಸತ್ಯತ್ವವಿಲ್ಲದಿದ್ದರೆ ಅಸತ್ಯನೆಂದಾಗಲಿ ಎಂದರೆ, ಆಗ ಆತ್ಮನು ಸತ್ಯನಾಗಲಾರನು. ಶುಭನು ಆತ್ಮನೆನ್ನಬೇಕಾದರೆ ಅಶುಭವೊಂದಿರಬೇಕಾಗುವುದು. ಇವನು ಶುಭನು. ಅಶುಭನಲ್ಲ ಎನ್ನಬಹುದು. ಆಗ ಅದ್ವಿತೀಯನಾಗಲಾರ. ಆದುದರಿಂದ ಆತ್ಮನು ಶುಭನೂ ಅಲ್ಲ ಅಶುಭನೂ ಅಲ್ಲ. ॥೨೨॥

ಭಯವಿದ್ದರೆ ಅಭಯವೆನ್ನಬಹುದು. ಹೀಗಾಗಿ ಭಯ ಅಭಯಗಳೆಂಬೆರಡು ವಸ್ತುಗಳಾಗುವುವು. ಆದುದರಿಂದ ಆತ್ಮನು ಹೊರತಾಗಿ ಭಯವೂ ಇಲ್ಲ ಅಭಯವೂ ಇಲ್ಲ. ಆತ್ಮವಸ್ತುವೊಂದೇ ಇರತಕ್ಕುದು. ॥೨೩॥

ಬಂಧನವಿದ್ದರೆ ಮೋಕ್ಷ. ಬಂಧನಕ್ಕೆ ಸಿಲುಕಿದ್ದರಲ್ಲವೇ ಬಿಡುಗಡೆಯನ್ನಪೇಕ್ಷಿಸುವುದು ? ಮರಣವಾದರಲ್ಲವೇ ಜನ್ಮ. ಆದುದರಿಂದ ಬಂಧವೂ ಇಲ್ಲ ಮೋಕ್ಷವೂ ಇಲ್ಲ, ಜನನವೂ ಇಲ್ಲ ಮರಣವೂ ಇಲ್ಲ. ॥೨೪॥

ನೀನು ಎನ್ನುವುದಾದರೆ ನಾನು ಎನ್ನುವುದಿರಲೇಬೇಕು. ಇದು ಎನ್ನಬೇಕಾದರೆ ಅದು ಎನ್ನುವುದಿರಲೇಬೇಕು. ಆದುದರಿಂದ ಆತ್ಮನಲ್ಲಿ ನೀನು-ನಾನು, ಅದು-ಇದು ಎಂಬ ಭಾವವೇ ಇಲ್ಲ. ವಸ್ತುವೂ ಇಲ್ಲ. ॥೨೫॥

ಅಸ್ತಿಚೇದಿತಿ ತನ್ನಾಸ್ತಿ ನಾಸ್ತಿ ಚೇದಸ್ತಿ ಕಿಂಚನ ।
ಕಾರ್ಯಂ ಚೇತ್ಕಾರಣಂ ಕಿಂಚಿತ್ಕಾರ್ಯಾಭಾವೇ ನ ಕಾರಣಂ ॥೨೬॥

ಯದಿ ದ್ವೈತಂ ತದಾಽದ್ವೈತಂ ದ್ವೈತಾಭಾವೇಽದ್ವಯಂ ನಚ ।
ದೃಶ್ಯಂ ಯದಿ ದೃಗಪ್ಯಸ್ತಿ ದೃಶ್ಯಾಭಾವೇ ದೃಗೇವ ನ ॥೨೭॥

ಅಂತರ್ಯದಿ ಬಹಿಸ್ಸತ್ಯಂ ಅಂತಾಭಾವೇ ಬಹಿರ್ನ ಚ ।
ಪೂರ್ಣತ್ವಮಸ್ತಿಚೇತ್ಕಿಂಚಿದಪೂರ್ಣತ್ವಂ ಪ್ರಸಜ್ಯತೇ ॥೨೮॥

ಕಿಂಚಿದಸ್ತೀತಿ ಚೇಚ್ಚಿತ್ತೇ ಸರ್ವಂ ಭವತಿ ಶೀಘ್ರತಃ ।
ಯತ್ಕಿಂಚಿತ್ಕಿಮಪಿ ಕ್ವಾಪಿ ನಾಸ್ತಿಚೇನ್ನ ಪ್ರಸಜ್ಜ್ಯತಿ ॥೨೯॥

ತಸ್ಮಾದೇತತ್ಕ್ವಚಿನ್ನಾಸ್ತಿ ತ್ವನ್ನಾಹಂ ವಾ ಇಮೇ ಇದಂ ।
ಕೇವಲಂ ಬ್ರಹ್ಮಭಾವತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೩೦॥

---

ಇದಿಲ್ಲ ಎನ್ನುವುದಾದರೆ ಇದೇ ಎನ್ನುವುದೊಂದಾಗಬೇಕು. ಇದೆ ಎನ್ನುವುದಾದರೆ ಇಲ್ಲ ಅಂತಲೂ ಅನ್ನಬಹುದು. ಆದುದರಿಂದ ಆತ್ಮನಲ್ಲಿ ಇಲ್ಲ ಎನ್ನುವ ವ್ಯವಹಾರವೂ ಇಲ್ಲ. ಇದೆ ಎನ್ನುವ ವ್ಯವಹಾರವೂ ಇಲ್ಲ. ಕಾರ್ಯವಿದೆ ಎನ್ನಬೇಕಾದರೆ ಅದಕ್ಕೊಂದು ಕಾರಣವು ಬೇಕು. ಆದುದರಿಂದ ಇಲ್ಲಿ ಕಾರ್ಯವೂ ಇಲ್ಲ, ಕಾರಣವೂ ಇಲ್ಲ. ॥೨೬॥

ಭೇದವಿದ್ದರೆ ಅಭೇದ, ಭೇದವಿಲ್ಲದಿದ್ದರೆ ಅಭೇದವೂ ಇಲ್ಲ. ದೃಶ್ಯವಿದ್ದರೆ ದೃಕ್ಕೂ (ಕಣ್ಣು) ಇರಬೇಕು. ದೃಶ್ಯನಿಲ್ಲದುದರಿಂದ ದೃಕ್ಕೂ ಇಲ್ಲ. ॥೨೭॥

ಒಳಗಿದ್ದರೆ ಹೊರಗು, ಒಳಗಿಲ್ಲದಮೇಲೆ ಹೊರಗೂ ಇಲ್ಲ, ಪೂರ್ಣತೆಯಿದ್ದರೆ ಅಪೂರ್ಣತೆಯೂ ಇರಬೇಕು. ಆದುದರಿಂದ ಪೂರ್ಣತೆಯೂ ಇಲ್ಲ ಅಪೂರ್ಣತೆಯೂ ಇಲ್ಲ. ॥೨೮॥

ಏನಾದರೂ ಒಂದು ಇದೆ ಎಂದರಾಯಿತು. ಮನಸ್ಸಿನಲ್ಲಿ ಅದರಿಂದ ಎಲ್ಲ ಭಾವಗಳೂ ಉಂಟಾಗುವುವು. ಯಾವುದೊಂದೂ ಎಲ್ಲಿಯೂ ಇಲ್ಲವೆಂದಾದರೆ ಏನೊಂದೂ ಇಲ್ಲ. ॥೨೯॥

ಆದುದರಿಂದ ನಾನು, ನೀನು, ಇದು, ಅದು,—ಎಂದು ಮೊದಲಾದ ಯಾವ ಭಾವವೂ ಇಲ್ಲ. ಕೇವಲ ಬ್ರಹ್ಮರೂಪವಾದ ಆತ್ಮವೊಂದೇ ವಿನಾ ಬೇರೇನೂ ಇಲ್ಲ. ॥೩೦॥

ನಾಸ್ತಿ ದೃಷ್ಟಾಂತಿಕಂ ಸತ್ಯೇ ನಾಸ್ತಿ ದಾರ್ಷ್ಟಾಂತಿಕಂ ಕ್ವಚಿತ್ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತ್ಯನಾತ್ಮೇತಿ ನಿಶ್ಚಿನು ॥೩೧॥

ಪರಂ ಬ್ರಹ್ಮಾಹಮಸ್ತೀತಿ ಸ್ಮರಣಸ್ಯ ಮನೋ ನಹಿ ।
ಬ್ರಹ್ಮಮಾತ್ರಂ ಜಗದಿದಂ ಬ್ರಹ್ಮಮಾತ್ರತ್ವಮಾಪ್ಯ ಹಿ ॥೩೨॥

ಚಿನ್ಮಾತ್ರಂ ಕೇವಲಂ ಚಾಹಂ ನಾಸ್ತಿ ನಾತ್ಮೇತಿ ನಿಶ್ಚಿನು ।
ಇತ್ಯಾತ್ಮನಿರ್ಣಯಂ ಪ್ರೋಕ್ತಂ ಭವತೇ ಸರ್ವಸಂಗ್ರಹಂ ॥೩೩॥

ಸಕೃಚ್ಛ್ರವಣ ಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೩೪॥

॥ ಋಭುರುವಾಚ ॥

ನಿದಾಘ ಕೋ ಭವಾನ್ ಕೋನು ವದ ಮೇ ವದತಾಂ ವದ ।
ಯಚ್ಛ್ರುತ್ವಾ ತತ್ಕ್ಷಣಾನ್ಮುಚ್ಯೇನ್ಮಹಾಸಂಸಾರಸಾಗರಾತ್ ॥೩೫॥

---

ಸತ್ಯವಸ್ತುವಾದ ಆತ್ಮನ ವಿಷಯದಲ್ಲಿ ದೃಷ್ಟಾಂತವೂ ಇಲ್ಲ. ಅವನು ದಾರ್ಷ್ಟಾಂತಿಕನಲ್ಲ (ದೃಷ್ಟಾಂತಿಸಿಕೊಳ್ಳುವ ವಸ್ತುವೂ ಇಲ್ಲ.) ಆತ್ಮವೊಂದೇ ಇರುವುದು. ॥೩೧॥

ನಾನು ಪರಬ್ರಹ್ಮವೆಂದು ಮನಸ್ಸು ತಿಳಿಯಲಾರದು, ಪರಮಾತ್ಮನು ಹೊರತಾಗಿ ಬೇರೆ ಮನಸ್ಸಿಲ್ಲವು. ॥೩೨॥

ಆದುದರಿಂದ ಎಲೈ ಮುನಿಯೇ, ಹೀಗೆ ಜ್ಞಾನಸ್ವರೂಪವಾದ ಆತ್ಮನೋರ್ವನೇ ಸತ್ಯಸ್ವರೂಪನು. ಶಿವನುಪದೇಶಿಸಿದ ಈ ಆತ್ಮನಿರ್ಣಯವನ್ನು ಸಂಗ್ರಹವಾಗಿ ನಿನಗೆ ಈಗ ಹೇಳಿರುವೆನು. ॥೩೩॥

ಈ ಜ್ಞಾನವನ್ನು ಒಂದು ಬಾರಿ ಕೇಳಿ ಅನುಷ್ಠಿಸಿದರೆ ಅವನು ಬ್ರಹ್ಮನೇ ಆಗುವನು. ॥೩೪॥

ಎಲೈ ನಿದಾಘ, ಈಗ ಹೇಳು ನೀನಾರು ? ನಿನ್ನ ಸ್ವರೂಪವೇನು ? ಯಾವುದನ್ನು ಕೇಳಿ ಮಾನವನು ಸಂಸಾರಬಂಧನದಿಂದ ಮುಕ್ತಿಯನ್ನು ಹೊಂದುವನು ? ಎಂದು ಋಭುಮುನಿಯು ಪ್ರಶ್ನಿಸಲು ಆಗ ನಿದಾಘನಿಂತೆಂದನು. ॥೩೫॥

ಅಹಮೇವ ಪರಂ ಬ್ರಹ್ಮ ಅಹಮೇವ ಪರಂ ಸುಖಂ ।
ಅಹಮೇವಾಹಮೇವಾಹಮಹಂ ಬ್ರಹ್ಮಾಸ್ಮಿ ಕೇವಲಂ ॥೩೬॥

ಅಹಂ ಚೈತನ್ಯಮೇವಾಸ್ಮಿ ದಿವ್ಯಜ್ಞಾನಾತ್ಮಕೋಹ್ಯಹಂ ।
ಸರ್ವಾಕ್ಷರವಿಹೀನೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೭॥

ಅಹಮರ್ಥವಿಹೀನೋಽಸ್ಮಿ ಇದಮರ್ಥವಿವರ್ಜಿತಃ ।
ಸರ್ವಾನರ್ಥವಿಮುಕ್ತೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೮॥

ನಿತ್ಯಶುದ್ಧೋಽಸ್ಮಿ ನಿತ್ಯೋಽಸ್ಮಿ ಬುದ್ಧೋಽಸ್ಮ್ಯತ್ಯಂತನಿರ್ಮಲಃ ।
ನಿತ್ಯಾನಂದಸ್ವರೂಪೋಽಸ್ಮಿ ಆದ್ಯಹೀನೋಽಸ್ಮ್ಯನಂತಕಃ ॥೩೯॥

ಅಪ್ರಾಕೃತಸ್ವರೂಪೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ।
ಸ್ವಸ್ವಸಂಕಲ್ಪಹೀನೋಽಹಂ ಸರ್ವಾವಿದ್ಯಾವಿವರ್ಜಿತಃ ॥೪೦॥

---

ನಾನೇ ಪರಬ್ರಹ್ಮನು, ನಾನು ಸುಖಸ್ವರೂಪನು, ನಾನು ನಾನೇ, ನಾನು ನಿರಾಕಾರನಾದ ಯಾವ ವಿಕಾರವೂ ಇಲ್ಲದ ಶುದ್ಧಬ್ರಹ್ಮನಾಗಿರುವೆನು. ॥೩೬॥

ನಾನು ಚೈತನ್ಯರೂಪವಾದ ಜ್ಞಾನಸ್ವರೂಪವಾದ ಯಾವ ಅಕ್ಷರಗಳಿಗೂ ನಿಲುಕದ ಸ್ವಯಂಪ್ರಕಾಶಮಾನವಾದ ಶುದ್ಧಬ್ರಹ್ಮನಾಗಿರುವೆನು. ॥೩೭॥

ನನ್ನಲ್ಲಿ ನಾನು ಎಂಬ ಭಾವವೂ, ಇದು ಎಂಬ ಭಾವವೂ ಇಲ್ಲ. ಆದುದರಿಂದ ಯಾವ ಅನರ್ಥಗಳೂ ಇಲ್ಲದ ಅದ್ವಿತೀಯ ಶುದ್ಧಬ್ರಹ್ಮನು ನಾನು. ॥೩೮॥

ನಾನು ಯಾವ ಪಾಪಗಳೂ ಇಲ್ಲದೆ ಶುದ್ಧನಾಗಿರುವೆನು, ನಿತ್ಯಸ್ವರೂಪನು, ಜ್ಞಾನಸ್ವರೂಪನು, ಆನಂದಸ್ವರೂಪನು, ಜನನಮರಣಗಳಿಲ್ಲದ ಶುದ್ಧಬ್ರಹ್ಮನು ನಾನು. ॥೩೯॥

ಪಂಚಭೂತಗಳಿಂದಾಗದ ಜಡವಲ್ಲದ ಚೇತನಸ್ವರೂಪನು ನಾನು. ನಿತ್ಯತೃಪ್ತನಾದ ನನಗೆ ಯಾವ ಕಾಮನೆಗಳೂ ಸಂಕಲ್ಪಗಳೂ ಇಲ್ಲವು, ಭ್ರಾಂತಿಯಿಲ್ಲವು. ಎಲ್ಲವೂ ನಾನೇ, ಅದೂ ನಾನೇ, ಇದೂ ನಾನೇ, ಅಂತೂ ಶುದ್ಧಬ್ರಹ್ಮನು ನಾನು. ॥೪೦॥

ಸರ್ವನಾಮಾದಿಹೀನೋಽಹಂ ಸರ್ವರೂಪವಿವರ್ಜಿತಃ ।
ಸರ್ವಸಂಗವಿಹೀನೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೧॥

ಸರ್ವವಾಚಾಂ ವಿಧಿಶ್ಚಾಸ್ಮಿ ಸರ್ವನಾಮಾವಧಿಸ್ಸುಖಂ ।
ಸರ್ವಕಾಲಾವಧಿಶ್ಚಾಹಮಿತಿಬ್ರಹ್ಮಾಸ್ಮಿ ಕೇವಲಂ ॥೪೨॥

ಸರ್ವರೂಪಾವಧಿಶ್ಚಾಹಂ ಸರ್ವವೇಧಾವಧಿಃ ಪರಃ ।
ಸರ್ವಕಲ್ಪಾವಧಿಶ್ಚಾಹಂ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೩॥

ಅಹಮೇವ ಸುಖಂ ನಾನ್ಯದಹಮೇವ ಚಿದವ್ಯಯಃ ।
ಅಹಮೇವಾಸ್ಮಿ ಸರ್ವತ್ರ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೪॥

ಕೇವಲಂ ಬ್ರಹ್ಮಮಾತ್ರಾತ್ಮಾ ಕೇವಲಂ ಶುದ್ಧಚಿದ್ಘನಃ ।
ಕೇವಲಾಖಂಡಸಾರೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೫॥

---

ನನಗೆ ಯಾವ ರೂಪವೂ ಇಲ್ಲ, ಯಾವ ಹೆಸರುಗಳೂ ಇಲ್ಲ, ಯಾವ ಸಂಬಂಧವೂ ಇಲ್ಲ, ಶುದ್ಧಬ್ರಹ್ಮಸ್ವರೂಪನು ನಾನು. ॥೪೧॥

ಎಲ್ಲ ವಾಕ್ಯಗಳಿಗೂ, ಹೆಸರುಗಳಿಗೂ, ಕಾಲಕ್ಕೂ ನಾನು ಕೊನೆಯಾಗಿರುವೆನು, ಗಡಿಯಾಗಿರುವೆನು, ನನ್ನ ಮುಂದೆ ಆ ಮಾತು ಹೆಸರು ಕಾಲಗಳು ಪಸರಿಸಲಾರವು, ನಾನು ಶುದ್ಧಬ್ರಹ್ಮನು. ॥೪೨॥

ಎಲ್ಲ ರೂಪಗಳಿಗೂ, ಎಲ್ಲ ವೇದಗಳಿಗೂ, ಎಲ್ಲ ಕಲ್ಪಗಳಿಗೂ ನಾನು ಅವಧಿಯಾಗಿರುವೆನು. ರೂಪವೇದಕಲ್ಪಗಳಿಗೆ ನಿಲುಕದ ಶುದ್ಧಬ್ರಹ್ಮನು ನಾನು. ॥೪೩॥

ನಾನೇ ಸುಖವು, ನಾನೇ ಜ್ಞಾನವು, ನಾನೇ ಆನಂದವು, ನಾನೇ ಎಲ್ಲಡೆಯಲ್ಲೂ ಇರುವೆನು. ಸುಖಸ್ವರೂಪನಾದ, ಜ್ಞಾನಸ್ವರೂಪನಾದ, ಆನಂದಸ್ವರೂಪನಾದ, ನಾಶರಹಿತನಾದ, ಸರ್ವವ್ಯಾಪಕನಾದ ಶುದ್ಧಬ್ರಹ್ಮನು ನಾನು. ॥೪೪॥

ಕೇವಲ ಆತ್ಮಸ್ವರೂಪನೂ, ನಿರ್ಮಲಜ್ಞಾನಮಯನೂ, ಪೂರ್ಣಸ್ವರೂಪನೂ ಆದ ಶುದ್ಧಬ್ರಹ್ಮನು ನಾನು. ॥೪೫॥

ಕೇವಲಂ ಜ್ಞಾನರೂಪೋಽಸ್ಮಿ ಕೇವಲಾಕಾರರೂಪವಾನ್ ।
ಕೇವಲಾತ್ಯಂತಸಾರೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೬॥

ಅರ್ಥಾನರ್ಥವಿಹೀನೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೭॥

ಅಪ್ರಮೇಯಸ್ವರೂಪೋಽಸ್ಮಿ ಅಪ್ರತರ್ಕ್ಯಸ್ವರೂಪವಾನ್ ।
ಅಪ್ರಗೃಹ್ಯಸ್ವರೂಪೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೮॥

ಅರಸಸ್ಯುತರೂಪೋಽಸ್ಮಿ ಅಸುತಾಪವಿವರ್ಜಿತಃ ।
ಅನುಸ್ಯೂತಪ್ರಕಾಶ್ಯೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೪೯॥

ಸರ್ವಕರ್ಮವಿಹೀನೋ ಯೋ ಸರ್ವಭೇದವಿವರ್ಜಿತಃ ।
ಸರ್ವಸಂದೇಹಹೀನೋಽಸ್ಮಿ ಕೇಶವತ್ವಾದಿ ನ ಕ್ವಚಿತ್ ॥೫೦॥

ಶಂಕರಾದಿವಿಹೀನೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ।
ತೂಷ್ಣೀಮೇವಾವಭಾಸೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೫೧॥

---

ಆಕಾರರೂಪಗಳಿಲ್ಲದ, ಜ್ಞಾನಸ್ವರೂಪನಾದ, ಎಲ್ಲಕ್ಕೂ ಕೊನೆಯಾದ ಶುದ್ಧ ಬ್ರಹ್ಮನು ನಾನು. ॥೪೬॥

ಶುದ್ಧವಾದ ನನ್ನ ಸ್ವರೂಪವುಳ್ಳವನು ನಾನು, ಆ ಸ್ವರೂಪವೂ ನಾನೇ, ನನ್ನ ಹೊರತು ನನ್ನ ಸ್ವರೂಪವು ಬೇರೆಯಾಗಿಲ್ಲ, ಅರ್ಥವೂ ಇಲ್ಲದ ಅನರ್ಥವೂ ಇಲ್ಲದ ಶುದ್ಧಬ್ರಹ್ಮನು ನಾನು. ॥೪೭॥

ನನ್ನ ಸ್ವರೂಪವು ಇಂದ್ರಿಯಗಳಿಗೆ ಕಾಣಿಸದು, ತರ್ಕಗಳಿಂದ ಸಿದ್ಧವಾಗದು, ಕಣ್ಣಿನಿಂದ ನೋಡಲಾಗದು, ಅಂತಹ ವ್ಯಾಪಕವಾದ ಸ್ವರೂಪವುಳ್ಳ ಶುದ್ಧಬ್ರಹ್ಮನು ನಾನು. ॥೪೮॥

ಆನಂದಸ್ವರೂಪನು ನಾನು, ದುಃಖಸಂಬಂಧವೇ ನನಗಿಲ್ಲವು, ಅನಂತವಾದ ಜ್ಞಾನಜ್ಯೋತಿಪ್ರಕಾಶನು ನಾನು, ಪ್ರಕಾಶರೂಪನಾದ ನಾನು ನಾನೇ ನಾನಾಗಿ ಸದಾ ಪ್ರಕಾಶಿಸುವೆನು. ॥೪೯॥

ನನಗೆ ಯಾವ ಕರ್ಮಪ್ರಯುಕ್ತವಾದ ಯಾವ ಭೇದವೂ ಇಲ್ಲ, ಭೇದವಿಲ್ಲದುದರಿಂದ ಸಂದೇಹವೂ ಇಲ್ಲ, ಕೇಶವ, ಶಂಕರ, ಬ್ರಹ್ಮ—ಮೊದಲಾದ ಯಾವ ಭೇದವೂ ನನಗಿಲ್ಲ, ಎಲ್ಲಕ್ಕೂ ಸಾಕ್ಷಿಪುರುಷನು ನಾನು. ॥೫೦-೫೧॥

ಕಿಂಚಿನ್ನಾಸ್ತಿ ಪರೋ ನಾಸ್ತಿ ಕಿಂಚಿದಸ್ತಿ ಪರೋಽಸ್ತಿ ಚ ।
ನ ಶರೀರಪ್ರಕಾಶೋಽಸ್ಮಿ ಜಗದ್ಭಾಸಕರೋ ನ ಚ ॥೫೨॥

ಚಿದ್ಘನೋಽಸ್ಮಿ ಚಿದಂಶೋಽಸ್ಮಿ ಸಸ್ವರೂಪೋಽಸ್ಮಿ ಸರ್ವದಾ ।
ಮುದಾ ಮುದಿತರೂಪೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೫೩॥

ನ ಬಾಲೋಽಸ್ಮಿ ನ ವೃದ್ಧೋಽಸ್ಮಿ ನಯುವಾಸ್ಮಿ ಪರಾತ್ಪರಃ ।
ನ ಚ ನಾನಾಸ್ವರೂಪೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ॥೫೪॥

॥ ಸೂತ ಉವಾಚ ॥

ಇದಂ ಸ್ವಾನುಭವಂ ಪ್ರೋಕ್ತಂ ಸರ್ವೋಪನಿಷದಾಂ ರಸಂ ।
ಕೋವಾ ಶೃಣೋತೀದಂ ಯೋವಾ ಬ್ರಹ್ಮೈವ ಭವತಿ ಸ್ವಯಂ॥೫೫॥

---

ನನಗಿಂತ ಭಿನ್ನವಾಗಿ ಬೇರೊಂದು ಚಿಕ್ಕವಸ್ತುವೂ ಇಲ್ಲ, ದೊಡ್ಡ ವಸ್ತುವೂ ಇಲ್ಲ. "ಏನಾದರೂ ಇದೆ" ಎನ್ನುವುದಾದರೆ ಆ ವಸ್ತುವು ನಾನೇ. "ದೊಡ್ಡ ವಸ್ತುವು ಇದೆ" ಎನ್ನುವುದಾದರೆ ಅದೇ ನಾನು. ಶರೀರದಿಂದ ಪ್ರಕಾಶಿಸುವವನು ನಾನಲ್ಲ, ಜಗತ್ತನ್ನು ಪ್ರಕಾಶಿಸುವವನು ನಾನಲ್ಲ, ಅಂದರೆ ನನ್ನ ಪ್ರಕಾಶದಿಂದ ಜಗತ್ತು ಕಾಣುವುದಿಲ್ಲ. ಮಾಯೆಯಿಂದ ಸುಳ್ಳಾಗಿ ಕಾಣುವುದು. ॥೫೨॥

ಜ್ಞಾನಮಯನು ನಾನು, ಜೀವಿಗಳಲ್ಲಿ ಜ್ಞಾನಾತ್ಮರೂಪದಿಂದ ಬೆಳಗುವೆನು. ನಾನು ಭಾವರೂಪನು, ಅಭಾವರೂಪನಲ್ಲ, ಆನಂದರೂಪನು, ಶುದ್ಧನು. ॥೫೩॥

ನಾನು ಬಾಲಕನಲ್ಲ, ಮುದುಕನಲ್ಲ, ತರುಣನಲ್ಲ, ಸರ್ವೋತ್ತಮನಾದ ನಿತ್ಯನಾದ ನನಗೆ ಈ ಬಾಲ್ಯಯೌವನವಾರ್ಧಕ್ಯಗಳೆಂಬ ಅಸತ್ಯವಾದ ಅವಸ್ಥೆಗಳಿಲ್ಲ. ಮತ್ತು ಅವತಾರವಾದಿಗಳು ಹೇಳುವಂತೆ ನನಗೆ ನಾನಾರೂಪಗಳಿಲ್ಲ. ಇಂತಹ ನಿರ್ಗುಣನಾದ ನಿರ್ವಿಕಾರನಾದ ಸತ್ಯನಾದ ಶುದ್ಧಬ್ರಹ್ಮನು ನಾನು. ನನ್ನಲ್ಲಿ ಯಾವ ಭೇದವೂ ಇಲ್ಲ, ಭಾವವೂ ಇಲ್ಲ, ಅವಸ್ಥೆಯೂ ಇಲ್ಲ." ॥೫೪॥

ನಿದಾಘಮುನಿಯು ಹೇಳಿದ ಈ ಎಲ್ಲ ವೇದಾಂತಗಳ ಸಾರವಾದ ಆತ್ಮಾನುಭವವನ್ನು ಯಾವನು ಕೇಳುವನೋ ಅವನೂ ಈ ಸಂಸಾರ ಸಂಬಂಧವಿಲ್ಲದ ಬ್ರಹ್ಮನಾಗುವನು. ॥೫೫॥

ಉದ್ಗ್ರಂಥಶ್ರುತಿಶಾಸ್ತ್ರಸೂತ್ರಕರಣೈಃ ಕಿಂಚಿಜ್ಞಸರ್ವಜ್ಞತಾ-
ಬುದ್ಧ್ಯಾ ಮೋಹಿತಮಾಯಯಾ ಶ್ರುತಿಶತೈರ್ನೋ ಜಾನತೇ ಶಂಕರಂ ।
ನ ಸ್ಥೂಲೋಽಪ್ಯನಣುರ್ನ ತೇಜಮರುತಾವಾಕಾಶನೀರಕ್ಷಮಾ
ಭೂತಾಂತರ್ಗತಕೋಶಕಾಶಹೃದಯಾದ್ಯಾಕಾಶಮಾತ್ರಾಕ್ರಮೈಃ ॥೫೬॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಚತುರ್ಥೋಽಧ್ಯಾಯಃ

---

ಆ ಶಂಕರನು ಸೂಕ್ಷ್ಮನೂ ಅಲ್ಲ, ತೇಜಸ್ಸು, ವಾಯು, ಆಕಾಶ, ಜಲನೀರುಗಳಂತೆ ಸ್ಥೂಲನೂ ಅಲ್ಲ. ಜನರು ಮೂಢರಾಗಿ ತಾವು ಸರ್ವಜ್ಞರೆಂದುಕೊಂಡು ಇತರರು ಮೂಢರೆಂದುಕೊಂಡು ಮನಬಂದಂತೆ ದೊಡ್ಡದೊಡ್ಡ ಸೂತ್ರಶಾಸ್ತ್ರಗಳನ್ನು ಬರೆದು ವ್ಯರ್ಥವಾಗಿ ಕಾಲಕಳೆಯುವರು. ಅವರಿಗೆ ಶಂಕರನ ನಿಜವಾದ ಅರಿವಿಲ್ಲವು ಎಂದು ಸೂತಮಹರ್ಷಿಗಳು ಶೌನಕಾದಿಗಳಿಗೆ ವಿವರಿಸಿ ಹೇಳಿದರು. ॥೫೬॥

ಶಿವರಹಸ್ಯದಲ್ಲಿ ಆರನೆಯ ಶಂಕರಾಂಶದಲ್ಲಿ ನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚಮೋಽಧ್ಯಾಯಃ

ಏವಂ ಸ್ಥಿತೇ ಋಭೋ ಕೋ ವೈ ಬ್ರಹ್ಮಭಾವಾಯ ಕಲ್ಪತೇ ।
ತನ್ಮೇ ವದ ವಿಶೇಷೇಣ ಜ್ಞಾನಂ ಶಾಂಕರವಾಕ್ಯಜಂ ॥೧॥

॥ ಋಭುರುವಾಚ ॥

ತ್ವಮೇವ ಬ್ರಹ್ಮ ಏವಾಸಿ ತ್ವಮೇವ ಪರಮೋ ಗುರುಃ ।
ತ್ವಮೇವಾಕಾಶರೂಪೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೨॥

ತ್ವಮೇವ ಸರ್ವಭಾವೋಽಸಿ ತ್ವಮೇವಾರ್ಥಸ್ತ್ವಮವ್ಯಯಃ ।
ತ್ವಂ ಸರ್ವಹೀನಸ್ತ್ವಂ ಸಾಕ್ಷಾತ್ಸಾಕ್ಷಿಹೀನೋಽಸಿ ಸರ್ವದಾ ॥೩॥

---

## ಐದನೆಯ ಅಧ್ಯಾಯ

ನಿದಾಘಮುನಿಯು ಮತ್ತೆ ಋಭುಮುನಿಯೊಡನೆ "ಓ ಋಭುಮುನಿ, ಆತ್ಮನಿರ್ಣಯವು ಹೀಗಿರಲು ಯಾವನು ಬ್ರಹ್ಮಸ್ವರೂಪವನ್ನು ಹೊಂದುವನು ? ಶಂಕರನುಪದೇಶಿಸಿದ ಆತ್ಮಜ್ಞಾನವನ್ನು ನನಗೆ ಇನ್ನೂ ವಿಸ್ತರಿಸಿ ಹೇಳು" ಎಂದು ಮತ್ತೆ ಪ್ರಾರ್ಥಿಸಿದನು. ಆಗ ಋಭುವು ಹೇಳಿದ್ದೇನೆಂದರೆ, ॥೧॥

"ಎಲೈ ನಿದಾಘನೇ, ನೀನೇ ಬ್ರಹ್ಮನು, ನೀನೇ ಗುರು, ನೀನು ಆಕಾಶದಂತೆ ನಿರ್ವಿಕಾರವಾದ ಸ್ವರೂಪವುಳ್ಳ ಬ್ರಹ್ಮನು. ॥೨॥

ಎಲ್ಲ ಭಾವಗಳೂ ನೀನೇ, ಎಲ್ಲ ಅರ್ಥಗಳೂ ನೀನೆ, ಆದರೆ ಯಾವುದೊಂದೂ ನಿನ್ನಲ್ಲಿ ನಿಜವಾಗಿಲ್ಲ, ಎಲ್ಲಕ್ಕೂ ನೀನು ಸಾಕ್ಷಿಯು. ನಿನಗಾವ ಸಾಕ್ಷಿಯೂ ಇಲ್ಲ. ॥೩॥

ಕಾಲಸ್ತ್ವಂ ಸರ್ವಹೀನಸ್ತ್ವಂ ಸಾಕ್ಷಿಹೀನೋಽಸಿ ಸರ್ವದಾ ।
ಕಾಲಹೀನೋಽಸಿ ಕಾಲೋಽಸಿ ಸದಾ ಬ್ರಹ್ಮಾಸಿ ಚಿದ್ಘನಃ ॥೪॥

ಸರ್ವತತ್ತ್ವಸ್ವರೂಪೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ
ಸತ್ಯೋಽಸಿ ಸಿದ್ಧೋಽಸಿ ಸನಾತನೋಽಸಿ ಮುಕ್ತೋಽಸಿ ಮೋಕ್ಷೋಽಸಿ
ಸದಾಮೃತೋಽಸಿ ।
ದೇವೋಽಸಿ ಶಾಂತೋಽಸಿ ನಿರಾಮಯೋಽಸಿ ಬ್ರಹ್ಮಾಸಿ ಪೂರ್ಣೋಽಸಿ
ಪರಾಪರೋಽಸಿ ॥೫॥

ಸಮೋಽಸಿ ಸಚ್ಚಾಸಿ ಸನಾತನೋಽಸಿ ಸತ್ಯಾದಿವಾಕ್ಯೈಃ ಪ್ರತಿಪಾದಿತೋಽಸಿ ।
ಸರ್ವಾಂಗಹೀನೋಽಸಿ ಸದಾ ಸ್ಥಿತೋಽಸಿ ಬ್ರಹ್ಮಾಸಿ ಪೂರ್ಣೋಽಸಿ
ಪರಾಪರೋಽಸಿ ॥೬॥

ಸರ್ವಪ್ರಪಂಚಭ್ರಮವರ್ಜಿತೋಽಸಿ
ಸರ್ವೇಷು ಭೂತೇಷು ಸದೋದಿತೋಽಸಿ ।
ಸರ್ವತ್ರ ಸಂಕಲ್ಪವಿವರ್ಜಿತೋಽಸಿ
ಬ್ರಹ್ಮಾಸಿ ಪೂರ್ಣೋಽಸಿ ಪರಾಪರೋಽಸಿ ॥೭॥

---

ಕಾಲದಂತೆ ನೀನು ಯಾವ ಸುಖದುಃಖಗಳ ಸಂಬಂಧಗಳೂ ಇಲ್ಲದವನು. ನಿನಗೆ ಕಾಲವೇ ಇಲ್ಲ, ನೀನೇ ಕಾಲನು, ಜ್ಞಾನಮಯನಾದ ಬ್ರಹ್ಮನು ನೀನು. ॥೪॥

ಜಗತ್ತೆಲ್ಲವೂ ನಿನ್ನ ಸ್ವರೂಪವೇ, ಸತ್ಯನು ನೀನು, ಅನಾದಿಯು ನೀನು, ನಿತ್ಯಮುಕ್ತನು ನೀನು, ಮೋಕ್ಷವೂ ನೀನು, ಆನಂದವು ನೀನು, ಜ್ಞಾನಜ್ಯೋತಿಯು ನೀನು, ಶಾಂತನು ನೀನು. ನಿರ್ಮಲನು ನೀನು. ನಿತ್ಯತೃಪ್ತನಾದ ಬ್ರಹ್ಮನು ನೀನು, ಸರ್ವೋತ್ತಮನು ನೀನು. ॥೫॥

ಸರ್ವರಲ್ಲಿ ಒಂದೇ ಬಗೆಯಾಗಿ ಇರುವವನು ನೀನು, ಸತ್ಯನು ನೀನು. ಸತ್ಯ, ಜ್ಞಾನ, ಆನಂದ, ಮೊದಲಾದ ವೇದಾಂತಗಳಿಂದ ಪ್ರತಿಪಾದಿಸಲ್ಪಡುವವನು ನೀನು. ನಿನಗೆ ಅವಯವಗಳಿಲ್ಲ. ಯಾವಾಗಲೂ ನೀನಿರುವೆ. ಇಂತಹ ಪೂರ್ಣಬ್ರಹ್ಮ ವಸ್ತುವು ನೀನು. ॥೬॥

ನಿನ್ನಲ್ಲಿ ಪ್ರಪಂಚಭ್ರಾಂತಿಯಾವುದೂ ಇಲ್ಲ, ಎಲ್ಲ ಪ್ರಾಣಿಗಳಲ್ಲೂ ನೀನು ಸದಾ

ಸರ್ವತ್ರ ಸಂತೋಷಸುಖಾಸನೋಽಸಿ
ಸರ್ವತ್ರ ಇತ್ಯೇವ ವಿವರ್ಜಿತೋಽಸಿ ।
ಸರ್ವತ್ರ ಕಾರ್ಯಾದಿವಿವರ್ಜಿತೋಽಸಿ
ಬ್ರಹ್ಮಾಸಿ ಪೂರ್ಣೋಽಸಿ ಪರಾವರೋಽಸಿ ॥೮॥

ಚಿದಾಕಾರ ಸ್ವರೂಪೋಽಸಿ ಚಿನ್ಮಾತ್ರೋಽಸಿ ನಿರಂಕುಶಃ ।
ಆತ್ಮನ್ಯೇವಾಸ್ಥಿತೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೯॥

ಚಿದ್ಘನಾನಂದರೂಪೋಽಪಿ ಚಿದಾನಂದೋಽಸಿ ಸರ್ವದಾ ।
ಪರಿಪೂರ್ಣಸ್ವರೂಪೋಽಸ್ಮಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೦॥

ಆನಂದೋಽಸಿ ಪರೋಽಸಿ ತ್ವಂ ಸರ್ವಶೂನ್ಯೋಽಸಿ ನಿರ್ಗುಣಃ ।
ಏಕ ಏವಾದ್ವಿತೀಯೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೧॥

ತದಸಿ ತ್ವಮಸಿ ಜ್ಞೋಽಸಿ ಸೋಽಸಿ ಜಾನಾಸಿ ವೀಕ್ಷ್ಯಸಿ ।
ಚಿದಸಿ ಬ್ರಹ್ಮಭೂತೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೨॥

---

ಆತ್ಮರೂಪದಿಂದಿರುವೆ, ನಿನಗೆ ಯಾವ ಕಾಮನೆಗಳೂ ಇಲ್ಲ, ಇಂತಹ ಪೂರ್ಣ ಬ್ರಹ್ಮನು ನೀನು. ॥೭॥

ಎಲ್ಲೆಡೆಯಲ್ಲೂ ನೀನು ಸಂತೋಷಸುಖಸ್ವರೂಪನಾಗಿರುವೆ. ಎಲ್ಲಡೆಯಲ್ಲೂ ಇರುವವನಾದುದರಿಂದ ನಿನ್ನನ್ನು ಹೀಗೆಯೇ ಇಲ್ಲಿಯೇ ಇರುವವನೆಂದು ಹೇಳಲಾಗುವುದಿಲ್ಲ. ಯಾವಕಾರ್ಯಗಳೂ ನಿನಗಿಲ್ಲ, ಇಂತಹ ಪೂರ್ಣಬ್ರಹ್ಮವಸ್ತುವು ನೀನು. ॥೮॥

ನಿನ್ನ ಆಕಾರವೂ ಸ್ವರೂಪವೂ ಜ್ಞಾನವೇ. ಸರ್ವಸ್ವತಂತ್ರನು ನೀನು, ನಿನ್ನಲ್ಲಿಯೇ ನೀನಿರುವೆ, ನೀನು ಆ ಬ್ರಹ್ಮವಸ್ತುವು. ಇದರಲ್ಲಿ ಸಂಶಯವಿಲ್ಲ. ॥೯॥

ಜ್ಞಾನದ ಮೊತ್ತವು ನೀನು, ಆನಂದಸ್ವರೂಪನು ಪೂರ್ಣನು ನೀನೇ. ॥೧೦॥

ಉತ್ಕೃಷ್ಟವಾದ ಆನಂದಸ್ವರೂಪನು ನೀನು, ನಿನ್ನಲ್ಲಿ ಯಾವ ಭೇದವೂ ಗುಣಗಳೂ ಇಲ್ಲ. ಎರಡನೆಯ ವಸ್ತುವಿಲ್ಲದ ಓರ್ವನು ನೀನು. ॥೧೧॥

ಆ ಬ್ರಹ್ಮವಸ್ತುವು ನೀನೇ, ಈ ಜೀವಾತ್ಮನೂ ನೀನು, ತಿಳಿಯುವವನೂ ನೋಡುವವನೂ ನೀನು. ಇದಕ್ಕೆ ಕಾರಣವೇನೆಂದರೆ ನೀನೇ ಜ್ಞಾನಸ್ವರೂಪನಾಗಿರುವೆ. ॥೧೨॥

ಅಮೃತೋಽಸಿ ವಿಭುಶ್ಚಾಪಿ ದೇವೋಽಸಿ ತ್ವಂ ಮಹಾನಸಿ ।
ಚಂಚಲೋಽಸ್ಯಕಲಂಕೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೩॥

ಸರ್ವೋಽಸಿ ಸರ್ವಹೀನೋಽಸಿ ಶಾಂತೋಽಸಿ ಪರವೋಽಹ್ಯಸಿ ।
ಕಾರಣಂ ತ್ವಂ ಪ್ರಶಾಂತೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೪॥

ಸತ್ತಾಮಾತ್ರಸ್ವರೂಪೋಽಸಿ ಸತ್ತಾಸಾಮಾನ್ಯಕೋಽಹ್ಯಸಿ ।
ನಿತ್ಯಶುದ್ಧಸ್ವರೂಪೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೫॥

ಈಷನ್ಮಾತ್ರವಿಹೀನೋಽಸಿ ಅಣುಮಾತ್ರವಿವರ್ಜಿತಃ ।
ಅಸ್ತಿತ್ವವರ್ಜಿತೋಽಸಿ ತ್ವಂ ನಾಸ್ತಿತ್ವಾದಿವಿವರ್ಜಿತಃ ॥೧೬॥

ಲಕ್ಷ್ಯಲಕ್ಷಣಹೀನೋಽಸಿ ಚಿನ್ಮಾತ್ರೋಽಸಿ ನಿರಾಮಯಃ ।
ಅಖಂಡೈಕರಸೋ ನಿತ್ಯಂ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೭॥

ಯೋಽಸಿ ಸೋಽಸಿ ಮಹಾಂತೋಽಸಿ ತ್ವಂ ಬ್ರಹ್ಮಾಸಿ ನ ಸಂಶಯಃ॥೧೮॥

---

ನಿನಗೆ ಮರಣವಿಲ್ಲ, ಪರಮೇಶ್ವರನು ನೀನು, ಪ್ರಕಾಶಸ್ವರೂಪನು ನೀನು, ವ್ಯಾಪಕನು ನೀನು, ಚಂಚಲನು ನೀನು. ॥೧೩॥

ಎಲ್ಲವೂ ನೀನೆ, ಆದರೆ ಯಾವುದೂ ನಿನ್ನಲ್ಲಿಲ್ಲ. ಶಾಂತನು ನೀನು, ಸರ್ವೋತ್ತಮನು ನೀನು, ಎಲ್ಲಕ್ಕೂ ಕಾರಣನು ನೀನು. ॥೧೪॥

ನೀನು ಕೇವಲ "ಅಸ್ತಿ" (ಇದೆ) ಎಂಬುವುದರ ಇರುವಿಕೆಯ ರೂಪವಾದ ಭಾವಸ್ವರೂಪನಾಗಿರುವೆ. ಅಸ್ತಿತ್ವವೂ ನಿನ್ನಲ್ಲಿದೆ, ನಿತ್ಯವೂ ಶುದ್ಧವೂ ಆದ ಸ್ವರೂಪವುಳ್ಳವನು ನೀನು. ॥೧೫॥

ನಿನ್ನಲ್ಲಿ ಯಾವುದೂ ಕಿಂಚಿತ್ತಾಗಿಯೂ ಇಲ್ಲ. ಆದರೆ ಯಾವುದೊಂದಣುವೂ ನಿನ್ನ ಹೊರತಾಗಿಲ್ಲ. ಅಸ್ತಿತ್ವನಾಸ್ತಿತ್ವಗಳೆಂಬ ಭಾವಗಳೂ ನಿನ್ನಲ್ಲಿಲ್ಲ. ॥೧೬॥

ಲಕ್ಷಣದ ಗುರಿಯು ನೀನಲ್ಲ. ಅಂದರೆ ಲಕ್ಷಣವು ನಿನ್ನಲ್ಲಿಲ್ಲ. ಶುದ್ಧಜ್ಞಾನಸ್ವರೂಪನು ನೀನು. ಪೂರ್ಣವಾದ ಆನಂದಸ್ವರೂಪನು ನೀನು. ॥೧೭॥

ಯಾವುದು ಎನ್ನುವುದೂ ನೀನೇ, ಅದು ಎನ್ನುವುದೂ ನೀನು. ಅಂತಹ ವ್ಯಾಪಕ ಸ್ವರೂಪಿಯು ನೀನು. ॥೧೮॥

ಸರ್ವಾಧಾರಸ್ವರೂಪೋಸಿ ಸರ್ವತೇಜಃಸ್ವರೂಪಕಃ ।
ಸರ್ವಾರ್ಥಭೇದಹೀನೋಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೧೯॥

ಬ್ರಹ್ಮೈವ ಭೇದಶೂನ್ಯೋಸಿ ವಿಪ್ರತ್ವಾದಿವಿವರ್ಜಿತಃ ।
ಶಿವೇತಿ ಭೇದಹೀನೋಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೨೦॥

ಪ್ರಜ್ಞಾನಜ್ಞಾನಹೀನೋಸಿ ಸ್ವಸ್ವರೂಪಂ ಪ್ರಪಶ್ಯಸಿ ।
ಸ್ವಸ್ವರೂಪಸ್ಥಿತೋಸಿ ತ್ವಂ ತ್ವಂ ಬ್ರಹ್ಮಾಸಿ ನ ಸಂಶಯಃ ॥೨೧॥

ಸ್ವಸ್ವರೂಪಾವಶೇಷೋಸಿ ಸ್ವಸ್ವರೂಪಾವೃತೋಹ್ಯಸಿ ।
ಸ್ವಾನಂದಸಿಂಧುಮಗ್ನೋಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೨೨॥

ಸ್ವಾತ್ಮರಾಜ್ಯೇ ತ್ವಮೇವಾಸಿ ಸ್ವಯಮಾತ್ಮತನೋಹ್ಯಸಿ ।
ಸ್ವಯಂ ಪೂರ್ಣಸ್ಯ ರೂಪೋಸಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೨೩॥

---

ಎಲ್ಲಕ್ಕೂ ಆಧಾರನು ನೀನು, ಎಲ್ಲ ತೇಜಸ್ಸೂ ನಿನ್ನ ಸ್ವರೂಪವು, ಯಾವ ಭೇದವೂ ಇಲ್ಲದ ಅದ್ವಿತೀಯ ಬ್ರಹ್ಮನು ನೀನು. ॥೧೯॥

ಬ್ರಾಹ್ಮಣತ್ವ, ಕ್ಷತ್ರಿಯತ್ವ ಮೊದಲಾದ ಭೇದಗಳಿಲ್ಲದ ಅದ್ವಿತೀಯ ಸ್ವರೂಪನು ನೀನು. ಶಿವ, ನಾರಾಯಣ, ವಿಧಿ ಮೊದಲಾದ ಭೇದಗಳೂ ನಿನ್ನಲ್ಲಿಲ್ಲ. ॥೨೦॥

ಜ್ಞಾನಸ್ವರೂಪನಾದ ನಿನ್ನಲ್ಲಿ ಜ್ಞಾನವೂ ಅನುಭವವೂ ಬೇರೆಯಾಗಿಲ್ಲ. ನಿನ್ನ ಸ್ವರೂಪದಲ್ಲಿಯೇ ನೀನು ನಿನ್ನನ್ನು ನೋಡಿಕೊಳ್ಳುತ್ತಿರುವೆ. ॥೨೧॥

ನಿನ್ನ ಸ್ವರೂಪವೇ ಕೊನೆಯಲ್ಲುಳಿಯುವುದು, ಅಂದರೆ ಜಗತ್ತೆಲ್ಲವೂ ಅಸತ್ಯವೆಂದು ಅನುಭವವುಂಟಾದರೆ, ಆಗ ಆತ್ಮಸ್ವರೂಪವೊಂದೇ ಸತ್ಯವಾಗುಳಿಯುವುದು. ಆತ್ಮಾನಂದಸಾಗರದಲ್ಲಿ ನೀನು ಯಾವಾಗಲೂ ಈಜಾಡುತ್ತಿರುವವನು. ॥೨೨॥

ಆತ್ಮರಾಜ್ಯದಲ್ಲಿ ನೀನೇ ಪರಮಾತ್ಮನಾದ ರಾಜನು, ಸದಾ ಪೂರ್ಣವಾಗಿರುವ ಸ್ವರೂಪನು ನೀನು. ॥೨೩॥

ಸ್ವಸ್ಮಿನ್ ಸುಖೇ ಸ್ವಯಂ ಚಾಸಿ ಸ್ವಯಂ ಸರ್ವತ್ರ ಪಶ್ಯಸಿ ।
ಸ್ವಸ್ಮಿನ್ ಸ್ವಯಂ ಭುಂಕ್ಷೇ ತ್ವಂ ಬ್ರಹ್ಮಾಸಿ ನ ಸಂಶಯಃ ॥೨೪॥

॥ ಸೂತ ಉವಾಚ ॥

ತದಾ ನಿದಾಘವಚಸಾ ತುಷ್ಟೋ ಋಭುರುವಾಚ ತಂ ।
ಶಿವ ಪ್ರೇಮರಸೇ ಪಾತ್ರಂ ತಂ ವೀಕ್ಷ್ಯಾಬ್ಜಜನಂದನಃ ॥೨೫॥

ಕೈಲಾಸೇ ಶಂಕರಃ ಪುತ್ರಂ ಕದಾಚಿದುಪದಿಷ್ಟವಾನ್ ।
ತದೇವ ತೇ ಪ್ರವಕ್ಷ್ಯಾಮಿ ಸಾವಧಾನಮನಾಃ ಶೃಣು ॥೨೬॥

ಇದಂ ಪ್ರಪಂಚೋ ನಾಸ್ತ್ಯೇವ ನೋತ್ಪನ್ನಂ ನ ಸ್ವತಃ ಕ್ವಚಿತ್ ।
ಚಿತ್ರಂ ಪ್ರಪಂಚಮಿತ್ಯಾಹುರ್ನಾಸ್ತಿ ನಾಸ್ತ್ಯೇವ ಸರ್ವದಾ ॥೨೭॥

---

ಆತ್ಮಸುಖದಲ್ಲಿ ನೀನೇ ಸುಖವಾಗಿ ಇರುವೆ. ಎಲ್ಲವನ್ನೂ ಹಾಗೂ ನೀನು ನಿನ್ನನ್ನೇ ನೋಡುವೆ. ನಿನ್ನಲ್ಲಿ ನಿನ್ನನ್ನು ನೀನು ಅನುಭವಿಸುವೆ. ॥೨೪॥

ಮೇಲೆ ಹೇಳಿದಂತೆ ಹೇಳಿ ಋಭುವು, ಹಿಂದೆ ನಿದಾಘನು ಹೇಳಿದ ಮಾತಿನಿಂದ ತುಷ್ಟನಾಗಿ ಶಿವನ ಅನುಗ್ರಹಕ್ಕೆ ಅವನು ಯೋಗ್ಯನೆಂದು ತಿಳಿದು ಮತ್ತೆ ಋಭುಮುನಿಯು ಹೀಗೆಂದನು. ॥೨೫॥

ನಿದಾಘಮುನಿಯೇ, ಹಿಂದೊಂದು ಸಮಯದಲ್ಲಿ ಶಿವನು ತನ್ನ ಪುತ್ರನಾದ ಸ್ಕಂದನಿಗೆ ಹೀಗೆ ಉಪದೇಶಿಸಿರುವನು. ಅದನ್ನೇ ಈಗ ನಿನಗೆ ತಿಳಿಯಹೇಳುವೆನು, ಸಾವಧಾನವಾಗಿ ಕೇಳು. ॥೨೬॥

ಈ ಪ್ರಪಂಚವು ವಸ್ತುತಃ ಇಲ್ಲವೇ ಇಲ್ಲ, ಇದು ಜನಿಸಿಯೂ ಇಲ್ಲ. ಪ್ರಕಾಶವೂ ಸ್ವತಃ ಇದಕ್ಕೆ ಇಲ್ಲ, ಪ್ರಪಂಚವು ಚಿತ್ರವಾದುದೆಂದು ಹೇಳುವರು. ಅಂದರೆ ಹಗ್ಗವನ್ನು ನೋಡಿ ಹಾವೆಂದು ತಿಳಿಯುವಂತೆ ಇದು ಕಾಣುತ್ತದೆ. ಹಗ್ಗದ ಹಾವಿಗೆ ಹೇಗೆ ಸೃಷ್ಟಿಯೂ ಸ್ವತಃ ಪ್ರಕಾಶವೂ ಇಲ್ಲವೋ ಅಂತೆಯೇ ಪ್ರಪಂಚಕ್ಕೂ ಸಹ ಇಲ್ಲ. ॥೨೭॥

ನ ಪ್ರಪಂಚಂ ನ ಚಿತ್ತಾದಿ ನಾಹಂಕಾರೋ ನ ಜೀವಕಃ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೨೮॥

ಮಾಯಾಕಾರ್ಯಾದಿಕಂ ನಾಸ್ತಿ ಮಾಯಾಕಾರ್ಯಭಯಂ ನ ಚ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೨೯॥

ಕರ್ತಾ ನಾಸ್ತಿ ಕ್ರಿಯಾ ನಾಸ್ತಿ ಕಾರಣಂ ನಾಸ್ತಿ ಪುತ್ರಕ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೦॥

ಏಕಂ ನಾಸ್ತಿ ದ್ವಯಂ ನಾಸ್ತಿ ಮಂತ್ರತಂತ್ರಾದಿಕಂ ನ ಚ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೧॥

ಶ್ರವಣಂ ಮನನಂ ನಾಸ್ತಿ ನಿದಿಧ್ಯಾಸನವಿಭ್ರಮಃ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೨॥

ಸಮಾಧಿರ್ದ್ವಿವಿಧಂ ನಾಸ್ತಿ ಮಾತೃಮಾನಾದಿ ನಾಸ್ತಿ ಹಿ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೩॥

---

ಪ್ರಪಂಚದಂತೆ ಮನಸ್ಸು, ಅಹಂಕಾರ, ಜೀವ—ಇವುಗಳೂ ಇಲ್ಲ. ಬ್ರಹ್ಮವಸ್ತುವೊಂದೇ ಸತ್ಯವಾಗಿರುವುದು. ಇನ್ನಾವುದೂ ಯಾವಾಗಲೂ ಇಲ್ಲ. ॥೨೮॥

ಮಾಯೆಯೂ ಮಾಯೆಯಿಂದ ಜನಿಸುವ ವಸ್ತುವೂ ಇಲ್ಲ. ಅವಿಲ್ಲದಮೇಲೆ ಆ ಪ್ರಯುಕ್ತ ಭಯವೂ ಇಲ್ಲ. ಬ್ರಹ್ಮವಸ್ತುವೊಂದೇ ಸ್ಥಿರವಾಗಿ ಇರುವುದು. ॥೨೯॥

ಕರ್ತೃವೂ ಇಲ್ಲ ಕಾರ್ಯವೂ ಇಲ್ಲ, ಕಾರಣವೂ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ॥೩೦॥

ಪರಮಾರ್ಥದಲ್ಲಿ ಒಂದೂ ಇಲ್ಲ, ಎರಡೂ ಇಲ್ಲ. ಮಂತ್ರತಂತ್ರ-ಮೊದಲಾದುದಾವುದೂ ಇಲ್ಲ. ಬ್ರಹ್ಮವೊಂದೇ ಇರುವುದು. ॥೩೧॥

ಶ್ರವಣವೂ ಇಲ್ಲ, ವಾದವೂ ಇಲ್ಲ, ಧ್ಯಾನವೂ ಇಲ್ಲ, ಬ್ರಹ್ಮವೊಂದೇ ಇರುವುದು. ॥೩೨॥

ನಿರ್ವಿಕಲ್ಪಕ, ಸವಿಕಲ್ಪಕಗಳೆಂಬ ಎರಡು ಬಗೆಯ ಸಮಾಧಿ (ಧ್ಯಾನ) ಗಳು ಇಲ್ಲ, ಪ್ರಮಾಣ, ಪ್ರಮಾತೃಪ್ರಮೇಯಗಳೆಂಬ ಭೇದಗಳೂ ವಸ್ತುತಃ ಇಲ್ಲ. ॥೩೩॥

ಅಜ್ಞಾನಂ ಚಾಪಿ ನಾಸ್ತ್ಯೇವ ಅವಿವೇಕಕಥಾ ನ ಚ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೪॥

ಅನುಬಂಧಚತುಷ್ಕಂ ನ ಸಂಬಂಧತ್ರಯಮೇವ ನ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿನಾಸ್ತ್ಯೇವ ಸರ್ವದಾ ॥೩೫॥

ಭೂತಂ ಭವಿಷ್ಯಂ ನಕ್ವಾಪಿ ವರ್ತಮಾನಂ ನ ವೈಕ್ವಚಿತ್ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿನಾಸ್ತ್ಯೇವ ಸರ್ವದಾ ॥೩೬॥

ಗಂಗಾ ಗಯಾ ತಥಾಸೇತುವ್ರತಂ ವಾ ನಾದ್ಯದಸ್ತಿ ಹಿ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇವ ಸರ್ವದಾ ॥೩೭॥

ನಭೂಮಿರ್ನ ಜಲಂ ವಹ್ನಿರ್ನವಾಯುರ್ನಚ ಖಂ ಚ ತತ್ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇನ ಸರ್ವದಾ ॥೩೮॥

---

ಅಜ್ಞಾನವೂ ಇಲ್ಲ, ಅವಿವೇಕವೂ ಇಲ್ಲ, ಎರಡು ವಸ್ತುಗಳಿದ್ದರೆ, ಇದು ಸತ್ಯ, ಇದು ಅಸತ್ಯ ಎಂಬ ವಿವೇಕವೂ ಒಂದನ್ನು ತಿಳಿಯುವ ಜ್ಞಾನವೂ ಬರಬಹುದು, ಆದರೆ ಒಂದೇ ವಸ್ತುವಿರುವುದರಿಂದ ಅಜ್ಞಾನವೂ ಇಲ್ಲ, ಅವಿವೇಕವೂ ಇಲ್ಲ. ॥೩೪॥

ಆತ್ಮಾನಾತ್ಮವಿವೇಕ, ವೈರಾಗ್ಯ, ಮುಮುಕ್ಷುತ್ವ, ಶಮಾದಿಷಟ್ಕಸಂಪತ್ತಿ--- ಈ ನಾಲ್ಕು ಮುಕ್ತಿಸಾಧನಗಳೂ ಇಲ್ಲ. ಅಂಶಾಂಶಿಭಾವ, ಬಿಂಬಪ್ರತಿಬಿಂಬಭಾವ, ಅವಚ್ಛೇದಕಭಾವಗಳೆಂಬ ಮೂರು ಜೀವಪರಮಾತ್ಮ ಸಂಬಂಧಗಳೂ ಇಲ್ಲ. ಇವೆಲ್ಲ ಭೇದವಿದ್ದರೆ ಮಾತ್ರ ಸಂಘಟಿಸುವುವು, ಅದ್ವಿತೀಯನಾದ ಪರಮಾತ್ಮನಲ್ಲಿ ಘಟಿಸುವುದಿಲ್ಲ. ॥೩೫॥

ಭೂತವಸ್ತುವೂ ಭವಿಷ್ಯದ್ವಸ್ತುವೂ ವರ್ತಮಾನವಸ್ತುವೂ, ಆಕಾಲಗಳೂ ಸಹ ವಸ್ತುತಃ ಇಲ್ಲ, ಬ್ರಹ್ಮನು ಹೊರತು ಯಾವುದೂ ಇಲ್ಲ. ॥೩೬॥

ಗಂಗಾನದಿ, ಗಯೆ, ರಾಮಸೇತು—ಮತ್ತು ಆ ಪುಣ್ಯಸ್ಥಳಗಳಲ್ಲಿ ಮಾಡುವ ಕರ್ಮಗಳೂ ಸ್ಥಿರವಲ್ಲ. ॥೩೭॥

ಭೂಮಿ, ಜಲ, ವಾಯು, ತೇಜಸ್ಸು, ಆಕಾಶ ಈ ಪಂಚಭೂತಗಳೂ ಇಲ್ಲ, ಅವಕ್ಕೆ ಕಾರಣವೆಂದೆನ್ನುವ ಸೂಕ್ಷ್ಮಭೂತಗಳೂ ಇಲ್ಲ. ॥೩೮॥

ನೈವ ದೇವಾ ನ ದಿಕ್ಪಾಲಾ ನಪಿತಾ ನ ಗುರುಸ್ತಥಾ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೩೯॥

ನದೂರಂ ನಾಂತಿಕಂ ನಾಂತಂ ನಮಧ್ಯಂ ನಕ್ವಚಿತ್ ಸ್ಥಿತಿಃ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇವ ಸರ್ವದಾ ॥೪೦॥

ನಾದ್ವೈತದ್ವೈತಸತ್ಕತ್ವಂ ಅಸತ್ಯಂ ವಾ ಇದಂ ಚ ನ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇವ ಸರ್ವದಾ ॥೪೧॥

ನಮೋಕ್ಷೋಸ್ತಿ ನಬಂಧೋಸ್ತಿ ನ ವಾರ್ತಾವಸರೋಸ್ತಿ ಹಿ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇವ ಸರ್ವದಾ ॥೪೨॥

ಕ್ವಚಿದ್ವಾ ಕಿಂಚಿದೇವಂ ವಾ ಸದ್ವಾಽಸದ್ವಾ ಸುಖಾನಿ ಚ ।
ಕೇವಲಂ ಬ್ರಹ್ಮಮಾತ್ರತ್ವಾ ನ್ನಾಸ್ತಿನಾಸ್ತ್ಯೇವ ಸರ್ವದಾ ॥೪೩॥

---

ದೇವತೆಗಳೂ, ದಿಕ್ಪಾಲಕರೂ, ತಂದೆ-ಮಗ, ಗುರು-ಶಿಷ್ಯ-ಮೊದಲಾದವರು ಯಾರೂ ಇಲ್ಲ, ಅದ್ವಿತೀಯನಾದ ಬ್ರಹ್ಮನೋರ್ವನೇ ಇರುವವನು. ॥೩೯॥

ದೂರ-ಸಮೀಪ, ಆದಿ, ಮಧ್ಯ ಕೊನೆ— ಇವುಗಳೂ ಇಲ್ಲ, ಬ್ರಹ್ಮನೋರ್ವನೇ ಸರ್ವವ್ಯಾಪಿಯು. ॥೪೦॥

ಅದ್ವೈತ ಮತ್ತು ದ್ವೈತಗಳ ಸತ್ಯತ್ವವು ಇಲ್ಲ, ಅಸತ್ಯತ್ವವೂ ಇಲ್ಲ, ಬ್ರಹ್ಮವೊಂದೇ ಇರುವುದು. ॥೪೧॥

ಬ್ರಹ್ಮವಸ್ತುವು ಹೊರತಾಗಿ ಬೇರೆ ಮುಕ್ತಿಯೂ ಇಲ್ಲ, ಬಂಧವೂ ಇಲ್ಲ, ದುಃಖ ಸಂದರ್ಭವೇ ಇಲ್ಲ, ಎಲ್ಲವೂ ಪರವಸ್ತುವೇ. ॥೪೨॥

ಎಲ್ಲಿಯೆಂಬುದು ಇಲ್ಲ ಯಾವುದು ಎಂಬುದಿಲ್ಲ. ಹೀಗೆ ಎಂಬುದಿಲ್ಲ, ಇದೆ ಎಂಬುದಿಲ್ಲ, ಇಲ್ಲ ಎಂಬುದಿಲ್ಲ, ಸುಖವಿಲ್ಲ, ದುಃಖವಿಲ್ಲ, ಪರಮಾತ್ಮವಸ್ತುವೊಂದೇ ಇರುವುದು. ॥೪೩॥

ದ್ವಂದ್ವಂ ವಾ ತೀರ್ಥಧರ್ಮಾದಿ ಆತ್ಮಾನಾತ್ಮೇತಿ ನ ಕ್ವಚಿತ್ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿನಾಸ್ತ್ಯೇವ ಸರ್ವದಾ ॥೪೪॥

ನ ವೃದ್ಧಿರ್ನೋದಯಂ ಮೃತ್ಯುರ್ನಿಗಮಾಗಮವಿಭ್ರಮಃ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿನಾಸ್ತ್ಯೇವ ಸರ್ವದಾ ॥೪೫॥

ಇಹ ನಾಸ್ತಿ ಪರಂ ನಾಸ್ತಿ ನಗುರುರ್ನ ಚ ಶಿಷ್ಯಕಃ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೪೬॥

ಸದಸನ್ನಾಸ್ತಿ ಭೂರ್ನಾಸ್ತಿ ಕಾರ್ಯಂ ನಾಸ್ತಿ ಕೃತಂ ಚ ನ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೪೭॥

ಜಾತಿರ್ನಾಸ್ತಿ ಗತಿರ್ನಾಸ್ತಿ ನ ವರ್ಣೋ ನಾಸ್ತಿ ಲೌಕಿಕಂ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೪೮॥

---

ಪುಣ್ಯ–ಪಾಪ, ಧರ್ಮ–ಅಧರ್ಮ, ಸುಖ–ದುಃಖ, ಶೀತ-ಉಷ್ಣ, ಆತ್ಮ–ಅನಾತ್ಮ, ಪವಿತ್ರ–ಅಪವಿತ್ರ ಎಂಬ ದ್ವಂದ್ವ (ಜೋಡಿ)ವಾದ ಪರಸ್ಪರವಿರುದ್ಧವಸ್ತುಗಳೂ ಇರುವುದಿಲ್ಲ. ॥೪೪॥

ವೃದ್ಧಿ (ಬೆಳವಳಿಗೆ) ಉದಯುಗಳಿಲ್ಲ. ಮೃತ್ಯುವಿಲ್ಲ. ವೇದಶಾಸ್ತ್ರಗಳಿಲ್ಲ. ಭ್ರಾಂತಿಯಿಲ್ಲ. ॥೪೫॥

ಇಹಲೋಕವೆಂಬುದಿಲ್ಲ. ಪರಲೋಕವೆಂಬುದಿಲ್ಲ. ಗುರುವು ಇಲ್ಲ, ಶಿಷ್ಯನೂ ಇಲ್ಲ. ॥೪೬॥

ಸತ್ ಅಸತ್ – ಎಂಬುದಿಲ್ಲ, ಭೂಮಿಯಿಲ್ಲ, ಮಾಡಬೇಕೆಂಬುದಿಲ್ಲ, ಮಾಡಿದುದೆಂಬುದಿಲ್ಲ, ಆತ್ಮಸ್ವರೂಪವೊಂದೇ ಇರುವುದು. ॥೪೭॥

ಜಾತಿಯಿಲ್ಲ, ಗತಿಯಿಲ್ಲ, ವರ್ಣಗಳಿಲ್ಲ, ಲೋಕವ್ಯವಹಾರವಿಲ್ಲ, ಆತ್ಮನೋರ್ವನೇ ಇರುವವನು. ॥೪೮॥

ಶಮಾದಿಷಟ್ಕಂ ನಾಸ್ತ್ಯೇವ ನಿಯಮೋ ವಾ ಯಮೋಽಪಿ ವಾ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೪೯॥

ಸರ್ವಂ ಮಿಥ್ಯೇತಿ ನಾಸ್ತ್ಯೇವ ಬ್ರಹ್ಮ ಇತ್ಯೇವ ನಾಸ್ತಿ ಹಿ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೦॥

ಚಿದಿತ್ಯೇವ ಹಿ ನಾಸ್ತ್ಯೇವ ಚಿದಹಂಭಾಷಣಂ ನಹಿ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೧॥

ಅಹಮಿತ್ಯೇವ ನಾಸ್ತ್ಯೇವ ನಿತ್ಯೋಽಸ್ಮೀತಿ ಚ ನ ಕ್ವಚಿತ್ ।
ಕೇವಲಂ ಬ್ರಹ್ಮಮಾತ್ರತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೨॥

ವಾಚಾ ಯದುಚ್ಯತೇ ಕಿಂಚಿನ್ಮನಸಾ ಮನುತೇ ಚ ಯತ್ ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೩॥

ಬುಧ್ಯಾ ನಿಶ್ಚೀಯತೇ ಯಚ್ಚ ಚಿತ್ತೇನ ಜ್ಞಾಯತೇ ಚ ಯತ್ ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೪॥

---

ಶಮ, ದಮ, ತಿತಿಕ್ಷಾ, ಕ್ಷಾಂತಿ, ಆಸ್ತೇಯ, ಆರ್ಜವವೆಂಬ ಆರು ಸಾಧನೆಗಳೂ ಇಲ್ಲ, ನಿಯಮವೂ ಇಲ್ಲ, ಯಮನೂ ಇಲ್ಲ, ಆತ್ಮವಸ್ತುವೊಂದೇ ಇರುವುದು. ॥೪೯॥

ಎಲ್ಲವೂ ಸುಳ್ಳು ಎಂಬುದಿಲ್ಲ. ಬ್ರಹ್ಮನಿದ್ದಾನೆ ಎಂಬುದೂ ಇಲ್ಲ. ಆತ್ಮವಸ್ತುವೊಂದೇ ಇರುವುದು. ॥೫೦॥

ಜ್ಞಾನವೆಂಬುದು ಬೇರೆಯಾಗಿಲ್ಲ, ನಾನು ಜ್ಞಾನಿಯೆಂಬ ಮಾತೂ ಇಲ್ಲ. ॥೫೧॥

ನಾನು ಎಂಬುದಿಲ್ಲ, ನಿತ್ಯನಾಗಿರುವೆನು ಎಂಬುದೂ ಇಲ್ಲ, ಕೇವಲ ಆತ್ಮಸ್ವರೂಪವೊಂದೇ ಇರುವುದು. ॥೫೨॥

ಮಾತಿನಿಂದ ಹೇಳುವುದೂ, ಮನಸ್ಸಿನಿಂದ ಯೋಚಿಸುವುದೂ ಇಲ್ಲ, ಎಲ್ಲವೂ ಬ್ರಹ್ಮವೇ. ॥೫೩॥

ಬುದ್ಧಿಯಿಂದ ನಿಶ್ಚಯಿಸುವಂತಹುದೂ, ಮನಸ್ಸಿನಿಂದ ತಿಳಿಯುವಂತಹುದೂ ಬ್ರಹ್ಮವಸ್ತುವಲ್ಲದೆ ಬೇರೆ ಇಲ್ಲ. ॥೫೪॥

ಜಾಗ್ರತ್ಸ್ವಪ್ನಸುಷುಪ್ತಂ ಚ ಸ್ವಪ್ನಂ ನಾಥ ತುರೀಯಕಂ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೫॥

ಯೋಗೇನ ಯುಜ್ಯತೇ ಯಚ್ಚ ಇಂದ್ರಿಯಾದ್ಯೈಶ್ಚ ಯತ್ಕೃತಂ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೬॥

ಸರ್ವಂ ನಾಸ್ತೀತಿ ವಿಜ್ಞೇಯಂ ಯದುಪಾಧಿವಿನಿಶ್ಚಿತಂ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೭॥

ಸ್ನಾನಾಚ್ಛುದ್ಧಿರ್ನ ಹಿ ಕ್ವಾಪಿ ಧ್ಯಾನಾಚ್ಛುದ್ಧಿರ್ನಹಿ ಕ್ವಚಿತ್।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೮॥

ಗುಣತ್ರಯಂ ನಾಸ್ತಿ ಕಿಂಚಿತ್ ಪುರತ್ರಯಮಥಾಪಿ ವಾ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೫೯॥

ಏಕದ್ವಿತ್ವಪದಂ ನಾಸ್ತಿ ನ ಬಹುಭ್ರಮವಿಭ್ರಮಃ।
ಕೇವಲಂ ಬ್ರಹ್ಮರೂಪತ್ವಾನ್ನಾಸ್ತಿ ನಾಸ್ತ್ಯೇವ ಸರ್ವದಾ ॥೬೦॥

---

ಯೋಗದಿಂದ ಪಡೆಯಬೇಕಾದುದೂ, ಇಂದ್ರಿಯಗಳಿಂದ ಅನುಭವಿಸಬೇಕಾದುದೂ ಬ್ರಹ್ಮವಸ್ತು ಹೊರತು ಬೇರೆ ಇಲ್ಲ. ॥೫೬॥

ಸ್ಥಾನಭೇದದಿಂದ, ಅವಸ್ಥಾಭೇದದಿಂದ, ರೂಪಭೇದದಿಂದ ತೋರುವಂತಹುದು ಯಾವುದೂ ಇಲ್ಲವು, ಬ್ರಹ್ಮವಸ್ತುವೊಂದೇ ಇರುವುದು. ॥೫೭॥

ಸ್ನಾನದಿಂದ ಶುದ್ಧಿಯಾಗಲಾರದು, ಧ್ಯಾನದಿಂದ ಶುದ್ಧಿಯಾಗಲಾರದು, ಅಂದರೆ ಸ್ನಾನಧ್ಯಾನಗಳೂ ಇಲ್ಲ, ಶುದ್ಧಿಯೂ ಇಲ್ಲ, ಆತ್ಮವೊಂದೇ ಇರುವುದು. ॥೫೮॥

ಸತ್ವ ರಜಸ್ಸು ತಮಸ್ಸುಗಳೆಂಬ ಮೂರು ಗುಣಗಳೂ ಇಲ್ಲ, ಆ ಗುಣಪ್ರಧಾನವಾದ ಸತ್ಯಲೋಕ ವೈಕುಂಠ ಕೈಲಾಸಗಳೂ ಇಲ್ಲ. ॥೫೯॥

ಒಂದು ಎರಡು–ಎಂಬ ಸಂಖ್ಯೆಯೂ ಇಲ್ಲ, ಸಂಖ್ಯಾವಾಚಕಪದವೂ ಇಲ್ಲ, ಇದರಂತೆ ಅನೇಕವೆಂಬ ಸಂಖ್ಯೆಯೂ ಇಲ್ಲ, ಬಹುವಚನಪದವೂ ಇಲ್ಲ. ॥೬೦॥

ಭ್ರಾಂತಿರ್ಭ್ರಾಂತಿ ರ್ನಚಾಸ್ತ್ಯೇವ ಕಿಂಚಿನ್ನಾಸ್ತೀತಿ ನಿಶ್ಚಿನು ।
ಕೇವಲಂ ಬ್ರಹ್ಮಮಾತ್ರತ್ವಾನ್ನ ಕಿಂಚಿದವಶಿಷ್ಯತೇ ॥೬೧॥

ಇದಂ ಶೃಣೋತಿ ಯಸ್ಸಮ್ಯಕ್ ಸ ಬ್ರಹ್ಮಾ ಭವತಿ ಸ್ವಯಂ ॥೬೨॥

॥ ಈಶ್ವರ ಉವಾಚ ॥

ವಾರಾಶ್ಯಂಬುನಿ ಬುದ್ಬುದಾ ಇವ ಘನಾ ನಂದಾಂಬುಧೌ ಮಯ್ಯುಮಾ
ಕಾಂತೇಽನಂತಜಗದ್ಗತಂ ಸುರನರಂ ಜಾತಂ ಚ ತಿರ್ಯಗ್ಜಮ್ಮೃಷಃ ।
ಭೂತಂ ಚಾಪಿ ಭವಿಷ್ಯತಿ ಪ್ರತಿಭವಂ ಮಾಯಾಮಯಂ ಚೋರ್ಮಿಜಂ
ಸಮ್ಯಙ್ಮಾಮನುಪಶ್ಯತಾಂ ಮನುಭವೈರ್ನಾಸ್ತ್ಯೇವ ತೇಷಾಂ ಭವಃ ॥೬೩॥

ಹರಂ ವಿಜ್ಞಾತಾರಂ ನಿಖಿಲತನುಕಾರ್ಯೇಷು ಕರಣಂ
ನ ಜಾನಂತೇ ಮೋಹಾದ್ಯಮಿತಕರಣಾ ಅಪ್ಯತಿತರಾಂ ।
ಉಮಾನಾಥಾಕಾರಂ ಹೃದಯದಹರಾಂತರ್ಗತಸರಃ
ಪಯೋಜಾತೇ ಭಾಸ್ವದ್ಭವಭುಜಗನಾಶಾಂಡಜವರಂ ॥೬೪॥

---

ಯಾವ ಭ್ರಾಂತಿಯೂ ಇಲ್ಲ, ವಿಜ್ಞಾನವೂ ಇಲ್ಲ, ಕೇವಲ ಬ್ರಹ್ಮವಸ್ತು ವೊಂದೇ ಇರುವುದರಿಂದ ಮಿಕ್ಕಾವ ವಸ್ತುವೂ ಇಲ್ಲ. ॥೬೧॥

ಈ ಆತ್ಮನಿರ್ಣಯವನ್ನು ಯಾವನು ಕೇಳಿ ತಿಳಿಯುವನೋ ಅನುಭವಿಸು ವನೋ ಅವನು ಬ್ರಹ್ಮನಾಗುವನು. ಸ್ವಸ್ವರೂಪಪ್ರಕಾಶವು ಅವನಿಗಾಗುವುದು. ॥೬೨॥

ಹೀಗೆಂದು ಈಶ್ವರನು ಕೊನೆಯಲ್ಲಿ ಈ ರೀತಿ ಹೇಳಿದನು—ಸಮುದ್ರದ ನೀರಿನಲ್ಲಿ ನೀರಿನಗುಳ್ಳೆಗಳೇಳುವಂತೆ ನನ್ನಲ್ಲಿ ಈ ದೇವಮಾನುಷ್ಯಾದಿರೂಪವಾದ ಜಗತ್ತು ಜನಿಸುವುದು. ಅಂದರೆ ಸುಳ್ಳಾಗಿ ತೋರಿ ಕ್ಷಣಮಾತ್ರದಲ್ಲಿ ಮಾಯವಾಗು ವುದು. ಮಾಯೆಯೆಂಬ ಅಲೆಗಳ ಹೊಡೆತದಿಂದ ಈ ಜಗತ್ತು ಪ್ರತಿ ಕಲ್ಪದಲ್ಲೂ ಜನಿಸಿ ನಶಿಸುವುದು, ಒಳ್ಳೆಯ ಆತ್ಮಾನುಭವದಿಂದ ನನ್ನನ್ನು ನೋಡುವವರಿಗೆ ಮಾತ್ರ ಈ ಅಸತ್ಯವಾದ ಜಗತ್ತು ತೋರುವುದೇ ಇಲ್ಲ, ॥೬೩॥

ಎಂತೆಂತಹ ಜಿತೇಂದ್ರಿಯರಾದ ಯೋಗಿಗಳೂ ಸಹ ಜ್ಞಾನಸ್ವರೂಪನಾದ,

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ಪಂಚಮೋಽಧ್ಯಾಯಃ

---

ತಮ್ಮ ಹೃದಯಕಮಲದಲ್ಲಿಯೇ ಪ್ರಕಾಶಮಾನನಾದ, ಪರಮೇಶ್ವರರೂಪನಾದ ಸಂಸಾರವೆಂಬ ಹಾವನ್ನು ನುಂಗುವ ಗರುಡನಾದ ನನ್ನನ್ನು ಸುಲಭವಾಗಿ ತಿಳಿಯಲಾರರು. ||೬೪||

ಶಿವರಹಸ್ಯದ ಆರನೆಯ ಅಂಶದಲ್ಲಿ ಐದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಷಷ್ಠೋಽಧ್ಯಾಯಃ

॥ ಈಶ್ವರ ಉವಾಚ ॥

ವ್ರತಾನಿ ಮಿಥ್ಯಾ ಭುವನಾನಿ ಮಿಥ್ಯಾ
ಭಾವಾದಿಮಿಥ್ಯಾ ಭವನಾನಿ ಮಿಥ್ಯಾ ।
ಭಯಂ ಚ ಮಿಥ್ಯಾ ಭರಣಾದಿ ಮಿಥ್ಯಾ
ಭುಕ್ತಂ ಚ ಮಿಥ್ಯಾ ಬಹುಬಂಧಮಿಥ್ಯಾ ॥೧॥

ವೇದಾಶ್ಚ ಮಿಥ್ಯಾ ವಚನಾನಿ ಮಿಥ್ಯಾ
ವಾಕ್ಯಾನಿ ಮಿಥ್ಯಾ ವಿವಿಧಾ ಚ ಮಿಥ್ಯಾ ।
ವಿಜ್ಞಾನಮಿಥ್ಯಾ ವಿಯದಾದಿ ಮಿಥ್ಯಾ
ವಿಧುಶ್ಚ ಮಿಥ್ಯಾ ವಿಷಯಾದಿ ಮಿಥ್ಯಾ ॥೨॥

---

## ಆರನೆಯ ಅಧ್ಯಾಯ

ಈಶ್ವರನು ಪಾರ್ವತಿಗೆ ಮತ್ತೆ ಈರೀತಿ ಉಪದೇಶಿಸಿದನು. ಎಲೌ ದೇವಿಯೇ, ವ್ರತಗಳು ಸುಳ್ಳು, ಲೋಕಗಳು ಸುಳ್ಳು, ಭಾವಗಳು ಸುಳ್ಳು, ಗೃಹಗಳು ಸುಳ್ಳು, ಭಯವು ಸುಳ್ಳು, ರಕ್ಷಣೆಯು ಸುಳ್ಳು, ಭೋಗಿಸುವುದು ಸುಳ್ಳು, ಬಂಧನವು ಸುಳ್ಳು. ॥೧॥

ವೇದಗಳು ಸುಳ್ಳು, ಮಾತುಗಳು ಸುಳ್ಳು, ವಾಕ್ಯಗಳು ಸುಳ್ಳು, ಪ್ರಕಾರಗಳು ಸುಳ್ಳು, ವಿಜ್ಞಾನವು ಸುಳ್ಳು, ಆಕಾಶಾದಿಗಳು ಸುಳ್ಳು, ಚಂದ್ರನು ಸುಳ್ಳು, ವಿಷಯಾದಿಗಳು ಸುಳ್ಳು. ॥೨॥

ಗುರುಶ್ಚ ಮಿಥ್ಯಾ[ಗುಣದೋಷಮಿಥ್ಯಾ
ಗುಹ್ಯಂ ಚ ಮಿಥ್ಯಾ ಗಣನಾ ಚ ಮಿಥ್ಯಾ ।
ಗತಿಶ್ಚ ಮಿಥ್ಯಾ ಗಮನಂ ಚ ಮಿಥ್ಯಾ
ಸರ್ವಂ ಚ ಮಿಥ್ಯಾ ಗದಿತಂ ಚ ಮಿಥ್ಯಾ ॥೩॥

ವೇದಾಃ ಶಾಸ್ತ್ರಂ ಪುರಾಣಂ ಚ ಕಾರ್ಯಂ ಕಾರಣಮೀಶ್ವರಃ ।
ಲೋಕೋ ಭೂತಂ ಜನಂ ಚೈವ ಸರ್ವಂ ಮಿಥ್ಯಾ ನ ಸಂಶಯಃ ॥೪॥

ಬಂಧೋ ಮೋಕ್ಷಸ್ಸುಖಂ ದುಃಖಂ ಧ್ಯಾನಂ ಚಿತ್ತಂ ಸುರಾಸುರಾಃ ।
ಗೌಣಂ ಮುಖ್ಯಂ ಪರಂ ಚಾನ್ಯತ್ಸರ್ವಂ ಮಿಥ್ಯಾ ನ ಸಂಶಯಃ ॥೫॥

ವಾಚಾ ವದತಿ ಯತ್ಕಿಂಚಿತ್ಸರ್ವಂ ಮಿಥ್ಯಾ ನ ಸಂಶಯಃ ।
ಸಂಕಲ್ಪಾತ್ಕಲ್ಪ್ಯತೇ ಯದ್ಯತ್ಸರ್ವಂ ಮಿಥ್ಯೇತಿ ನಿಶ್ಚಯಃ ॥೬॥

ಶ್ರೋತ್ರೇಣ ಶ್ರೂಯತೇ ಯದ್ಯದ್ಯನ್ನೇತ್ರೇಣ ನಿರೀಕ್ಷ್ಯತೇ ।
ನೇತ್ರಂ ಶ್ರೋತ್ರಂ ಗಾತ್ರಮೇವ ಸರ್ವಂ ಮಿಥ್ಯಾ ನ ಸಂಶಯಃ ॥೭॥

---

ಗುರುವು ಸುಳ್ಳು, ಗುರೂಪದೇಶವು ಸುಳ್ಳು, ಗುಣದೋಷಗಳು ಸುಳ್ಳು, ರಹಸ್ಯವು ಸುಳ್ಳು, ಗಣನೆಯು ಸುಳ್ಳು, ಗತಿಯು ಸುಳ್ಳು, ಗಮನವು ಸುಳ್ಳು, ಆತ್ಮನು ಹೊರತು ಎಲ್ಲವೂ ಸುಳ್ಳು. ॥೩॥

ವೇದಗಳು, ಶಾಸ್ತ್ರಗಳು, ಕಾರ್ಯ-ಕಾರಣ, ಲೋಕ, ಮಹಾಭೂತಗಳು, ಜನಗಳು, ಈಶ್ವರ—ಎನ್ನುವುದೆಲ್ಲವೂ ಸುಳ್ಳು, ಇದರಲ್ಲಿ ಸಂಶಯವಿಲ್ಲ. ॥೪॥

ಸಂಸಾರಬಂಧನ,-ಮೋಕ್ಷ, ಸುಖ-ದುಃಖ, ಧ್ಯಾನ, ಮನಸ್ಸು, ದೇವಾಸುರರು, ಪ್ರಧಾನ ಮತ್ತು ಅಪ್ರಧಾನ (ಅಂಗ)—ಎನ್ನುವುದೆಲ್ಲವೂ ಸುಳ್ಳು, ಇದರಲ್ಲಿ ಸಂಶಯವಿಲ್ಲ. ॥೫॥

ಮಾತಿನಿಂದಾಡುವುದೆಲ್ಲವೂ ಸುಳ್ಳು, ಮನಸ್ಸಿನಿಂದ ಕಲ್ಪಿಸುವುದೆಲ್ಲವೂ ಸುಳ್ಳು. ॥೬॥

ಕಿವಿಯಿಂದ ಕೇಳುವುದು, ಕಣ್ಣಿನಿಂದ ನೋಡುವುದು, ಶರೀರದಿಂದ ಮಾಡುವುದು,— ಇವೆಲ್ಲವೂ ಸುಳ್ಳು, ಕಿವಿಕಣ್ಣುದೇಹಗಳೂ ಸುಳ್ಳು, ಇದರಲ್ಲಿ ಸಂಶಯವಿಲ್ಲ. ॥೭॥

ಇದಮಿತ್ಯೇವ ನಿರ್ದಿಷ್ಟಮಿದಮಿತ್ಯೇವ ಕಲ್ಪಿತಂ ।
ಯದ್ಯದ್ವಸ್ತು ಪರಿಜ್ಞಾತುಂ ಸರ್ವಂ ಮಿಥ್ಯಾ ನ ಸಂಶಯಃ ॥೮॥

ಕ್ವಾಹಂ ಕಿಂ ತದಹಂ ಸೋಽಹಂ ಅನ್ಯೋಽ ವಾಚಯತೇ ನ ಹಿ ।
ಯದ್ಯತ್ಸಂಭಾವ್ಯತೇ ಲೋಕೇ ಸರ್ವಂ ಮಿಥ್ಯಾ ನ ಸಂಶಯಃ ॥೯॥

ಸರ್ವಾಭ್ಯಾಸ್ಯಂ ಸರ್ವಗೋಪ್ಯಂ ಸರ್ವಕಾರಣವಿಭ್ರಮಃ ।
ಸರ್ವಭೂತೇತಿವಾರ್ತಾ ಚ ಸರ್ವಂ ಮಿಥ್ಯಾ ನ ಸಂಶಯಃ ॥೧೦॥

ಸರ್ವಭೇದಪ್ರಭೇದೋ ವಾ ಸರ್ವಸಂಕಲ್ಪವಿಭ್ರಮಃ ।
ಸರ್ವದೋಷಪ್ರಭೇದಶ್ಚ ಸರ್ವಂ ಮಿಥ್ಯಾ ನ ಸಂಶಯಃ ॥೧೧॥

ರಕ್ಷಕೋ ವಿಷ್ಣುರಿತ್ಯಾದಿ ಬ್ರಹ್ಮಾ ಸೃಷ್ಟೇಸ್ತು ಕಾರಣಂ ।
ಸಂಹಾರೇ ಶಿವ ಇತ್ಯೇವಂ ಸರ್ವಂ ಮಿಥ್ಯಾ ನ ಸಂಶಯಃ ॥೧೨॥

ಸ್ನಾನಂ ಜಪಸ್ತಪೋಹೋಮಃ ಸ್ವಾಧ್ಯಾಯೋ ದೇವಪೂಜನಂ ।
ಮಂತ್ರಂ ಸ್ತೋತ್ರಂ ಚ ಸತ್ಸಂಗಃ ಸರ್ವಂ ಮಿಥ್ಯೇತಿ ನಿಶ್ಚಯಃ॥೧೩॥

---

"ಇದು" ಎಂದು ನಿರ್ದೇಶಿಸುವುದು, ಮತ್ತು "ಇದು" ಎಂದು ಕಲ್ಪಿಸಲ್ಪಡುವುದು, ಇವೆಲ್ಲವೂ ಸುಳ್ಳು, ॥೮॥

"ನಾನೆಲ್ಲಿ? ಏನು? ಅದು ನಾನು, ಅವನು ನಾನು"—ಎಂದು ಮೊದಲಾಗಿ ಕಲ್ಪಿಸಲ್ಪಡುವುದೆಲ್ಲವೂ ಸುಳ್ಳು. ॥೯॥

ಅಭ್ಯಾಸಮಾಡಬೇಕಾದುದೆಲ್ಲವೂ, ರಹಸ್ಯವೆನ್ನುವುದೆಲ್ಲವೂ, ಕಾರಣವೆನ್ನುವುದೆಲ್ಲವೂ, ಸುಳ್ಳು, ಆತ್ಮನೊಬ್ಬನೇ ಸತ್ಯ. ॥೧೦॥

ಎಲ್ಲ ಭೇದ ಮತ್ತು ಒಳಭೇದಗಳು, ಎಲ್ಲ ಸಂಕಲ್ಪಗಳು, ಎಲ್ಲ ದೋಷ ಮತ್ತು ಉಪದೋಷಗಳು--ಎನ್ನುವುದೆಲ್ಲವೂ ಸುಳ್ಳು. ॥೧೧॥

ಬ್ರಹ್ಮನು ಜಗತ್ತನ್ನು ಸೃಷ್ಟಿಸುವನು, ವಿಷ್ಣುವು ಪಾಲಿಸುವನು, ರುದ್ರನು ಸಂಹರಿಸುವನು, ಎನ್ನುವುದೆಲ್ಲವೂ ಸುಳ್ಳು. ॥೧೨॥

ಸ್ನಾನ, ಜಪ, ತಪಸ್ಸು, ಹೋಮ, ವೇದಾಧ್ಯಯನ, ದೇವಪೂಜೆ, ಮಂತ್ರ, ಸ್ತೋತ್ರ, ಸಜ್ಜನರ ಸಹವಾಸ ಎನ್ನುವುದೆಲ್ಲವೂ ಸುಳ್ಳು. ॥೧೩॥

ಸರ್ವಂ ಮಿಥ್ಯಾ ಜಗನ್ಮಿಥ್ಯಾ ಭೂತಂ ಭವ್ಯಂ ಭವತ್ತಥಾ ।
ನಾಸ್ತಿ ನಾಸ್ತಿ ವಿಭಾವೇನ ಸರ್ವಂ ಮಿಥ್ಯೇತಿ ಚೋಚ್ಯತೇ ॥೧೪॥

ಚಿತ್ತಭೇದೋ ಜಗದ್ಭೇದೋ ಹ್ಯವಿದ್ಯಾಯಾಶ್ಚ ಸಂಭವಃ ।
ಅನೇಕಕೋಟಿಬ್ರಹ್ಮಾಂಡಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೫॥

ಲೋಕತ್ರಯೇಷು ಸದ್ಭಾವೋ ಗುಣದೋಷಾದಿಜೃಂಭಣಂ ।
ಸರ್ವದೇಶಿಕವಾರ್ತೋಕ್ತಿಃ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೬॥

ಉತ್ಕೃಷ್ಟಂ ಚ ನಿಕೃಷ್ಟಂ ಚ ಉತ್ತಮಂ ಮಧ್ಯಮಂ ಚ ಯತ್ ।
ಓಂಕಾರಂ ಚಾಪ್ಯಕಾರಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೭॥

ಯದ್ಯಜ್ಜಗತಿ ದೃಶ್ಯಂತೇ ಯದ್ಯಜ್ಜಗತಿ ವೀಕ್ಷ್ಯತೇ ।
ಯದ್ಯಜ್ಜಗತಿ ವರ್ತಂತೇ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೮॥

---

ಎಲ್ಲವೂ ಎನ್ನುವುದೂ ಸುಳ್ಳು, ಜಗತ್ತು ಸುಳ್ಳು, ಭೂತ, ಭವಿಷ್ಯತ್, ವರ್ತಮಾನಗಳೆನ್ನುವುದೂ ಸುಳ್ಳು. ಆತ್ಮನು ಹೊರತಾಗಿ ಯಾವುದಕ್ಕೂ ಸತ್ತೆ (ಅಸ್ತಿತ್ವ) ಯಿಲ್ಲದುದರಿಂದ ಎಲ್ಲವೂ ಸುಳ್ಳು ಎನ್ನುವುದು ಸಿದ್ಧಾಂತವು. ॥೧೪॥

ಮನಸ್ಸಿನ ಭೇದದಿಂದ ಶರೀರಭೇದದಿಂದ ಆತ್ಮನಿಗೆ ನಾನಾಜೀವಭೇದವೂ, ಅನೇಕಬಗೆಯ ಜಗತ್ತಿನ ಭೇದವೂ ಅವಿದ್ಯೆ (ಅಜ್ಞಾನ)ಯಿಂದ ತೋರುತ್ತಲಿದೆ. ವಸ್ತುತಃ ಆ ಭೇದವು ಇಲ್ಲ. ಕಾಣಿಸುವ ಈ ಅನೇಕ ಕೋಟಿ ಬ್ರಹ್ಮಾಂಡವೆಲ್ಲವೂ ಬ್ರಹ್ಮವೇ, ಬ್ರಹ್ಮನ ಹೊರತಾಗಿ ಯಾವುದೂ ಇಲ್ಲ. ॥೧೫॥

ಈ ಜಗತ್ತಿನಲ್ಲಿ "ಇದೆ, ಇದೆ" ಎಂದು ತೋರುವ ವಸ್ತುವಿನ ಆ ಅಸ್ತಿತ್ವ (ಸತ್ತೆ)ವೆಲ್ಲವೂ, ಬ್ರಹ್ಮವೇ ಅಂದರೆ ಬ್ರಹ್ಮನ ಸದ್ರೂಪವೇ ಜಗತ್ತಿನಲ್ಲಿ ಇದೆ ಎಂಬುದಾಗಿ ವ್ಯವಹಾರವಿಷಯವಾಗಿರುವುದು. ಗುಣದೋಷಗಳು, ಅವುಗಳ ವೃದ್ಧಿಕ್ಷಯಗಳು ಗುರು ಎನ್ನುವುದು ಇವೆಲ್ಲವೂ ಬ್ರಹ್ಮವೇ ಹೊರತು ಬೇರೆಯಲ್ಲ. ॥೧೬॥

ಶ್ರೇಷ್ಠ–ಕನಿಷ್ಠ, ಉತ್ತಮ–ಮಧ್ಯಮಗಳೆಂಬುವೂ, ಓಂಕಾರವೂ, ಅಕಾರವೂ ಸಹ ಬ್ರಹ್ಮವೇ. ಎಲ್ಲವೂ ಬ್ರಹ್ಮವಸ್ತುವೇ ಎಂದು ತಿಳಿ. ॥೧೭॥

ಜಗತ್ತಿನಲ್ಲಿ ಕಣ್ಣಿಗೆ ಕಾಣಿಸುವುದಿಲ್ಲವು, ಕಿವಿಗೆ ಕೇಳಿಸುವುದೆಲ್ಲವು, ಇರುವುದೆಲ್ಲವೂ, ಬ್ರಹ್ಮವಸ್ತುವೇ. ॥೧೮॥

ಯೇನ ಕೇನಾಪಿ ನೀತಂ ಚ ಸರ್ವಂ ಬ್ರಹ್ಮೇತಿ ನಿಶ್ಚಿನು ॥೧೯॥

ಯತ್ರ ಯತ್ರ ಶುಭಂ ಕರ್ಮ ಯತ್ರ ಯತ್ರ ಚ ದುಷ್ಕೃತಂ ।
ಯದ್ಯತ್ಕರೋಷಿ ಸತ್ಯೇನ ಸರ್ವಂ ಮಿಥ್ಯೇತಿ ನಿಶ್ಚಿನು ॥೨೦॥

ಇದಂ ಸರ್ವಮಹಂ ಸರ್ವಂ ಸರ್ವಂ ಬ್ರಹ್ಮೇತಿ ನಿಶ್ಚಿನು ।
ಯತ್ಕಿಂಚಿತ್ಪ್ರತಿಭಾನಂ ಚ ಸರ್ವಂ ಮಿಥ್ಯೇತಿ ನಿಶ್ಚಿನು ॥೨೧॥

ಯೇನ ಕೇನಾಪಿ ಗದಿತಂ ಯೇನ ಕೇನಾಪಿ ಮೋಹಿತಂ ।
ಯೇನ ಕೇನಾಪಿ ಚ ಪ್ರೋಕ್ತಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೨॥

ಯತ್ರ ಕುತ್ರ ಜಲೇ ಸ್ನಾತಂ ಸರ್ವಂ ಬ್ರಹ್ಮೇತಿ ನಿಶ್ಚಿನು ॥೨೩॥

॥ ಋಭುರುವಾಚ ॥

ಪುನರ್ವಕ್ಷ್ಯೇ ರಹಸ್ಯಾನಾಂ ರಹಸ್ಯಂ ಪರಮಾದ್ಭುತಂ ।
ಶಂಕರೇಣ ಕುಮಾರಾಯ ಪ್ರೋಕ್ತಂ ಕೈಲಾಸಪರ್ವತೇ ॥೨೪॥

---

ಯಾರಾರು ಏನೇನು ತಂದರೂ ತಂದಿದ್ದರೂ ಅವೆಲ್ಲವು ಬ್ರಹ್ಮವಸ್ತುವೇ.॥೧೯॥

ಎಲ್ಲೆಲ್ಲಿ ಶುಭಕರ್ಮವು ನಡೆಯುವುದೋ, ಎಲ್ಲೆಲ್ಲಿ ಪಾಪಕರ್ಮವು ನಡೆಯುವುದೋ, ಸತ್ಯವಾದುದೆಂದು ಯಾವಾವುದನ್ನು ಮಾಡುವೆಯೋ ಅದೆಲ್ಲವೂ ಸುಳ್ಳು, ಅಸತ್ಯ. ॥೨೦॥

ಇದು ಎನ್ನುವಂತಹುದೆಲ್ಲವೂ ಬ್ರಹ್ಮವಸ್ತುವೇ ಎಂದು ತಿಳಿ. ಬ್ರಹ್ಮನು ಹೊರತಾಗಿ ತೋರುವ ಯಾವುದೊಂದು ಚಿಕ್ಕವಸ್ತುವೂ ಇಲ್ಲ ಎಂದು ನಿಶ್ಚಯ ಮಾಡಿಕೊ. ॥೨೧॥

ಯಾರಾರು ಹೇಳಿದರೂ, ಯಾರಾರು ಎಲ್ಲೆಲ್ಲಿ ಮೋಹಗೊಂಡರೂ, ಯಾರಾರು ಉಪದೇಶಿಸಿದರೂ ಆ ಹೇಳುವವನು, ಹೇಳುವಿಕೆ ಇದೆಲ್ಲವೂ ಬ್ರಹ್ಮವಸ್ತುವೇ.॥೨೨॥

ಯಾರಾರು ಏನೇನನ್ನು ದಾನಮಾಡಿದರೂ, ಯಾರಾರು ಏನೇನು ಮಾಡಿದರೂ, ಯಾರಾರು ಯಾವ ಯಾವ ನೀರಿನಲ್ಲಿ ಸ್ನಾನಮಾಡಿದರೂ, ಅದೆಲ್ಲವೂ ಬ್ರಹ್ಮವಸ್ತುವೇ ಎಂದು ತಿಳಿ. ॥೨೩॥

ಎಲೈ ನಿದಾಘನೇ, ಪುನಃ ನಿನಗೆ ಕೈಲಾಸಗಿರಿಯಲ್ಲಿ ಶಂಕರನು ಕುಮಾರಸ್ವಾಮಿಗೆ ಹೇಳಿದಂತಹ ಅತಿರಹಸ್ಯವಾದಂತಹ ವಿಷಯವನ್ನು ಈಗ ಹೇಳುವೆನು. ಶ್ರದ್ಧೆಯಿಂದ ಕೇಳು. ॥೨೪॥

ತನ್ಮಾತ್ರಮೇವ ಚಿನ್ಮಾತ್ರಂ ಅಖಂಡೈಕರಸಂ ಸದಾ ।
ಏಕವರ್ಜಿತಚಿನ್ಮಾತ್ರಂ ಸರ್ವಂ ಚಿನ್ಮಯಮೇವ ಹಿ ॥೨೫॥

ಇದಂ ಚ ಸರ್ವಂ ಚಿನ್ಮಾತ್ರಂ ಸರ್ವ ಚಿನ್ಮಯಮೇವ ಚ ।
ಆತ್ಮಾಭಾಸಂ ಚ ಚಿನ್ಮಾತ್ರಂ ಚಿನ್ಮಾತ್ರಾನ್ನಾಸ್ತಿ ಕಿಂಚನ ॥೨೬॥

ಸರ್ವಲೋಕಂ ಚ ಚಿನ್ಮಾತ್ರಂ ಸರ್ವಂ ಚಿನ್ಮಯ ಏವ ಹಿ ।
ತತ್ತ್ವಾ ಮತ್ತಾ ಚ ಚಿನ್ಮಾತ್ರಂ ಚಿನ್ಮಾತ್ರಾನ್ನಾಸ್ತಿ ಕಿಂ ಚನ ॥೨೭॥

---

ಆ ಪರಮಾತ್ಮವಸ್ತುವು ಪರಿಪೂರ್ಣಆನಂದಸ್ವರೂಪವು. ಕಲ್ಲುಸಕ್ಕರೆಯು ಹೇಗೆ ಒಳಗೂ ಹೊರಗೂ ಸಂಪೂರ್ಣವಾಗಿ ರಸಮಯವಾಗಿರುವುದೋ ಹಾಗೆ ಪರವಸ್ತುವೂ ಆನಂದಮಯವಾಗಿರುವುದು. ಆದರೆ ಕಲ್ಲುಸಕ್ಕರೆಯಂತೆ ಜಡವಾಗಿರದೆ ಜ್ಞಾನಸ್ವರೂಪವಾಗಿರುವುದು. ಅಂದರೆ ರಸಮಯವಾದ ಕಲ್ಲುಸಕ್ಕರೆಗೆ ತನ್ನ ರುಚಿಯನ್ನು ತಾನೇ ಆಸ್ವಾದಿಸುವ ಯೋಗ್ಯತೆಯಿರುವುದಾದರೆ ಹೇಗೋ ಹಾಗೆ ಪರವಸ್ತುವೂ ಆನಂದರೂಪವಾಗಿ ತನ್ನ ಆನಂದವನ್ನು ತಾನೇ ಅನುಭವಿಸುವುದು. ಇದಕ್ಕೇ ಆತ್ಮಾನಂದಚಿನ್ಮಯ ಎಂದು ಮೊದಲಾಗಿ ತಿಳಿದವರು ಹೇಳುವರು. ಆ ಜ್ಞಾನರೂಪವಾದ ಚಿನ್ಮಯರೂಪವೇ ಸಕಲ ಪ್ರಪಂಚವೂ ಆಗಿರುವುದು. ಅದು ಹೊರತು ಬೇರೆಯಿಲ್ಲ. ವಿಜ್ಞಾನವಾದಿಗಳು ಹೇಳುವಂತೆ ಜಗತ್ತು ಜ್ಞಾನಾಕಾರವೂ ಅಲ್ಲ. ॥೨೫॥

ಈ ಜಗತ್ತೆಲ್ಲವೂ ಚಿತ್‌ಸ್ವರೂಪವಾಗಿದೆ. ಚಿತ್-ಎಂದರೆ ಜ್ಞಾನವು. ಅಂದರೆ ಜ್ಞಾನಸ್ವರೂಪವಾದ ಪರಮಾತ್ಮಸ್ವರೂಪವಾಗಿದೆ. ಪರಮಾತ್ಮನ ಹೊರತು ಬೇರೆಯಿಲ್ಲ. ಆತ್ಮಜ್ಞಾನವೂ ಸಹ ಆತ್ಮಸ್ವರೂಪವೇ ಆಗಿದೆ. ಹೀಗೆ ಚಿತ್‌ಸ್ವರೂಪ ಕ್ಕಿಂತಲೂ ಬೇರೆಯೇನೂ ಇಲ್ಲವು. ॥೨೬॥

ಎಲ್ಲ ಲೋಕಗಳೂ ಚಿತ್‌ಸ್ವರೂಪವಾಗಿರುವುವು. ಪರಮಾತ್ಮನ ಜ್ಞಾನಾಂಶ ದಿಂದಲೇ ಅವಕ್ಕೆ ಪ್ರಕಾಶವು. ನೀನು, ನಾನು ಎಂಬ ಭಾವಗಳೂ ಚಿತ್‌ಸ್ವರೂಪ ವಾದವುಗಳು. ॥೨೭॥

ಆಕಾಶೋ ಭೂರ್ಜಲಂ ವಾಯುರಗ್ನಿರ್ಬ್ರಹ್ಮಾ ಹರಿಃ ಶಿವಃ ।
ಯತ್ಕಿಂಚಿದನ್ಯತ್ಕಿಂಚಿಚ್ಚ ಸರ್ವಂ ಚಿನ್ಮಯ ಏವ ಹಿ ॥೨೮॥

ಅಖಂಡೈಕರಸಂ ಸರ್ವಂ ಯದ್ಯಚ್ಚಿನ್ಮಾತ್ರಮೇವ ಹಿ ।
ಭೂತಂ ಭವ್ಯಂ ಚ ಚಿನ್ಮಾತ್ರಂ ಸರ್ವಂ ಚಿನ್ಮಯಮೇವ ಹಿ ॥೨೯॥

ದ್ರವ್ಯಂ ಕಾಲಂ ಚ ಚಿನ್ಮಾತ್ರಂ ಜ್ಞಾನಂ ಚಿನ್ಮಯಮೇವ ಚ ।
ಜ್ಞೇಯಂ ಜ್ಞಾತಾ ಚ ಚಿನ್ಮಾತ್ರಂ ಸರ್ವಂ ಚಿನ್ಮಯಮೇವ ಹಿ॥೩೦॥

ಸಂಭಾಷಣಂ ಚ ಚಿನ್ಮಾತ್ರಂ ವಾಕ್ಚ ಚಿನ್ಮಾತ್ರಮೇವ ಹಿ ।
ಅಸಚ್ಚ ಸಚ್ಚ ಚಿನ್ಮಾತ್ರಂ ಸರ್ವಂ ಚಿನ್ಮಯಮೇವ ಹಿ ॥೩೧॥

ಆದಿರಂತಂ ಚ ಚಿನ್ಮಾತ್ರಂ ಅಸ್ತಿಚೇಚ್ಚಿನ್ಮಯಂ ಸದಾ ।
ಬ್ರಹ್ಮಾ ಯದ್ಯಪಿ ಚಿನ್ಮಾತ್ರಂ ವಿಷ್ಣುಶ್ಚಿನ್ಮಾತ್ರಮೇವ ಹಿ ॥೩೨॥

---

ಆಕಾಶ, ಭೂಮಿ, ಜಲ, ವಾಯು, ಅಗ್ನಿ, ಬ್ರಹ್ಮ, ಹರಿ, ಶಿವ ಮೊದಲಾದುದೆಲ್ಲ ಪ್ರಪಂಚವೂ ಆ ಪರಮಾತ್ಮನ ಚಿತ್‌ಸ್ವರೂಪವೇ ಆಗಿರುವುದು. ॥೨೮॥

ಸರ್ವ-ಎಂದರೆ ಎಲ್ಲದೂ ಎಂಬ ಮಾತೂ ಪರಮಾತ್ಮನನ್ನೇ ಹೇಳುವುದು. ಎಲ್ಲದೂ ಪರಮಾತ್ಮನಾದುದರಿಂದ ಪರಮಾತ್ಮನು ಹೊರತು ಯಾವುದೂ ಇಲ್ಲದುದರಿಂದ ಸರ್ವವೂ ಜ್ಞಾನಸ್ವರೂಪವಾದ ಪರಮಾತ್ಮಸ್ವರೂಪವೇ. ಭೂತಭವಿಷ್ಯತ್ ವರ್ತಮಾನಗಳೆನ್ನುವಂತಹುದೆಲ್ಲವೂ ಚಿನ್ಮಯವಾದ ಪರಮಾತ್ಮನೇ. ॥೨೯॥

ದ್ರವ್ಯ, ಕಾಲ, ಜ್ಞಾನ, ಜ್ಞಾನವಿಷಯವಸ್ತು, ಜ್ಞಾತೃ, ಇವೆಲ್ಲವೂ ಚಿತ್‌ಸ್ವರೂಪವೇ. ॥೩೦॥

ವಾಕ್, ವಾಕ್ಕಿನಿಂದ ಮಾತನಾಡುವುದು. ಅಸತ್ತಾದವಸ್ತು, ಸತ್ತಾದವಸ್ತು ಇವೆಲ್ಲವೂ ಚಿತ್‌ಸ್ವರೂಪನಾದ ಪರಮಾತ್ಮನೇ ಆಗಿರುವುದು. ॥೩೧॥

ಆದಿಯೂ ಅಂತ್ಯವೂ ಚಿನ್ಮಯನಾದ ಪರಮಾತ್ಮನೇ. ಬ್ರಹ್ಮನೂ ವಿಷ್ಣುವೂ ಜ್ಞಾನಮೂರ್ತಿಯಾದ ಪರಮಾತ್ಮನೆ. "ಇದೆ" ಎನ್ನುವುದೆಲ್ಲವೂ ಪರಮಾತ್ಮನೇ. ॥೩೨॥

ರುದ್ರೋಽಪಿ ದೇವಾಶ್ಚಿನ್ಮಾತ್ರಂ ನರತಿರ್ಯಕ್ಸುರಾಸುರಂ ।
ಗುರುಶಿಷ್ಯಾದಿ ಚಿನ್ಮಾತ್ರಂ ಜ್ಞಾನಂ ಚಿನ್ಮಾತ್ರಮೇವ ಹಿ ॥೩೩॥

ದೃಗ್ದೃಶ್ಯಂ ಚಾಪಿ ಚಿನ್ಮಾತ್ರಂ ಜ್ಞಾತೃಜ್ಞೇಯಂ ಧ್ರುವಾಧ್ರುವಂ ।
ಸರ್ವಾಶ್ಚರ್ಯಂ ಚ ಚಿನ್ಮಾತ್ರಂ ದೇಹಂ ಚಿನ್ಮಾತ್ರಮೇವ ಹಿ ॥೩೪॥

ಲಿಂಗಂ ಚಾಪಿ ಚ ಚಿನ್ಮಾತ್ರಂ ಕಾರ್ಯಂ ಕಾರಣಮೇವ ಚ ।
ಮೂರ್ತಾಮೂರ್ತಂ ಚ ಚಿನ್ಮಾತ್ರಂ ಪಾಪಂ ಪುಣ್ಯಮಥಾಪಿ ವಾ ॥೩೫॥

ದ್ವೈತಾದ್ವೈತಂ ಚ ಚಿನ್ಮಾತ್ರಂ ವೇದಂ ವೇದಾಂತಮೇವ ಚ ।
ದಿಶೋಽಪಿ ವಿದಿಶಶ್ಚೈವ ಚಿನ್ಮಾತ್ರಂ ತಸ್ಯ ಪಾಲಕಾಃ ॥೩೬॥

ಚಿನ್ಮಾತ್ರಂ ವ್ಯವಹಾರಾದಿ ಭೂತಂ ಭವ್ಯಂ ಭವತ್ತಥಾ ।
ಚಿನ್ಮಾತ್ರಂ ನಾಮರೂಪಂ ಚ ಭೂತಾನಿ ಭುವನಾನಿ ಚ ॥೩೭॥

---

ರುದ್ರನೂ, ದೇವತೆಗಳೂ, ಮಾನವರೂ, ಮೂಗುಪ್ರಾಣಿಗಳೂ, ಗುರು-ಶಿಷ್ಯ ಮೊದಲಾದುದೂ ಜ್ಞಾನವೂ ಪರಮಾತ್ಮರೂಪವೇ. ॥೩೩॥

ದೃಷ್ಟಿಯೂ ನೋಟವೂ ಪರಮಾತ್ಮಸ್ವರೂಪವು. ತಿಳಿಯುವವನು— ತಿಳಿಯಲ್ಪಡುವವಸ್ತು, ನಿತ್ಯ-ಅನಿತ್ಯ, ಇವೂ ಪರಮಾತ್ಮಸ್ವರೂಪವು. ಆಶ್ಚರ್ಯವು ಪರಮಾತ್ಮವು, ದೇಹವೂ ಸಹ ಪರಮಾತ್ಮಸ್ವರೂಪವೇ ಅಂದರೆ ಪರಮಾತ್ಮನ ಹೊರತಾಗಿ ಯಾವುದೂ ಇಲ್ಲ. ॥೩೪॥

ವಸ್ತುವಿನ ಸ್ಥಿತಿಯನ್ನೂಹಿಸಲು ಸಾಧನವಾದ ಹೇತುಗಳು, ಕಾರ್ಯ-ಕಾರಣಗಳು, ವಿಗ್ರಹವುಳ್ಳ ಮನುಷ್ಯಾದಿಗಳು, ವಿಗ್ರಹವಿಲ್ಲದ ವಾಯು ಆಕಾಶಾದಿಗಳು, ಪಾಪ-ಪುಣ್ಯಗಳು ಇವೆಲ್ಲವೂ ಜ್ಞಾನಮೂರ್ತಿಯಾದ ಪರಮಾತ್ಮನ ರೂಪಗಳೇ. ॥೩೫॥

ದ್ವೈತ (ಭೇದ) ಅದ್ವೈತ (ಅಭೇದ) ವೇದವೇದಾಂತಗಳು, ದಿಕ್ಕುವಿದಿಕ್ಕುಗಳು, ದಿಕ್ಪಾಲಕರು—ಇವರೆಲ್ಲರೂ ಪರಮಾತ್ಮಸ್ವರೂಪವೇ, ಚಿತ್‌ಸ್ವರೂಪವೇ, ॥೩೬॥

ಭೂತಭವಿಷ್ಯದ್ವರ್ತಮಾನಗಳೂ ಅವುಗಳ ವ್ಯವಹಾರವೂ, ನಾಮರೂಪಗಳೂ, ಪ್ರಾಣಿಗಳೂ, ಮಹಾಭೂತಗಳೂ, ಲೋಕಗಳೂ ಇವೆಲ್ಲವೂ ಚಿತ್‌ಸ್ವರೂಪವೇ. ॥೩೭॥

ಚಿನ್ಮಾತ್ರಂ ಪ್ರಾಣ ಏವೇಹ ಚಿನ್ಮಾತ್ರಂ ಸರ್ವ ಇಂದ್ರಿಯಂ ।
ಚಿನ್ಮಾತ್ರಂ ಪಂಚಕೋಶಾದಿ ಚಿನ್ಮಾತ್ರಾನಂದಮುಚ್ಯತೇ ॥೩೮॥

ನಿತ್ಯಾನಿತ್ಯಂ ಚ ಚಿನ್ಮಾತ್ರಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಂ ನಾಸ್ತಿ ನಿತ್ಯಂ ಚ ಚಿನ್ಮಾತ್ರಂ ನಾಸ್ತಿಸತ್ಯಕಂ ॥೩೯॥

ಚಿನ್ಮಾತ್ರಮಪಿ ವೈರಾಗ್ಯಂ ಚಿನ್ಮಾತ್ರಕಮಿದಂ ಕಿಲ ।
ಆಧಾರಾದಿ ಹಿ ಚಿನ್ಮಾತ್ರಂ ಆಧೇಯಂ ಚ ಮುನೀಶ್ವರ ॥೪೦॥

ಯಚ್ಚ ಯಾವಚ್ಚ ಚಿನ್ಮಾತ್ರಂ ಯಚ್ಚಯಾವಚ್ಚ ದೃಶ್ಯತೇ ।
ಯಚ್ಚ ಯಾವಚ್ಚ ದೂರಸ್ಥಂ ಸರ್ವಂ ಚಿನ್ಮಾತ್ರಮೇವ ಚ ॥೪೧॥

ಯಚ್ಚ ಯಾವಚ್ಚ ಭೂತಾನಿ ಯಚ್ಚ ಯಾವಚ್ಚ ವಕ್ಷ್ಯತೇ ।
ಯಚ್ಚ ಯಾವಚ್ಚ ವೇದಾಂತಂ ಸರ್ವಂ ಚಿನ್ಮಾತ್ರಮೇವ ಹಿ ॥೪೨॥

ಚಿನ್ಮಾತ್ರಂ ನಾಸ್ತಿ ಬಂಧಂ ಚ ಚಿನ್ಮಾತ್ರಂ ನಾಸ್ತಿ ಮೋಕ್ಷಕಂ ।
ಚಿನ್ಮಾತ್ರಮೇವ ಸನ್ಮಾತ್ರಂ ಸತ್ಯಂ ಸತ್ಯಂ ಶಿವಂ ಸ್ಪೃಶೇ ॥೪೩॥

---

ಪ್ರಾಣವು ಚಿತ್‌ಸ್ವರೂಪವಾದುದು, ಇಂದ್ರಿಯಗಳು ಪರಮಾತ್ಮಸ್ವರೂಪವೇ, ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ— ಈ ಐದು ಕೋಶಗಳೂ, ಆನಂದವೂ, ಜ್ಞಾನಮೂರ್ತಿಯಾದ ಪರಮಾತ್ಮನ ಸ್ವರೂಪವೇ. ॥೩೮॥

ವೈರಾಗ್ಯವು ಚಿತ್‌ಸ್ವರೂಪವೇ, ಆಧಾರವು ಪರಮಾತ್ಮರೂಪವೇ. ಆಧಾರದಲ್ಲಿರುವ ವಸ್ತುವೂ ಚಿನ್ಮಯವೇ ಆಗಿರುವುದು. ॥೪೦॥

ಹತ್ತಿರದಲ್ಲಿ ಕಾಣುವ ವಸ್ತುವೆಲ್ಲವೂ ಪರಮಾತ್ಮವಸ್ತುವೇ. ದೂರದಲ್ಲಿ ಇರುವ ವಸ್ತುವೆಲ್ಲವೂ ಪರಮಾತ್ಮವಸ್ತುವೇ. ಪರವಸ್ತುವನ್ನು ಹೊರತು ಯಾವುದೂ ಇಲ್ಲ. ॥೪೧॥

ಪ್ರಾಣಿಗಳೆಲ್ಲವೂ, ಭೂತಗಳೆಲ್ಲವೂ, ಹೇಳುವುದೆಲ್ಲವೂ, ಚಿತ್‌ಸ್ವರೂಪವೇ. ವೇದಾಂತವೆಲ್ಲವೂ ಸಹ ಜ್ಞಾನಮೂರ್ತಿಯಾದ ಪರಮಾತ್ಮವಸ್ತುವೇ. ॥೪೨॥

ಬಂಧವಿಲ್ಲ ಎನ್ನುವುದೂ ಚಿತ್‌ಸ್ವರೂಪವೇ. ಮೋಕ್ಷವಿಲ್ಲ ಎನ್ನುವುದೂ ಚಿತ್‌ಸ್ವರೂಪವೇ. ಆದರೆ ಆ ಪರಶಿವವಸ್ತುವಿನ ಚಿದ್ರೂಪವೂ ಸಹ ಸದ್ರೂಪವೆ.

ಸರ್ವಂ ವೇದತ್ರಯಪ್ರೋಕ್ತಂ ಸರ್ವಂ ಚಿನ್ಮಯಮೇವ ಹಿ ।
ಶಿವಪ್ರೋಕ್ತಂ ಕುಮಾರಾಯ ತದೇತತ್ಕಥಿತಂ ತ್ವಯಿ ॥೪೪॥

ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೪೫॥

॥ ಸೂತ ಉವಾಚ ॥

ಈಶಾವಾಸ್ಯಾದಿಮಂತ್ರೈರ್ವರಗಗನತನೋಃ ಕ್ಷೇತ್ರವಾಸಾರ್ಥವಾದೈಃ
ತಲ್ಲಿಂಗಾಗಾರಮಧ್ಯಸ್ಥಿತಸುಮಹದೀಶಾನಲಿಂಗೇಷು ಪೂಜಾ ।
ಅಕ್ಲೇದ್ಯೇ ಚಾಭಿಷೇಕೋ ದಿಗ್ವಾಸಸೇ ವಾಸದಾನಂ ನೋ ಗಂಧ
ಪ್ರಾಣಹೀನೇ ರೂಪದೃಶ್ಯಾದಿಹೀನೇ ಗಂಧಪುಷ್ಪಾರ್ಪಣಾನಿ ॥೪೬॥

ಸ್ವಭಾಸೇ ದೀಪದಾನಂ ಸರ್ವಭಕ್ಷ್ಯೇ ಮಹೇಶೇ ನೈವೇದ್ಯಂ
ನಿತ್ಯತೃಪ್ತೇ ಸಕಲಭುವನಗೇ ಪ್ರಕ್ರಮೋವಾ ನಮಸ್ಯಾ ।

---

ಸತ್ಯಸ್ವರೂಪನಾದ ಪರಮಾತ್ಮನು ಹೊರತು ಬೇರೆಯಲ್ಲ, ಇದು ಸತ್ಯವು, ಶಿವನ ಆಣೆಯಾಗಿ ಹೇಳುವೆನು, ಇದು ಸತ್ಯವು. ॥೪೩॥

ಎಲೈ ನಿದಾಘನೇ, ಹೀಗೆ ಎಲ್ಲ ಚಿದ್ರೂಪವೆಂದು ವೇದಗಳೂ ಸಾರುತ್ತಿರುವುವು. ಇದನ್ನೇ ಶಿವನು ಕುಮಾರಸ್ವಾಮಿಗೆ ಹೇಳಿದನು. ಅದನ್ನೇ ನಿನಗೆ ನಾನು ಹೇಳಿರುವೆನು. ॥೪೪॥

ಈ ಆತ್ಮನಿರ್ಣಯವನ್ನು ಒಂದುಬಾರಿ ಕೇಳಿದರೂ ಅವನು ಬ್ರಹ್ಮನೇ ಆಗುವನು. ॥೪೫॥

“ ಈಶಾವಾಸ್ಯ ” ಮೊದಲಾದ ವೇದಾಂತವಾಕ್ಯಗಳಲ್ಲಿ ಹೇಳುವಂತೆ ಗಗನದ ಹಾಗೆ ಎಲ್ಲೆಡೆಯಲ್ಲೂ ವ್ಯಾಪಿಸಿರುವ ಆ ಪರಮಾತ್ಮನು ಕ್ಷೇತ್ರದೇವಾಲಯಗಳಲ್ಲಿ ಮಾತ್ರ ವಾಸಿಸುವೆನೆಂದು ಹೇಳುವುದೂ, ವಿಗ್ರಹವಿಲ್ಲದ ಆ ದೇವನನ್ನು ಲಿಂಗಗಳಲ್ಲಿ ಪೂಜಿಸುವುದು, ನೀರಿನಿಂದ ನೆನೆಯದ ಮಹಾರೂಪನಾದ ಅವನನ್ನು ಅಭಿಷೇಕಿಸುವುದು, ದಿಕ್ಕೇ ಬಟ್ಟೆಯಾದ ಆತನಿಗೆ ವಸ್ತ್ರಗಳನ್ನರ್ಪಿಸುವುದು, ಗಂಧಪ್ರಾಣಗಳಿಲ್ಲದೆ ಶರೀರವಿಲ್ಲದ ಆತನಿಗೆ ಗಂಧಪುಷ್ಪಾದಿಗಳನ್ನರ್ಪಿಸುವುದು, ಇದೆಲ್ಲವೂ ತಿಳಿವಳಿಕೆಯಿಲ್ಲದ ಕೆಲಸಗಳು. ॥೪೬॥

ಸ್ವಪ್ರಕಾಶನಾದ ಆ ದೇವನಿಗೆ ದೀಪವನ್ನು ದರ್ಶಿಸುವುದು, ಪ್ರಪಂಚವೇ ಭಕ್ಷ್ಯವಾಗಿ ಯಾವಾಗಲೂ ತೃಪ್ತನಾದ ಆತನಿಗೆ ನೈವೇದ್ಯವನ್ನರ್ಪಿಸುವುದು,

ಕುರ್ಯಾಂ ಕೇನಾಪಿ ಭಾವೈರ್ಮಮ ನಿಗಮಶಿರೋ ಭಾವ ಏವಪ್ರಮಾಣಂ ॥೪೭॥

ಅವಿಚ್ಛಿನ್ನೇ ಚ್ಛಿನ್ನೈಃ ಪರಿಕರವರ್ಯೈಃ ಪೂಜನಧಿಯಾ
ಭಜಂತ್ಯಜ್ಞಾಸ್ತಜ್ಞಾ ವಿಧಿವಿಹಿತಬುದ್ಧ್ಯಾ ಗತಧಿಯಃ ।
ತಥಾಪೀಶೋ ಭಾವೈರ್ಭಜತಿ ಭಜತಾಮಾತ್ಮಪದವೀಂ
ದದಾತೀಶೋ ವಿಶ್ವಂ ಭ್ರಮಯತಿ ಗತಜ್ಞಾಂಶ್ಚ ಕುರುತೇ ॥೪೮॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಷಷ್ಠೋಽಧ್ಯಾಯಃ

---

ಜಗತ್ತನ್ನೆಲ್ಲಾ ವ್ಯಾಪಿಸಿರುವ ಆ ದೇವನಿಗೆ ಪ್ರದಕ್ಷಿಣೆ ಬರುವುದು, ನಮಸ್ಕರಿಸುವುದು ಇದನ್ನೆಲ್ಲಾ ಮಾಡಲೇ ? ಇದು ಸರಿಯೇ ? ವೇದಾಂತವು ಹಾಗೆ ಹೇಳುವುದಿಲ್ಲ. ನನಗೆ ವೇದಾಂತವೇ ಪ್ರಮಾಣವು. ॥೪೭॥

ಪರಿಪೂರ್ಣನಾದ ಪರಮೇಶ್ವರನನ್ನು ತಾವು ತಿಳಿದವರೆಂದುಕೊಂಡಿರುವ ಮೂಢರು, ಪರಿಪೂರ್ಣವಲ್ಲದ ವಸ್ತುಗಳಿಂದ ಪೂಜಿಸುವರು. ವಿಧಿಗಳಿಂದಾರಾಧಿಸುವರು. ಆದರೂ ಈಶ್ವರನು ಭಕ್ತಿಯಿಂದ ಸೇವಿಸುವ ಆ ಮೂಢರಿಗೆ ಅವರ ಆರಾಧನೆಗೆ ಅನುಗುಣವಾದಂತಹ ಅಶಾಶ್ವತವಾದ ವರಗಳನ್ನೇ ಕೊಡುವನು, ಏಕೆಂದರೆ— ಮುಕ್ತಿಯನ್ನು ಪಡೆದು ಸ್ವಸ್ವರೂಪದಲ್ಲೋಲಾಡಲು ಅವರು ಯೋಗ್ಯರಾದವರಲ್ಲ. ಎಂದು ಋಭುಮುನಿಯು ನಿದಾಘಮುನಿಗೆ ತಿಳಿಯಪಡಿಸಿದನು. ॥೪೮॥

ಶಿವರಹಸ್ಯದ ಆರನೆಯ ಅಂಶದಲ್ಲಿ ಆರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಸಪ್ತಮೋಽಧ್ಯಾಯಃ

॥ ಋಭುರುವಾಚ ॥

ಅತ್ಯದ್ಭುತಂ ಪ್ರವಕ್ಷ್ಯಾಮಿ ಸರ್ವಲೋಕೇಷು ದುರ್ಲಭಂ ।
ವೇದಶಾಸ್ತ್ರೇ ಮಹಾಸಾರಂ ದುರ್ಲಭಂ ದುರ್ಲಭಂ ಸದಾ ॥೧॥

ಅಖಂಡೈಕರಸಂ ಮಂತ್ರಮಖಂಡೈಕರಸಂ ಫಲಂ ।
ಅಖಂಡೈಕರಸಂ ಜೀವಮಖಂಡೈಕರಸಂ ಕ್ರಿಯಾ ॥೨॥

---

## ಏಳನೆಯ ಅಧ್ಯಾಯ

ಎಲೈ ನಿದಾಘಮುನಿಯೆ, ಅತ್ಯಾಶ್ಚರ್ಯಕರವಾದ ಸರ್ವಲೋಕದಲ್ಲಿ ದುರ್ಲಭವಾದ ವೇದಶಾಸ್ತ್ರಗಳ ಸಾರವಾದ ಮಹಾತತ್ವವನ್ನು ಹೇಳುವೆನು. ॥೧॥

ಹಿಂದೆ ಪರಮಾತ್ಮನನ್ನು "ಜ್ಞಾನಮಾನಂದಂ ಬ್ರಹ್ಮ" ಎಂಬ ವೇದಾಂತ ವಾಕ್ಯಕ್ಕನುಸಾರವಾಗಿ ಜ್ಞಾನ (ಚಿತ್) ಸ್ವರೂಪವಾಗಿಯೂ ಬ್ರಹ್ಮಸ್ವರೂಪವಾಗಿಯೂ ವರ್ಣಿಸಿದುದಾಯ್ತು. "ರಸೋವೈಸಃ" ಮೊದಲಾದ ಶ್ರುತಿಗಳಿಗನುಸಾರವಾಗಿ ಅತ್ಮನನ್ನು ರಸ (ಆನಂದ)ಸ್ವರೂಪನಾಗಿ ವರ್ಣಿಸುವೆನು,— ಹೇಗೆಂದರೆ—ಮಂತ್ರವೆಲ್ಲವೂ ಪೂರ್ಣವಾದ ರಸಸ್ವರೂಪವು, ರಸವೆಂದರೆ ಇಲ್ಲಿ ಆನಂದರೂಪವಾದ ಪರಮಾತ್ಮ, ಮಂತ್ರದ ಫಲವೂ ಪೂರ್ಣಸ್ವರೂಪವು, ಜೀವನೂ ಪರಿಪೂರ್ಣರಸಸ್ವರೂಪನು, ಕಾರ್ಯಗಳೆಲ್ಲವೂ ಪರಿಪೂರ್ಣರಸಸ್ವರೂಪವಾದುವು. ॥೨॥

ಅಖಂಡೈಕರಸಂ ಬ್ರಹ್ಮ ಅಖಂಡೈಕರಸಂ ವ್ರತಂ ।
ಅಖಂಡೈಕರಸಂ ಭೂಮಿರಖಂಡೈಕರಸಂ ಜಲಂ ॥೩॥

ಅಖಂಡೈಕರಸಂ ಗಂಧಮಖಂಡೈಕರಸಂ ವಿಯತ್ ।
ಅಖಂಡೈಕರಸೋ ವಿಷ್ಣುರಖಂಡೈಕರಸಃ ಶಿವಃ ॥೪॥

ಅಖಂಡೈಕರಸಂ ಶಾಸ್ತ್ರಮಖಂಡೈಕರಸಂ ಶ್ರುತಿಃ ।
ಅಖಂಡೈಕರಸಂ ವಾಚ್ಯಮಖಂಡೈಕರಸಂ ಮಹಃ ॥೫॥

ಅಖಂಡೈಕರಸಂ ದೇಹಮಖಂಡೈಕರಸಂ ಮನಃ ।
ಅಖಂಡೈಕರಸಂ ಚಿತ್ತಮಖಂಡೈಕರಸಂ ಸುಖಂ ॥೬॥

ಅಖಂಡೈಕರಸಾ ವಿದ್ಯಾ ಅಖಂಡೈಕರಸೋಽವ್ಯಯಃ ।
ಅಖಂಡೈಕರಸಂ ನಿತ್ಯಮಖಂಡೈಕರಸಃ ಪರಃ ॥೭॥

---

ಬ್ರಹ್ಮವಸ್ತುವು ಪರಿಪೂರ್ಣರಸಸ್ವರೂಪವು, ವ್ರತಗಳು ಪೂರ್ಣರಸಸ್ವರೂಪಗಳು, ಭೂಮಿಜಲಗಳು ಪರಿಪೂರ್ಣವಾದ ರಸದ (ಆನಂದಾತ್ಮನು) ರೂಪಗಳು, ॥೩॥

ಗಂಧವು ಪೂರ್ಣಬ್ರಹ್ಮಸ್ವರೂಪವು, ಆಕಾಶವು ಪೂರ್ಣಬ್ರಹ್ಮವಸ್ತುವು, ವಿಷ್ಣುವೂ ಪೂರ್ಣಪರಮಾತ್ಮಸ್ವರೂಪನು, ಶಿವನೂ ಪೂರ್ಣಪರಮಾತ್ಮಸ್ವರೂಪನು, ॥೪॥

ಶಾಸ್ತ್ರವು ಪೂರ್ಣಬ್ರಹ್ಮಸ್ವರೂಪವು, ವೇದವು ಪೂರ್ಣರಸಸ್ವರೂಪವು, ವೇದಗಳ ವಿಷಯವೂ ಆನಂದಪೂರ್ಣ ಪರಮಾತ್ಮವಸ್ತುವು, ತೇಜಸ್ಸು ಪೂರ್ಣಪರಮಾತ್ಮರೂಪವು, ॥೫॥

ದೇಹವೂ, ಮನಸ್ಸೂ, ಚಿತ್ತವೂ, ಸುಖವೂ, ಸಹ ಪರಿಪೂರ್ಣರಸಸ್ವರೂಪವೇ, ॥೬॥

ವಿದ್ಯೆಯೂ ಪೂರ್ಣರಸ (ಆನಂದಬ್ರಹ್ಮ) ಸ್ವರೂಪವೇ, ಪರಿಪೂರ್ಣರಸಮೂರ್ತಿಯಾದ ಪರಮಾತ್ಮನು ನಾಶವಿಲ್ಲದವನು, ನಿತ್ಯನಾದವನು, ಅವನೇ ಪರಮೇಶ್ವರನು, ॥೭॥

ಅಖಂಡೈಕರಸಾತ್ಕಿಂಚಿದಖಂಡೈಕರಸಾದಹಂ ।
ಅಖಂಡೈಕರಸಂ ಸ್ಥೂಲಮಖಂಡೈಕರಸಂ ಜನಃ ॥೮॥

ಅಖಂಡೈಕರಸಂ ಸೂಕ್ಷ್ಮಮಖಂಡೈಕರಸಂ ದ್ವಯಂ ।
ಅಖಂಡೈಕರಸಂ ನಾಸ್ತಿ ಅಖಂಡೈಕರಸಂ ಬಲಂ ॥೯॥

ಅಖಂಡೈಕರಸಾದ್ವಿಶ್ವಮಖಂಡೈಕರಸಾದಣುಃ ।
ಅಖಂಡೈಕರಸೋ ನಾಸ್ತಿ ಅಖಂಡೈಕರಸಾದ್ಭವಾನ್ ॥೧೦॥

ಅಖಂಡೈಕರಸೋಽಹ್ಯೇವ ಅಖಂಡೈಕರಸಾದಿತಂ ।
ಅಖಂಡೈಕರಸಾಜ್ಜಾತಮಖಂಡೈಕರಸಾತ್ ಸ್ಥಿತಂ ॥೧೧॥

ಆಖಂಡೈಕರಸಂ ಲೀಲಾ ಅಖಂಡೈಕರಸಂ ಪಿತಾ ।
ಅಖಂಡೈಕರಸಾ ಭಕ್ತಾ ಅಖಂಡೈಕರಸಃ ಪತಿಃ ॥೧೨॥

---

ಪರಿಪೂರ್ಣಪರಮಾತ್ಮನಿಗಿಂತಲೂ ಬೇರೆಯಾದ ವಸ್ತುವೂ "ನಾನು" ಎಂಬುದೂ ಇಲ್ಲ. ಸ್ಥೂಲಸೂಕ್ಷ್ಮವೆಂಬುದೂ, ಮಾನವರೂ, ಪೂರ್ಣಪರಮಾತ್ಮ ವಸ್ತುಗಳೇ. ॥೮॥

"ಎರಡು" ಎಂಬ ಭೇದವೂ "ಇಲ್ಲ"ವೆಂಬ ಶೂನ್ಯವಾದವೂ ಬಲವೂ ಸಹ ಪರಿಪೂರ್ಣವಾದ ಪರಮಾತ್ಮನ ಸ್ವರೂಪವೇ, ॥೯॥

ಅತಿ ಚಿಕ್ಕದಾದಂತಹ, ಅತಿ ದೊಡ್ಡದಾದಂತಹ, ಜಗತ್ತೆಲ್ಲವೂ ಆ ಪೂರ್ಣ ವಸ್ತುವಿಗಿಂತ ಬೇರೆಯಾಗಿಲ್ಲ. ಆ ಪೂರ್ಣವಸ್ತುವಿನಿಂದ ಬೇರೆಯಾಗಿ ನೀನೂ ಇಲ್ಲ. ॥೧೦॥

ಹಿಂದೆ ಕಳೆದುದು, ಪಡೆದುದು, ಆದುದು, ಮುಂದಾಗುವುದು ಈಗಿರುವುದು, ಇವೆಲ್ಲವೂ ಆ ಪೂರ್ಣರಸಸ್ವರೂಪನಾದ ಪರಮಾತ್ಮನ ಸ್ವರೂಪವೇ. ॥೧೧॥

ಆಟವೆಲ್ಲವೂ ಆ ಪರಿಪೂರ್ಣಪರಮಾತ್ಮರೂಪವೇ. ತಂದೆಯು ಪರಮಾತ್ಮ ರೂಪವೇ. ಭಕ್ತರು ಪರಮಾತ್ಮರೂಪವೇ. ಒಡೆಯನೆಂಬವನೂ ಪೂರ್ಣರಸ ಸ್ವರೂಪನೇ. ॥೧೨॥

ಅಖಂಡೈಕರಸಾ ಮಾತಾ ಅಖಂಡೈಕರಸೋ ವಿರಾಟ್ ।
ಅಖಂಡೈಕರಸಂ ಗಾತ್ರಮಖಂಡೈಕರಸಃ ಶಿವಃ ॥೧೩॥

ಅಖಂಡೈಕರಸಂ ಘ್ರಾಣಮಖಂಡೈಕರಸಂ ಬಹಿಃ ।
ಅಖಂಡೈಕರಸಂ ಪೂರ್ಣಮಖಂಡೈಕರಸಾಮೃತಂ ॥೧೪॥

ಅಖಂಡೈಕರಸಂ ಶ್ರೋತ್ರಮಖಂಡೈಕರಸಂ ಗೃಹಂ ।
ಅಖಂಡೈಕರಸಂ ಗೋಪ್ಯಮಖಂಡೈಕರಸಃ ಶಿವಃ ॥೧೫॥

ಅಖಂಡೈಕರಸೋ ನಾಮ ಅಖಂಡೈಕರಸೋ ರವಿಃ ।
ಅಖಂಡೈಕರಸಃ ಸೋಮಃ ಅಖಂಡೈಕರಸೋ ಗುರುಃ ॥೧೬॥

ಅಖಂಡೈಕರಸಸ್ಸಾಕ್ಷಾದಖಂಡೈಕರಸಃ ಸುಹೃತ್ ।
ಅಖಂಡೈಕರಸಂ ಮಂತ್ರಮಖಂಡೈಕರಸೋ ಜಪಃ ॥೧೭॥

---

ಮಾತೆಯು ಪೂರ್ಣಪರಮಾತ್ಮರೂಪಳು. ವಿರಾಟ್‌ಪುರುಷನು ಪೂರ್ಣಪರಮಾತ್ಮನು. ಅವಯವಗಳು ಪರಮಾತ್ಮನು ಹೊರತು ಬೇರೆಯಲ್ಲ. ಶಿವನೂ ಪೂರ್ಣರಸಸ್ವರೂಪನು. ॥೧೩॥

ನಾಸಿಕವು ಪೂರ್ಣಪರಮಾತ್ಮರೂಪವು. ಹೊರಗು ಒಳಗು ಎಂಬುದೂ ಪೂರ್ಣಪರಮಾತ್ಮನೇ. ಪೂರ್ಣವೆಂಬುದೂ ಅಮೃತವೆಂಬುದೂ ಪೂರ್ಣಪರಮಾತ್ಮನೇ. ॥೧೪॥

ಕಿವಿಯು ಪೂರ್ಣಪರಮಾತ್ಮರೂಪವು. ಮನೆಯು ಪೂರ್ಣಪರಮಾತ್ಮರೂಪವೇ. ರಹಸ್ಯವೆಲ್ಲವೂ ಪೂರ್ಣಪರಮಾತ್ಮವಸ್ತುವೇ. ಶಿವನೂ ಪೂರ್ಣಾನಂದರೂಪನು. ॥೧೫॥

ಹೆಸರುಗಳೆಲ್ಲವೂ ಪೂರ್ಣಪರಮಾತ್ಮರೂಪವು, ಚಂದ್ರಸೂರ್ಯರೂ ಆನಂದಪ್ರಕಾಶಪೂರ್ಣಮೂರ್ತಿಯಾದ ಪರಮಾತ್ಮನ ಸ್ವರೂಪರು. ॥೧೬॥

ಪ್ರತ್ಯಕ್ಷವೆಂಬುದೂ ಪೂರ್ಣಪರಮಾತ್ಮವಸ್ತುವೇ, ಸ್ನೇಹಿತನೂ ಪೂರ್ಣಪರಮಾತ್ಮನೇ, ಮಂತ್ರಜಪವೂ ಪೂರ್ಣಪರಮಾತ್ಮಸ್ವರೂಪವೇ, ॥೧೭॥

ಅಖಂಡೈಕರಸಂ ಧ್ಯಾನಮಖಂಡೈಕರಸಂ ಪದಂ।
ಅಖಂಡೈಕರಸಂ ಗ್ರಾಹ್ಯಮಖಂಡೈಕರಸಂ ಮಹಾನ್ ॥೧೮॥

ಅಖಂಡೈಕರಸಂ ಜ್ಯೋತಿರಖಂಡೈಕರಸಂ ಪದಂ।
ಅಖಂಡೈಕರಸಂ ಭೋಜ್ಯಮಖಂಡೈಕರಸಂ ಹವಿಃ ॥೧೯॥

ಅಖಂಡೈಕರಸೋ ಹೋಮ ಅಖಂಡೈಕರಸೋ ಜಯಃ।
ಅಖಂಡೈಕರಸಃ ಸ್ವರ್ಗ ಅಖಂಡೈಕರಸಃ ಸ್ವಯಂ ॥೨೦॥

ಅಖಂಡೈಕರಸಾಕಾರಾದಸ್ಮನ್ನಾಸ್ತಿ ನಹಿ ಕ್ವಚಿತ್ ॥೨೧॥

॥ ಋಭುರುವಾಚ ॥

ಭೂಪ ಶೃಣು ಮಹಾಶ್ಚರ್ಯಂ ನಿತ್ಯಾನುಭವಸಂಪದಂ।
ದುರ್ಲಭಂ ದುರ್ಲಭಂ ಲೋಕೇ ಸರ್ವಲೋಕೇಷು ದುರ್ಲಭಂ॥೨೨॥

---

ಧ್ಯಾನವೂ ಸ್ಥಾನವೂ ಪೂರ್ಣಾನಂದರೂಪಿಪರಮಾತ್ಮಸ್ವರೂಪವೇ, ಒಳ್ಳೆಯದು ಎಂಬುದೂ ಪೂರ್ಣವಸ್ತುವೇ, ಮಹತ್ತಾದುದು ಪೂರ್ಣಪರಮಾತ್ಮವಸ್ತುವೇ ॥೧೮॥

ತೇಜಸ್ಸೆಲ್ಲವೂ ಪರಿಪೂರ್ಣಪರಮಾತ್ಮರೂಪವೇ, ಪರಮೇಶ್ವರನು ಪರಿಪೂರ್ಣಪರಮಾತ್ಮರೂಪನೇ, ಆಹಾರವೂ ಹವಿಸ್ಸೂ ಸಹ ಪರಿಪೂರ್ಣಪರಮಾತ್ಮರೂಪವೇ, ॥೧೯॥

ಹೋಮವು ಪೂರ್ಣವಾದಾತ್ಮಸ್ವರೂಪವು, ಜಯವು ಪೂರ್ಣಾತ್ಮಸ್ವರೂಪವು. ಸ್ವರ್ಗವು ಪರಿಪೂರ್ಣಪರಮಾತ್ಮಸ್ವರೂಪವು, ತಾನು ಎಂಬುದು ಪರಮಾತ್ಮಸ್ವರೂಪವೇ. ॥೨೦॥

ಇವೆಲ್ಲದರ ಒಟ್ಟು ಅಭಿಪ್ರಾಯವೇನೆಂದರೆ ಪರಿಪೂರ್ಣಾನಂದರೂಪವಾದ ಆತ್ಮನಿಗಿಂತ ಬೇರೆಯಾಗಿ ಯಾವ ವಸ್ತುವೂ ಎಲ್ಲಿಯೂ ಇಲ್ಲ. ॥೨೧॥

ಎಲೈ ರಾಜನೇ, (ಇಲ್ಲಿ ನಿದಾಘನಂತೆ ಶ್ರೋತೃವಾಗಿ ಬೇರೊಬ್ಬ ರಾಜನೂ ಇರುವನೆಂದು ತಿಳಿಯಬೇಕು) ಯಾವ ಲೋಕದಲ್ಲೂ ಸಿಗದಂತಹ ತನ್ನಲ್ಲಿಯೇ ತಾನಾಗಿ ಅನುಭವಿಸುವಂತಹ ನಿತ್ಯಾನುಭವ (ಆತ್ಮಾನುಭವ)ವನ್ನು ಹೇಳುವೆನು ಗಮನವಿಟ್ಟು ಶ್ರದ್ಧೆಯಿಂದ ಕೇಳು. ॥೨೨॥

ಅಹಮಸ್ಮಿ ಪರಂ ಚಾಸ್ಮಿ ಪ್ರಭಾಸ್ಮಿ ಪ್ರಭವೋಽಸ್ಮ್ಯಹಂ ।
ಸರ್ವರೂಪಗುರುಶ್ಚಾಸ್ಮಿ ಸರ್ವರೂಪೋಽಸ್ಮಿ ಸೋಽಸ್ಮ್ಯಹಂ ॥೨೩॥

ಅಹಮೇವಾಸ್ಮಿ ಶುದ್ಧೋಽಸ್ಮಿ ಬುದ್ಧೋಽಸ್ಮಿ ಪರಮೋಽಸ್ಮ್ಯಹಂ ।
ಅಹಮಸ್ಮಿ ಸದಾ ಸೋಽಸ್ಮಿ ಸತ್ಯೋಽಸ್ಮಿ ವಿಮಲೋಽಸ್ಮ್ಯಹಂ ॥೨೪॥

ಮಾನಾವಮಾನಹೀನೋಽಸ್ಮಿ ನಿರ್ಗುಣೋಽಸ್ಮಿ ಶಿವೋಽಸ್ಮ್ಯಹಂ ।
ದ್ವೈತಾದ್ವೈತ ವಿಹೀನೋಽಸ್ಮಿ ದ್ವಂದ್ವಹೀನೋಽಸ್ಮಿ ಸೋಽಸ್ಮ್ಯಹಂ॥೨೫॥

ವಿಜ್ಞಾನೋಽಸ್ಮಿ ವಿಶೇಷೋಽಸ್ಮಿ ಸಾಮ್ಯೋಽಸ್ಮಿ ಸಕಲೋಽಸ್ಮ್ಯಹಂ ।
ಶುಭೋಽಸ್ಮಿ ಶೋಕಹೀನೋಽಸ್ಮಿ ಚೈತನ್ಯೋಽಸ್ಮಿ ಸಮೋಽಸ್ಮ್ಯಹಂ॥೨೬॥

ಭಾವಾಭಾವವಿಹೀನೋಽಸ್ಮಿ ಭಾಷಾಹೀನೋಽಸ್ಮಿ ಭಾಸ್ಮ್ಯಹಂ ।
ಸದಾ ಸರ್ವವಿಹೀನೋಽಸ್ಮಿ ಸಾತ್ವಿಕೋಽಸ್ಮಿ ಸದಾಸ್ಮ್ಯಹಂ ॥೨೭॥

---

ನಾನು ಎನ್ನುವ ಜೀವನೂ ನಾನು, ಅವನು ಎನ್ನುವ ಪರಮೇಶ್ವರನೂ, ನಾನೇ, ಪ್ರಭೆಯು ನಾನು, ಜನ್ಮವು ನಾನು, ಎಲ್ಲ ರೂಪಗಳ ಗುರುವು ನಾನು, ಎಲ್ಲ ರೂಪಗಳುಳ್ಳವನು ನಾನು. ॥೨೩॥

ಪಾಪಗಳ ಸಂಬಂಧವಿಲ್ಲದವನು ನಾನು. ಜ್ಞಾನಸ್ವರೂಪನು. ನಾನು ಸರ್ವೋತ್ಕೃಷ್ಟನು. ಯಾವಾಗಲೂ ನಾನು ಪರಮಾತ್ಮನಾಗಿರುವೆನು, ನಿತ್ಯನು ನಿರ್ಮಲನು ನಾನು. ॥೨೪॥

ಮಾನ, ಅಪಮಾನಗಳಾಗಲಿ, ಮತ್ತಾವ ಸುಗುಣ ದುರ್ಗುಣಗಳಾಗಲಿ ನನ್ನಲ್ಲಿಲ್ಲ. ಜೀವಪರಮಾತ್ಮಭೇದವಾಗಲಿ, ಏಕತ್ವಬುದ್ಧಿಯಾಗಲಿ ನನ್ನಲ್ಲಿ ಕಾಣುವುದಿಲ್ಲ. ದ್ವಂದ್ವರಹಿತನಾದ ಮಂಗಳಸ್ವರೂಪನೇ ನಾನು. ॥೨೫॥

ವಿಜ್ಞಾನವು ನಾನು, ವಿಶೇಷವು ನಾನು, ಸಾದೃಶ್ಯವು ನಾನು, ಸಕಲವು ನಾನು, ಶುಭವು ನಾನು, ಶೋಕವಿಲ್ಲದವನು ನಾನು, ಚೈತನ್ಯವು ನಾನು, ಎಲ್ಲರಲ್ಲಿಯೂ ನಾನು ಒಂದೇ ಬಗೆಯಾಗಿ ಆತ್ಮ (ನಾನು ಎಂಬ) ರೂಪದಿಂದಿರುವೆನು. ॥೨೬॥

ಭಾವ (ಜನ್ಮ) ಅಭಾವ (ಮರಣ)ಗಳು ನನಗಿಲ್ಲ, ಭಾಷೆಯೂ ನನಗಿಲ್ಲ, ಕೇವಲ ಪ್ರಕಾಶರೂಪನು ನಾನು, ನನ್ನಲ್ಲಿ ಯಾವಾಗಲೂ ಏನೂ ಇಲ್ಲ, ಸಾತ್ವಿಕನು ನಾನು, ಯಾವಾಗಲೂ ಇರುವೆ. ॥೨೭॥

ತುಲ್ಯಾತುಲ್ಯವಿಹೀನೋಽಸ್ಮಿ ತುಚ್ಛಭಾವೋಽಪಿ ನಾಸ್ಮ್ಯಹಂ ।
ಶೂನ್ಯಾಶೂನ್ಯಪ್ರಭಾವೋಽಸ್ಮಿ ಶೋಭನೋಽಸ್ಮಿ ಮಹೋಽಸ್ಮ್ಯಹಂ॥೨೮॥

ಏಕಸಂಖ್ಯಾವಿಹೀನೋಽಸ್ಮಿ ಯತ್ಕಿಂಚಿನ್ನಾಸ್ತಿ ಸೋಽಸ್ಮ್ಯಹಂ ।
ನಾಹಮಸ್ಮಿ ನ ಚಾನ್ಯೋಽಸ್ಮಿ ದೇಹಾದಿರಹಿತೋಽಸ್ಮ್ಯಹಂ ॥೨೯॥

ನಾನಾತ್ಮಭೇದಹೀನೋಽಸ್ಮಿ ದ್ವಿಸಂಖ್ಯಾ ನಾಸ್ತಿ ನಾಸ್ಮ್ಯಹಂ ।
ಸದಸದ್ಭೇದಹೀನೋಽಸ್ಮಿ ಸಂಕಲ್ಪರಹಿತೋಽಸ್ಮ್ಯಹಂ ॥೩೦॥

ಆಶ್ರಯಾಶ್ರಯಹೀನೋಽಸ್ಮಿ ಆಧಾರರಹಿತೋಽಸ್ಮ್ಯಹಂ ।
ಬಂಧಮೋಕ್ಷವಿಹೀನೋಽಸ್ಮಿ ಶುದ್ಧಬ್ರಹ್ಮಾಸ್ಮಿ ಸೋಽಸ್ಮ್ಯಹಂ ॥೩೧॥

ಚಿತ್ತಾದಿಸರ್ವಹೀನೋಽಸ್ಮಿ ಪರಮೋಽಸ್ಮಿ ಪರೋಽಸ್ಮ್ಯಹಂ ।
ಸದಾ ವಿಚಾರರೂಪೋಽಸ್ಮಿ ನಿರ್ವಿಚಾರೋಽಸ್ಮಿ ಸೋಽಸ್ಮ್ಯಹಂ ॥೩೨॥

---

ಸಾದೃಶ್ಯ, ಅಸಾದೃಶ್ಯ-ಗಳು ನನಗಿಲ್ಲ, ಮೊಲದ ಕೊಂಬಿನಂತೆ ನಾನು ತುಚ್ಛ (ಅಸತ್ಯ)ನಲ್ಲ, ನನ್ನ ಪ್ರಭಾವವು ಶೂನ್ಯವೂ ಇಲ್ಲ, ಶೂನ್ಯವಲ್ಲದೆಯೂ ಇಲ್ಲ, ಮಂಗಳರೂಪನು ನಾನು, ಉತ್ಸವರೂಪನು ನಾನು. ॥೨೮॥

ಒಂದು ಎಂಬ ಸಂಖ್ಯೆಯು ನನ್ನಲ್ಲಿಲ್ಲ. ಸ್ವಲ್ಪವೆಂಬುದೂ ಪರಿಪೂರ್ಣನಾದ ನನ್ನಲ್ಲಿಲ್ಲ, ನಾನು ನಾನಲ್ಲ, ಬೇರೆಯವನೂ, ಅಲ್ಲ, ದೇಹಾದಿಗಳು ನನಗಿಲ್ಲ. ॥೨೯॥

ನನ್ನಿಂದ ಬೇರೆಯಾಗಿ ಅನೇಕ ಆತ್ಮಗಳಿಲ್ಲ, ಎರಡು ಎಂಬ ಸಂಖ್ಯೆಯು ನನ್ನಲ್ಲಿಲ್ಲ. ಒಳ್ಳೆಯದು-ಕೆಟ್ಟದು, ನಿಜ-ಸುಳ್ಳು, ಶರೀರಿ-ಅಶರೀರಿ—ಎಂಬ ಭೇದವು ನನ್ನಲ್ಲಿಲ್ಲ, ಯಾವ ಆಸೆಯೂ ನನಗಿಲ್ಲ. ॥೩೦॥

ನನ್ನನ್ನಾಶ್ರಯಿಸಿ ಯಾವ ವಸ್ತುವೂ ಇಲ್ಲ, ನಾನೂ ಯಾವುದನ್ನಾಶ್ರಯಿಸಿಯೂ ಇಲ್ಲ, ನನ್ನ ಹೊರತು ಆಶ್ರಯಾಶ್ರಯಿಭಾವವೇ ಇಲ್ಲ, ಸಂಸಾರಬಂಧನವು ಇಲ್ಲ ಮುಕ್ತಿಯೂ, ಇಲ್ಲ, ಯಾವುದೂ ಇಲ್ಲದ ಶುದ್ಧಬ್ರಹ್ಮನು ನಾನು. ॥೩೧॥

ಮನಸ್ಸು—ಮೊದಲಾದುದು ನನ್ನಲ್ಲಿಲ್ಲ. ಸರ್ವೋತ್ತಮನು ನಾನು, ಪರಮೇಶ್ವರನು ನಾನು, ಜ್ಞಾನಿಗಳು ಮಾಡುವ ವಿಚಾರವು ನಾನು, ಆದರೆ ಅದ್ವಿತೀಯನಾದ ಓರ್ವನೇ ಆದ ನನ್ನಲ್ಲಿ ಯಾವ ವಿಚಾರವೂ ಇಲ್ಲ. ಎರಡುವಸ್ತುವಿದ್ದರೆ ತಾನೆ

ಅಕಾರಾದಿಸ್ವರೂಪೋಸ್ಮಿ ಉಕಾರೋಸ್ಮಿ ಮುದೋಸ್ಮ್ಯಹಂ ।
ಧ್ಯಾತೃಧ್ಯಾನವಿಹೀನೋಸ್ಮಿ ಧ್ಯೇಯಹೀನೋಸ್ಮಿ ಸೋಸ್ಮ್ಯಹಂ ॥೩೩॥

ಪೂರ್ಣಾತ್ಪೂರ್ಣೋಽಸ್ಮಿ ಪುಣ್ಯೋಽಸ್ಮಿ ಸರ್ವಪೂರ್ಣೋಽಸ್ಮಿ ಸೋಸ್ಮ್ಯಹಂ ।
ಸರ್ವಾತೀತಸ್ವರೂಪೋಸ್ಮಿ ಪರಂಬ್ರಹ್ಮಾಸ್ಮಿ ಸೋಸ್ಮ್ಯಹಂ ॥೩೪॥

ಲಕ್ಷ್ಯಲಕ್ಷಣಹೀನೋಸ್ಮಿ ಲಯಹೀನೋಸ್ಮಿ ಸೋಸ್ಮ್ಯಹಂ ।
ಮಾತೃಮಾನವಿಹಿನೋಸ್ಮಿ ಮೇಯಹೀನೋಸ್ಮಿ ಸರ್ವದಾ ॥೩೫॥

ಸರ್ವಾತೀತಸ್ವರೂಪೋಸ್ಮಿ ಪರಂಬ್ರಹ್ಮಾಸ್ಮಿ ಸೋಸ್ಮ್ಯಹಂ ।
ಜಗತ್ಸರ್ವಂ ಚ ದೃಷ್ಟೋಽಸ್ಮಿ ನೇತ್ರಾದಿರಹಿತೋಸ್ಮ್ಯಹಂ ॥೩೬॥

---

ಸಂದೇಹದಿಂದ ವಿಚಾರ ಮಾಡಬಹುದು? ನಾನೊರ್ವನೇ ಆದುದರಿಂದ ಸಂದೇಹವೂ ಇಲ್ಲ ವಿಚಾರವೂ ಇಲ್ಲ. ॥೩೨॥

ಆಕಾರರೂಪನು ನಾನು, ಉಕಾರರೂಪನು ನಾನು, ಮಕಾರರೂಪನೂ ನಾನು, ಅಂದರೆ ಇವು (ಅ+ಉ+ಮ್) ಮೂರೂ ಸೇರಿದ ಓಮ್‌ಕಾರರೂಪನು ನಾನು, ಆದರೆ ಧ್ಯಾನವೂ ನನ್ನಲ್ಲಿಲ್ಲ, ಧ್ಯೇಯವಸ್ತುವೂ ನನ್ನ ಹೊರತಾಗಿ ಬೇರೆಯಿಲ್ಲ. ಧ್ಯೇಯವೆಂಬ ವಸ್ತುವೇ ಇಲ್ಲ. ॥೩೩॥

ಎಲ್ಲ ಪೂರ್ಣವಸ್ತುಗಳಿಗಿಂತಲೂ ಮಿಗಲಾದ ಪೂರ್ಣವಸ್ತುವು ನಾನು. ಎಲ್ಲೆಲ್ಲೂ ನಾನೇ ತುಂಬಿರುವೆನು. ಎಲ್ಲವನ್ನೂ ಹೊರತಾಗಿರುವೆನು. ಪರಬ್ರಹ್ಮ ವಸ್ತುವು ನಾನು. ॥೩೪॥

ಲಕ್ಷಣದಿಂದ ಗುರುತಿಸಲ್ಪಡುವವನು ನಾನಲ್ಲ. ನನ್ನಲ್ಲಾವ ಲಕ್ಷಣವೂ ಇಲ್ಲ. ನಾಶವು ನನಗಿಲ್ಲ. ಪ್ರಮಾಣವು ನನಗಿಲ್ಲ. ಪ್ರಮಾಣಿಸಿ ನನ್ನನ್ನು ತಿಳಿಯಲಸಾಧ್ಯವು. ಪ್ರಮಾಣಕ್ಕೆ ನಾನು ಸಿಲುಕುವವನೂ ಅಲ್ಲ. ಪ್ರಮಾಣಗಳು ವ್ಯಾಪಕನಾದ ನನ್ನವರೆಗೆ ಹರಿಯಲಾರವು. ॥೩೫॥

ಎಲ್ಲವನ್ನೂ ಮೀರಿದ, ಯಾವ ಕಟ್ಟಿಗೂ ಸಿಕ್ಕದ, ವ್ಯಾಪಕವಾದ ಸ್ವರೂಪವುಳ್ಳ ಪರಬ್ರಹ್ಮನು ನಾನು. ಜಗತ್ತೆಲ್ಲವನ್ನೂ ಜ್ಞಾನಮೂರ್ತಿಯಾದ ನಾನು ನೋಡುವೆನು. ಆದರೆ ನನಗೆ ಕಣ್ಣು ಮೊದಲಾದ ಯಾವ ಇಂದ್ರಿಯಗಳೂ ಇಲ್ಲ. ॥೩೬॥

ಪ್ರವೃದ್ಧೋಽಸ್ಮಿ ಪ್ರಬುದ್ಧೋಽಸ್ಮಿ ಪ್ರಯತೋಽಸ್ಮಿ ಪರೋಽಸ್ಮ್ಯಹಂ ।
ಸರ್ವೇಂದ್ರಿಯವಿಹೀನೋಽಸ್ಮಿ ಸರ್ವಕರ್ಮವಿಹಿತೋಽಸ್ಮ್ಯಹಂ ॥೩೭॥

ಸರ್ವವೇದಾಂತತೃಪ್ತೋಽಸ್ಮಿ ಸರ್ವದಾ ಸುಲಭೋಽಸ್ಮ್ಯಹಂ ।
ಮುದಾ ಮುದಿತಶೂನ್ಯೋಽಸ್ಮಿ ಸರ್ವಮೌನಫಲೋಽಸ್ಮ್ಯಹಂ ॥೩೮॥

ನಿತ್ಯಂ ಚಿನ್ಮಾತ್ರರೂಪೋಽಸ್ಮಿ ಸದಾ ಸಚ್ಚಿನ್ಮಯೋಽಸ್ಮ್ಯಹಂ ।
ಯತ್ಕಿಂಚಿದಪಿ ಹೀನೋಽಸ್ಮಿ ಸ್ವಲ್ಪಮಪ್ಯಪಿ ನಾಹಿತಂ ॥೩೯॥

ಹೃದಯಗ್ರಂಥಿಹೀನೋಽಸ್ಮಿ ಹೃದಯಾದ್ವ್ಯಾಪಕೋಽಸ್ಮ್ಯಹಂ ।
ಷಡ್ವಿಕಾರವಿಹೀನೋಽಸ್ಮಿ ಷಟ್ಕೋಶರಹಿತೋಽಸ್ಮ್ಯಹಂ ॥೪೦॥

ಅರಿಷಡ್ವರ್ಗಮುಕ್ತೋಽಸ್ಮಿ ಅಂತರಾದಂತರೋಽಸ್ಮ್ಯಹಂ ।
ಸರ್ವಚಿನ್ಮಾತ್ರರೂಪೋಽಸ್ಮಿ ಸಚ್ಚಿದಾನಂದಮಸ್ಮ್ಯಹಂ ॥೪೧॥

---

ಬೆಳೆದವನು ನಾನು. ತಿಳಿದವನು ನಾನು. ಯಾವ ಇಂದ್ರಿಯಗಳೂ ಕಾರ್ಯಗಳೂ ನನ್ನಲ್ಲಿಲ್ಲ. ಶರೀರವಿಲ್ಲದುದರಿಂದ ಇಂದ್ರಿಯಗಳೂ ಇಲ್ಲ. ಕಾರ್ಯವೂ ಇಲ್ಲ. ॥೩೭॥

ವೇದಾಂತಗಳಿಂದ ತೃಪ್ತನಾದ ಆತ್ಮಜ್ಞಾನಿಯು ನಾನು. ಎಲ್ಲೆಡೆಯಲ್ಲಿಯೂ ಇರುವವನಾದುದರಿಂದ ನಾನು ಎಲ್ಲರಿಗೂ ಸುಲಭನಾಗಿರುವೆನು. ಸಂತೋಷದಿಂದ ಓಲಾಡುವೆನು. ಧ್ಯಾನದಿಂದ ಪಡೆಯಲ್ಪಡತಕ್ಕವನು ನಾನು. ॥೩೮॥

ಸದಾ ನಾನು ಜ್ಞಾನಮೂರ್ತಿಯು. ಸತ್ಯಸ್ವರೂಪನು. ಆನಂದಮಯನು. ಆಕಾರವಿಲ್ಲದವನು. ನನ್ನಲ್ಲಿ ಕೆಡುಕೆಂಬುದು ಸ್ವಲ್ಪವೂ ಇಲ್ಲ. ॥೩೯॥

ಯಾವ ಕಾಮನೆ (ಆಸೆ) ಗಳೂ ನನಗಿಲ್ಲ. ಹೃದಯ (ಮನಸ್ಸು) ಕ್ಕಿಂತಲೂ ನಾನು ವ್ಯಾಪಕನು. ಜನನ, ಮರಣ, ವೃದ್ಧಿ, ಕ್ಷಯ, ಉಪಚಯ, ಪರಿಣಾಮ ಎಂಬ ಆರು ವಿಕಾರಗಳು ನನ್ನಲ್ಲಿಲ್ಲ. ಮತ್ತು ಆರು ಶರೀರಕೋಶಗಳೂ ನನ್ನಲ್ಲಿಲ್ಲ. ॥೪೦॥

ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ಶತ್ರುಗಳು ನನಗಿಲ್ಲ. ರಹಸ್ಯವಸ್ತುಗಳಲ್ಲಿ ಅತಿ ರಹಸ್ಯನು ನಾನು. ಸತ್ಯಸ್ವರೂಪನು ನಾನು. ಆನಂದಮೂರ್ತಿಯು ನಾನು. ॥೪೧॥

ಅಖಂಡಾಕಾರರೂಪೋಽಸ್ಮಿ ಅಖಂಡಾಕಾರಮಸ್ಮ್ಯಹಂ ।
ಪ್ರಪಂಚಚಿತ್ತರೂಪೋಽಸ್ಮಿ ಪ್ರಪಂಚರಹಿತೋಽಸ್ಮ್ಯಹಂ ॥೪೨॥

ನಾಸ್ತೀಹಾಸ್ತಿವಿಮುಕ್ತೋಽಸ್ಮಿ ನಕಾರರಹಿತೋಽಸ್ಮ್ಯಹಂ ।
ದೇಶಕಾಲವಿಹೀನೋಽಸ್ಮಿ ದಿಗಂಬರಸುಖೋಽಸ್ಮ್ಯಹಂ ॥೪೩॥

ಸರ್ವಪ್ರಕಾರರೂಪೋಽಸ್ಮಿ ಸದ್ಭಾಷಾವರ್ಜಿತೋಽಸ್ಮ್ಯಹಂ ।
ಕಾಲತ್ರಯವಿಮುಕ್ತೋಽಸ್ಮಿ ಕಾಮಾದಿರಹಿತೋಽಸ್ಮ್ಯಹಂ ॥೪೪॥

ಕಾಯಕಾಯಿವಿಮುಕ್ತೋಽಸ್ಮಿ ನಕಾರರಹಿತೋಽಸ್ಮ್ಯಹಂ ।
ಮುಕ್ತಿಹೀನೋಽಸ್ಮಿ ಮುಕ್ತೋಽಸ್ಮಿ ಮೋಕ್ಷಹೀನೋಽಸ್ಮ್ಯಹಂ ಸದಾ ॥೪೫॥

ಸತ್ಯಾಸತ್ಯವಿಹೀನೋಽಸ್ಮಿ ಗಮನಾರಹಿತೋಽಸ್ಮ್ಯಹಂ ।
ಗಂತವ್ಯದೇಹಹೀನೋಽಸ್ಮಿ ಗಮನಾರಹಿತೋಽಸ್ಮ್ಯಹಂ ॥೪೬॥

---

ಪೂರ್ಣವಾದ ಆತ್ಮಜ್ಞಾನಸ್ವರೂಪನು ನಾನು. ಆ ಜ್ಞಾನವಿಷಯವಾದ ಅಖಂಡ (ಪೂರ್ಣ) ವಸ್ತುವು ನಾನು. ಪ್ರಪಂಚಸ್ವರೂಪನು ನಾನು. ಆದರೆ ನನ್ನಲ್ಲಿ ಯಾವ ಪ್ರಪಂಚವೂ ಇಲ್ಲ. ॥೪೨॥

ಇಲ್ಲ-ಇದೆ ಎನ್ನುವ ವ್ಯವಹಾರವು ನನ್ನಲ್ಲಿಲ್ಲ. ನಾನು ಯಾವಾಗಲೂ ಇಲ್ಲ ಎನ್ನುವುದಿಲ್ಲ. ದೇಶಕಾಲಗಳು ನನ್ನಲ್ಲಿಲ್ಲ. ದಿಕ್ಕೇ ನನಗೆ ಬಟ್ಟೆಯು. ॥೪೩॥

ನನ್ನ ರೂಪವು ಎಲ್ಲ ಬಗೆಯದೂ ಆಗಿದೆ. ಸತ್ (ಇದೆ) ಎನ್ನುವ ಮಾತು ನನ್ನಲ್ಲಿಲ್ಲ. ಭೂತಭವಿಷ್ಯದ್ವರ್ತಮಾನಕಾಲಗಳು ನನ್ನಲ್ಲಿಲ್ಲ. ಕಾಮಕ್ರೋಧಾದಿಗಳು ನನ್ನಲ್ಲಿಲ್ಲ. ॥೪೪॥

ಶರೀರ ಮತ್ತು ಅವಯವಗಳು ನನಗಿಲ್ಲ. ನಕಾರವು ನನಗಿಲ್ಲ. ಆದರೆ ನಾನು ಸದಾ ಮುಕ್ತ (ಸಂಸಾರಸಂಬಂಧವಿಲ್ಲದವ)ನು. ॥೪೫॥

ನನ್ನಲ್ಲಿ ಸತ್ಯವೂ ಇಲ್ಲ. ಅಸತ್ಯವೂ ಇಲ್ಲ. ಸದಾ ನಾನು ಸತ್ (ಇದೆ ಎನ್ನುವುದರ ಭಾವ ಅಂದರೆ ಇರುವಿಕೆ) ರೂಪನು, ಸಂಚರಿಸುವಂತಹ ದೇಹವು ನನಗಿಲ್ಲ. ಆದರೂ ನಾನು ಎಲ್ಲೆಡೆಯಲ್ಲೂ ಸಂಚರಿಸುವೆನು. ॥೪೬॥

ಸರ್ವದಾ ಸ್ಮರರೂಪೋಸ್ಮಿ ಶಾಂತೋಸ್ಮಿ ಸುಹಿತೋಸ್ಮ್ಯಹಂ ।
ಏವಂ ಸ್ವಾನುಭವಂ ಪ್ರೋಕ್ತಂ ಏತತ್ಪ್ರಕರಣಂ ಮಹತ್ ॥೪೭॥

ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೪೮॥

ಪಿಂಡಾಂಡಸಂಭವ ಜಗದ್ಗತಖಂಡನೋದ್ಯ
ದ್ವೇತಂಡ ಶುಂಡಭ ಮಹಾಬಲ ಬಾಹುದಂಡ ।
ಬ್ರಹ್ಮೋರುಮುಂಡಕಲಿತಾಂಡಜವಾಹಬಾಣ
ಕೋದಂಡಭೂಧರಧರಂ ಭಜತಾಮಖಂಡಂ ॥೪೯॥

ವಿಶ್ವಾತ್ಮನ್ಯದ್ವಿತೀಯೇ ಭಗವತಿ ಗಿರಿಜಾನಾಯಕೇ ಕಾಶರೂಪೇ
ನೀರೂಪೇ ವಿಶ್ವರೂಪೇ ಗತದುರಿತಧಿಯಃ ಪ್ರಾಪ್ನುವಂತ್ಯಾತ್ಮಭಾವಂ ।
ಅನ್ಯೇ ಭೇದಧಿಯಃ ಶ್ರುತಿಪ್ರಕಥನೈರ್ವರ್ಣಾಶ್ರಮೋತ್ಥಶ್ರಮೈಃ
ಶಾಂತಾಃ ಶಾಂತಿವಿವರ್ಜಿತಾ ವಿಷಯಿಣೋ ದುಃಖಂ ಭಜಂತ್ಯನ್ವಹಂ ॥೫೦॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಸಪ್ತಮೋಽಧ್ಯಾಯಃ

---

ಯಾವಾಗಲೂ ನಾನು ಸ್ಮರಣೆಯ ರೂಪನು, ಶಾಂತನು ನಾನು, ಹಿತಕಾರಿಯೂ ಹಿತಸ್ವರೂಪನೂ ನಾನು, ಎಲೈ ಮುನಿಯೆ! ಹೀಗೆ ನನ್ನ(ಆತ್ಮ)ನು ಭವವನ್ನು ನಿನಗೆ ಈ ಪ್ರಕರಣದಲ್ಲಿ ವಿವರಿಸಿರುವೆನು. ॥೪೭॥

ಈ ಆತ್ಮಾನುಭವವನ್ನು ಕೇಳುವವನು ತಾನೇ ಬ್ರಹ್ಮನಾಗುವನು. ॥೪೮॥

ಬ್ರಹ್ಮಾಂಡವೆಲ್ಲವನ್ನೂ ಪ್ರಳಯಕಾಲದಲ್ಲಿ ಕ್ಷಣಮಾತ್ರದಲ್ಲಿ ಸಂಹರಿಸುವಂತಹ, ಮದ್ದಾನೆಯ ಸೊಂಡಿಲಿನಂತೆ ನೀಳವಾದ ಬಲಿಷ್ಠವಾದ ತೋಳುಗಳುಳ್ಳ, ಬ್ರಹ್ಮಕಪಾಲವನ್ನು ಧರಿಸಿರುವಂತಹ, ಹರಿಯೇ ಬಾಣವಾಗುಳ್ಳ, ಮೇರುಗಿರಿಯೇ ಧನುಸ್ಸಾಗುಳ್ಳ, ದೇವದೇವ(ಪರಶಿವ)ನನ್ನು ಅಖಂಡಪರಮಾತ್ಮರೂಪದಿಂದ ಭಜಿಸಿ. ॥೪೯॥

ಜಗನ್ಮಯನಾದ, ಅದ್ವಿತೀಯನಾದ, ಭಗವಂತನಾದ, ಪ್ರಕಾಶಸ್ವರೂಪನಾದ, ಆಕಾರವಿಲ್ಲದ, ಜಗನ್ಮಯನಾದ, ಗಿರಿಜಾಪತಿಯಾದ ಪರಮೇಶ್ವರನನ್ನು ಪಾಪವಿಲ್ಲ

ದಂತಹ ಪುಣ್ಯಾತ್ಮರು, ಆತ್ಮಭಾವವನ್ನು ತಾನೇ ಆ ಪರಮಾತ್ಮನೆಂಬ ಭಾವವನ್ನು ಹೊಂದುವರು. ಆದರೆ ಭೇದಬುದ್ಧಿಯುಳ್ಳವರಾಗಿ ಕೆಲವರು ವೇದಗಳಿಗೆ ಅಪಾರ್ಥ ಗಳನ್ನು ಕಲ್ಪಿಸುತ್ತಾ ವರ್ಣಾಶ್ರಮಗಳ ಭೇದಾಚಾರಗಳನ್ನು ವ್ಯರ್ಥವಾಗಿ ಅನುಸರಿ ಸುತ್ತಾ ವಿಷಯಸುಖಗಳಿಗಧೀನರಾಗಿ ಶಾಂತಿಯಿಲ್ಲದೆ ಬಳಲಿ ಬಳಲಿ ಸದಾ ದುಃಖ ವನ್ನನುಭವಿಸುವರು. ಎಂದು ಋಭುಮುನಿಯು ನಿದಾಘಮುನಿಗೆ ತಿಳಿಯ ಪಡಿಸಿದನು. ||೫೦||

ಶಿವರಹಸ್ಯದ ಆರನೆಯ ಅಂಶದಲ್ಲಿ ಏಳನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಅಷ್ಟಮೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಪ್ರಪಂಚಶೂನ್ಯತ್ವಂ ಶಶಶೃಂಗೇಣ ಸಮ್ಮಿತಂ ।
ದುರ್ಲಭಂ ಸರ್ವಲೋಕೇಷು ಸಾವಧಾನಮನಾಃ ಶೃಣು ॥೧॥

ಇದಂ ಪ್ರಪಂಚಂ ಯತ್ಕಿಂಚಿದ್ಯಃ ಶೃಣೋತಿ ಚ ಪಶ್ಯತಿ ।
ದೃಶ್ಯರೂಪಂ ಚ ದೃಗ್ರೂಪಂ ಸರ್ವಂ ಶಶವಿಷಾಣವತ್ ॥೨॥

ಭೂಮಿರಾಪೋಽನಲೋ ವಾಯುಃ ಖಂ ಮನೋಬುದ್ಧಿರೇವ ಚ ।
ಅಹಂಕಾರಶ್ಚ ತೇಜಶ್ಚ ಸರ್ವಂ ಶಶವಿಷಾಣವತ್ ॥೩॥

---

## ಎಂಟನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಪ್ರಪಂಚವು ಮೊಲದ ಕೊಂಬಿನಂತೆ ಯಾವಾಗಲೂ ಸುಳ್ಳು, ಎಂಬ ಗಹನವಾದ ವಿಷಯವನ್ನು ಹೇಳುವೆನು. ಶ್ರದ್ಧೆಯಿಟ್ಟು ಕೇಳು. ॥೧॥

ಪ್ರಪಂಚವು ಎರಡು ವಿಧವಾಗಿದೆ. ಒಂದು ಕಾಣುವಂತಹುದು. ಮತ್ತೊಂದು ಕೇಳುವಂತಹುದು (ಜೀವ) ಇವೆರಡುರೂಪವಾದ ಪ್ರಪಂಚವೂ ಸಹ ಮೊಲದ ಕೊಂಬಿನಂತೆ ಶೂನ್ಯವಾದುದು. ಅಂದರೆ ಸುಳ್ಳು. ॥೨॥

ಭೂಮಿ, ಜಲ, ತೇಜಸ್ಸು, ವಾಯು, ಆಕಾಶ, ಮನಸ್ಸು, ಬುದ್ಧಿ ಅಹಂಕಾರ ಇವೆಲ್ಲ ಮೊಲದ ಕೊಂಬಿನಂತೆ ಸುಳ್ಳು. ॥೩॥

ನಾಶಂ ಜನ್ಮ ಚ ಸತ್ಯಂ ಚ ಲೋಕಂ ಭುವನಮಂಡಲಂ ।
ಪುಣ್ಯಂ ಪಾಪಂ ಜಯೋ ಮೋಹಸ್ಸರ್ವಂ ಶಶವಿಷಾಣವತ್ ॥೪॥

ಕಾಮಕ್ರೋಧೌ ರಾಗಲೋಭೌ ಮದಮೋಹೌ ರತಿರ್ಧೃತಿಃ ।
ಗುರುಶಿಷ್ಯೋಪದೇಶಾದಿಸರ್ವಂ ಶಶವಿಷಾಣವತ್ ॥೫॥

ಅಹಂ ತ್ವಂ ಜಗದಿತ್ಯಾದಿ ಆದಿರಂತಿಮಮಧ್ಯಮಂ ।
ಭೂತಂ ಭವ್ಯಂ ವರ್ತಮಾನಂ ಸರ್ವಂ ಶಶವಿಷಾಣವತ್ ॥೬॥

ಸ್ಥೂಲದೇಹಂ ಸೂಕ್ಷ್ಮದೇಹಂ ಕಾರಣಂ ಕಾರ್ಯಮನ್ವಯಂ ।
ದೃಶ್ಯಂ ಚ ದರ್ಶನಂ ಕಿಂಚಿತ್ ಸರ್ವಂ ಶಶವಿಷಾಣವತ್ ॥೭॥

ಭೋಕ್ತಾ ಭೋಜ್ಯಂ ಭೋಗರೂಪಂ ಲಕ್ಷ್ಯಲಕ್ಷಣಮದ್ವಯಃ ।
ಶಮೋ ವಿಚಾರಸ್ಸಂತೋಷಃ ಸರ್ವಂ ಶಶವಿಷಾಣವತ್ ॥೮॥

---

ಜನನ, ಮರಣ, ಸತ್ಯ, ಲೋಕ, ಪುಣ್ಯ ಪಾಪ, ಜಯ, ಮೋಹ ಇವೂ ಮೊಲದ ಕೊಂಬಿನಂತೆ ಸುಳ್ಳು. ॥೪॥

ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯ, ಧೈರ್ಯ, ಕ್ರೀಡೆ, ಗುರು, ಶಿಷ್ಯ, ಉಪದೇಶ ಇವೆಲ್ಲವೂ ಮೊಲದ ಕೊಂಬಿನಂತೆ ಸುಳ್ಳು. ॥೫॥

ನಾನು, ನೀನು, ಜಗತ್ತು ; ಮೊದಲು, ನಡು, ಕೊನೆ ; ಭೂತ, ಭವಿಷ್ಯತ್ ವರ್ತಮಾನ ಮೊದಲಾದುದೆಲ್ಲವೂ ಮೊಲದ ಕೊಂಬಿನಂತೆ ಸುಳ್ಳು. ॥೬॥

ಸ್ಥೂಲಶರೀರ, ಸೂಕ್ಷ್ಮಶರೀರ, ಕಾರ್ಯ, ಕಾರಣ, ದೃಶ್ಯವಸ್ತು, ನೋಟ ಇವೆಲ್ಲವೂ ಸಹ ಮೊಲದ ಕೊಂಬಿನಂತೆ ಸುಳ್ಳಾದುವುಗಳು. ॥೭॥

ಅನುಭವಿಸುವವನು, ಭೋಗವಸ್ತು, ಭೋಗ, ಗುರಿ, ಲಕ್ಷಣ, ಇಂದ್ರಿಯ ನಿಗ್ರಹ, ವಿಮರ್ಶೆ, ಸಂತೋಷ ಇವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯ ವಾದುವುಗಳು. ॥೮॥

ಯಮಂ ಚ ನಿಯಮಂ ಚೈವ ಪ್ರಾಣಾಯಾಮಾದಿಭಾಷಣಂ ।
ಗಮನಂ ಚಲನಂ ಚಿತ್ತಂ ಸರ್ವಂ ಶಶವಿಷಾಣವತ್ ॥೯॥

ಶ್ರೋತ್ರಂ ನೇತ್ರಂ ಗಾತ್ರ ಗೋತ್ರಂ ಗುಹ್ಯಂ ಜಾಡ್ಯಂ ಹರಿಃ ಶಿವಃ ।
ಆದಿರಂತೋ ಮುಖಂ ಚೈವ ಸರ್ವಂ ಶಶವಿಷಾಣವತ್ ॥೧೦॥

ಜ್ಞಾನೇಂದ್ರಿಯಂ ಚ ತನ್ಮಾತ್ರಂ ಕರ್ಮೇಂದ್ರಿಯಗಣಂ ಚ ಯತ್ ।
ಜಾಗ್ರತ್ ಸ್ವಪ್ನಸುಷುಪ್ತ್ಯಾದಿ ಸರ್ವಂ ಶಶವಿಷಾಣವತ್ ॥೧೧॥

ಚತುರ್ವಿಂಶತಿತತ್ತ್ವಾನಿ ಸಾಧನಾನಾಂ ಚತುಷ್ಟಯಂ ।
ಸಜಾತೀಯಂ ವಿಜಾತೀಯಂ ಸರ್ವಂ ಶಶವಿಷಾಣವತ್ ॥೧೨॥

---

ಬಹಿರಿಂದ್ರಿಯನಿಗ್ರಹ, ನಿಯಮ, ಪ್ರಾಣಾಯಾಮಾದಿಗಳು, ಗಮನ, ಚಲನ, ಮನಸ್ಸು ಇವೆಲ್ಲವೂ ಸಹ ಮೊಲದ ಕೊಂಬಿನಂತೆ ಅಸತ್ಯವಾದವುಗಳು. ॥೯॥

ಕಿವಿ, ಕಣ್ಣು, ಮೈ, ಕುಲ, ಗುಟ್ಟು, ಜಡತನ, ಹರಿ, ಶಿವ, ಮೊದಲು ಕೊನೆ, ಬಾಯಿ ಇವೆಲ್ಲವೂ ಸಹ ಮೊಲದ ಕೊಂಬಿನಂತೆ ಅಸತ್ಯವಾದುವುಗಳು.॥೧೦॥

ಮನಸ್ಸು ಮೊದಲಾದ ಜ್ಞಾನೇಂದ್ರಿಯಗಳು, ಕೈ ಮೊದಲಾದ ಕರ್ಮೇಂದ್ರಿಯಗಳು, ಜಾಗ್ರತ್, ಸ್ವಪ್ನ, ಸುಷುಪ್ತಿ ಮೊದಲಾದ ಅವಸ್ಥೆಗಳು ಇವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದವುಗಳು. ॥೧೧॥

ಪ್ರಕೃತಿ, ಮಹತ್ತತ್ತ್ವ ಅಹಂಕಾರ, ಐದು ಸೂಕ್ಷ್ಮಭೂತಗಳು, ಮಹಾಭೂತಗಳೈದು, ಐದು ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳೈದು, ಮನಸ್ಸು, ಪುರುಷ, ಹೀಗೆ ಸಾಂಖ್ಯರು ಹೇಳುವ ಇಪ್ಪತ್ತೈದು (೨೫) ತತ್ತ್ವಗಳು, ಆತ್ಮಾನಾತ್ಮವಿವೇಕ, ವೈರಾಗ್ಯ, ಮೋಕ್ಷೇಚ್ಛೆ, ತಿತಿಕ್ಷೆ (ಸಹನೆ) ಈ ನಾಲ್ಕು ಸಾಧನಗಳು, ಒಂದೇ ಜಾತಿಯ ಸದೃಶವಸ್ತು ಸಾದೃಶ್ಯವಿಲ್ಲದ ಬೇರೆಜಾತಿಯವಸ್ತು ಎನ್ನುವುದೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುದು. ॥೧೨॥

ಸರ್ವಲೋಕಂ ಸರ್ವಭೂತಂ ಸರ್ವಧರ್ಮಸತತ್ವಕಂ ।
ಸರ್ವಾವಿದ್ಯಾ ಸರ್ವವಿದ್ಯಾ ಸರ್ವಂ ಶಶವಿಷಾಣವತ್ ॥೧೩॥

ಸರ್ವವರ್ಣಂ ಸರ್ವಜಾತಿಃ ಸರ್ವಕ್ಷೇತ್ರಂ ಚ ತೀರ್ಥಕಂ ।
ಸರ್ವವೇದಂ ಸರ್ವಶಾಸ್ತ್ರಂ ಸರ್ವಂ ಶಶವಿಷಾಣವತ್ ॥೧೪॥

ಸರ್ವಬಂಧಂ ಸರ್ವಮೋಕ್ಷಂ ಸರ್ವವಿಜ್ಞಾನಮೀಶ್ವರಃ ।
ಸರ್ವವಾಕ್ಯಂ ಸರ್ವಬೋಧ್ಯಂ ಸರ್ವಂ ಶಶವಿಷಾಣವತ್ ॥೧೫॥

ಸರ್ವಾಸ್ತಿತ್ವಂ ಸರ್ವಕರ್ಮಸರ್ವಸಂಗಯುತಿರ್ಮಹಾನ್ ।
ಸರ್ವದ್ವೈತಸ್ಯ ಸದ್ಭಾವಂ ಸರ್ವಂ ಶಶವಿಷಾಣವತ್ ॥೧೬॥

ಸರ್ವವೇದಾಂತಸಿದ್ಧಾಂತಃ ಸರ್ವಶಾಸ್ತ್ರಾರ್ಥನಿರ್ಣಯಂ ।
ಸರ್ವಜೀವತ್ವಸದ್ಭಾವಂ ಸರ್ವಂ ಶಶವಿಷಾಣವತ್ ॥೧೭॥

---

ಎಲ್ಲ ಲೋಕಗಳು, ಎಲ್ಲ ಪ್ರಾಣಿಗಳು, ಎಲ್ಲ ಧರ್ಮಗಳು, ಎಲ್ಲ ತತ್ವಗಳು ಅಜ್ಞಾನವೆಲ್ಲವೂ ಜ್ಞಾನವೆಲ್ಲವೂ ಸಹ ಮೊಲದ ಕೊಂಬಿನಂತೆ ಅಸತ್ಯವಾದವುಗಳು. ॥೧೩॥

ಎಲ್ಲ ವರ್ಣಗಳು, ಎಲ್ಲ ಜಾತಿಗಳು, ಎಲ್ಲ ಕ್ಷೇತ್ರಗಳು, ಎಲ್ಲ ತೀರ್ಥಗಳು, ಎಲ್ಲ ವೇದಗಳು, ಎಲ್ಲ ಶಾಸ್ತ್ರಗಳು—ಇವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯ ವಾದುವುಗಳು. ॥೧೪॥

ಬಂಧನವೆಲ್ಲವೂ, ಮೋಕ್ಷವೆಲ್ಲವೂ, ವಿಜ್ಞಾನವೆಲ್ಲವೂ, ಈಶ್ವರನೂ, ವಾಕ್ಯ ಗಳೆಲ್ಲವೂ, ವಾಕ್ಯಾರ್ಥಗಳೆಲ್ಲವೂ ಸಹ ಅಸತ್ಯವಾದುವುಗಳು. ॥೧೫॥

ಎಲ್ಲವೂ ಇದೆ ಎನ್ನುವುದು, ಕಾರ್ಯಗಳೆಲ್ಲವು, ಎಲ್ಲ ಸಂಬಂಧಗಳು, ಭೇದಗಳೆಲ್ಲವು—ಇವೆಲ್ಲವೂ ಸಹ ಮೊಲದ ಕೊಂಬಿನಂತೆ ಅಸತ್ಯವಾದವುಗಳು. ॥೧೬॥

ಎಲ್ಲ ವೇದಾಂತ ಸಿದ್ಧಾಂತಗಳು, ಎಲ್ಲ ಶಾಸ್ತ್ರಗಳ ನಿರ್ಣಯು, ಎಲ್ಲ ಜೀವ ಗಳು, ಪರಮಾತ್ಮನಿಗಿಂತ ಬೇರೆಯಾಗಿ ಇವೆ ಎನ್ನುವುದು,—ಇವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುವುಗಳು. ॥೧೭॥

ಯದ್ಯತ್ಸಂವೇದ್ಯತೇ ಕಿಂಚಿದ್ಯದ್ಯಜ್ಜಗತಿ ದೃಶ್ಯತೇ ।
ಯದ್ಯಚ್ಛೃಣೋತಿ ಗುರುಣಾ ಸರ್ವಂ ಶಶವಿಷಾಣವತ್ ॥೧೮॥

ಯದ್ಯಧ್ಯಾಯತಿ ಚಿತ್ತೇ ಚ ಯದ್ಯತ್ಸಂಕಲ್ಪ್ಯತೇ ಕ್ವಚಿತ್ ।
ಬುಧ್ಯಾ ನಿಶ್ಚೀಯತೇ ಯತ್ತತ್ಸರ್ವಂ ಶಶವಿಷಾಣವತ್ ॥೧೯॥

ಯದ್ಯದ್ವಾಚಾ ವ್ಯಾಕರೋತಿ ಯದ್ವಾಚಾ ಚಾರ್ಥಭಾಷಣಂ ।
ಯದ್ಯತ್ಸರ್ವೇಂದ್ರಿಯೈರ್ಭಾವ್ಯಂ ಸರ್ವಂ ಶಶವಿಷಾಣವತ್ ॥೨೦॥

ಯದ್ಯತ್ಸಂತ್ಯಜ್ಯತೇ ವಸ್ತು ಯಚ್ಛೃಣೋತಿ ಚ ಪಶ್ಯತಿ ।
ಸ್ವಕೀಯಮನ್ಯದೀಯಂ ವಾ ಸರ್ವಂ ಶಶವಿಷಾಣವತ್ ॥೨೧॥

ಸತ್ಯತ್ವೇನ ಚ ಯದ್ಭಾವಿ ವಸ್ತುತ್ವೇನ ರಸೇನ ಚ ।
ಯದ್ಯತ್ಸಂಕಲ್ಪ್ಯತೇ ಚಿತ್ತೇ ಸರ್ವಂ ಶಶವಿಷಾಣವತ್ ॥೨೨॥

---

ಜಗತ್ತಿನಲ್ಲಿ ತಿಳಿಯುವುದೆಲ್ಲವೂ, ಕಣ್ಣಿಗೆ ಕಾಣಿಸುವುದೆಲ್ಲವೂ, ಕೇಳಿಸುವುದೆಲ್ಲವೂ, ಗುರುಗಳು ಉಪದೇಶಿಸುವುದೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುವುಗಳು. ॥೧೮॥

ಮನಸ್ಸಿನಿಂದ ಯೋಚಿಸುವುದೆಲ್ಲವೂ, ಧ್ಯಾನಿಸುವುದೆಲ್ಲವೂ, ಅಪೇಕ್ಷಿಸುವುದೆಲ್ಲವೂ, ಬುದ್ಧಿಯಿಂದ ನಿಶ್ಚಯಿಸುವುದೆಲ್ಲವೂ, ಮೊಲದ ಕೊಂಬಿನಂತೆ ಸುಳ್ಳಾದುದು. ॥೧೯॥

ಮಾತಿನಿಂದ ವಿವರಿಸುವುದು, ಉಪನ್ಯಸಿಸುವುದು, ಇಲ್ಲ ಇಂದ್ರಿಯಗಳಿಂದ ಅನುಭವಿಸುವುದು—ಇವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುವುಗಳು. ॥೨೦॥

ತನ್ನದಾಗಲೀ ಪರರದಾಗಲೀ, ಅವಾವುದನ್ನು ಕೇಳುವನೋ ಅವಾವುದನ್ನು ನೋಡುವನೋ ಅವಾವುದನ್ನು ಬಿಡುವನೋ—ಅಂತಹ ವಸ್ತುವೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುದು. ॥೨೧॥

ಸತ್ಯವೆಂದು ತೋರುವುದೆಲ್ಲವೂ, ವಸ್ತುವೆಂದು ಕಾಣಿಸುವುದೆಲ್ಲವೂ, ಮನಸ್ಸಿಗೆ ಆನಂದವನ್ನುಂಟುಮಾಡುವುದೆಂದು ತೋರುವುದೆಲ್ಲವೂ, ಅಸತ್ಯವಾದುದು. ॥೨೨॥

ಯದ್ಯದಾತ್ಮೇತಿ ನಿರ್ಣೀತಂ ಯದ್ಯನ್ನಿತ್ಯಮಿತಂ ವಚಃ ।
ಯದ್ಯದ್ವಿಚಾರ್ಯತೇ ಚಿತ್ತೇ ಸರ್ವಂ ಶಶವಿಷಾಣವತ್ ॥೨೩॥

ಶಿವೋ ರಕ್ಷತಿ ಮಾಂ ನಿತ್ಯಂ ವಿಷ್ಣುಃ ಪಾತಿ ಜಗತ್ರಯಂ ।
ಸ್ರಷ್ಟಾ ಸೃಜತಿ ಲೋಕಾನ್ ವೈ ಸರ್ವಂ ಶಶವಿಷಾಣವತ್ ॥೨೪॥

ಜೀವ ಇತ್ಯಪಿ ಯದ್ಯಸ್ತಿ ಭಾಷಯತ್ಯಪಿ ಭಾಷಣಂ ।
ಸಂಸಾರ ಇತಿ ಯಾ ವಾರ್ತಾ ಸರ್ವಂ ಶಶವಿಷಾಣವತ್ ॥೨೫॥

ಯದ್ಯದಸ್ತಿ ಪುರಾಣೇಷು ಯದ್ಯದ್ವೇದೇಷು ನಿರ್ಣಯಃ ।
ಸರ್ವೋಪನಿಷದಾಂ ಭಾವಂ ಸರ್ವಂ ಶಶವಿಷಾಣವತ್ ॥೨೬॥

ಶಶಶೃಂಗವದೇವೇದಮುಕ್ತಂ ಪ್ರಕರಣಂ ತವ ।
ಯಃ ಶೃಣೋತಿ ರಹಸ್ಯಂ ವೈ ಬ್ರಹ್ಮೈವ ಭವತಿ ಸ್ವಯಂ ॥೨೭॥

---

ಆತ್ಮನೆಂದು ನಿರ್ಣಯಿಸುವುದೆಲ್ಲವೂ, ನಿತ್ಯವೆಂದು ಹೇಳುವುದೆಲ್ಲವೂ, ಮನಸ್ಸಿನಿಂದ ವಿಮರ್ಶಿಸುವುದೆಲ್ಲವೂ, ಮೊಲದ ಕೊಂಬಿನಂತೆ ಅಸತ್ಯವಾದುವು. ॥೨೩॥

ಶಿವನು ನನ್ನನ್ನು ಸದಾ ಸಲಹುವನು. ಹರಿಯು ಮೂರು ಲೋಕಗಳನ್ನೂ ಪಾಲಿಸುವನು. ಬ್ರಹ್ಮನು ಜಗತ್ತನ್ನು ಸೃಜಿಸುವನು ಎನ್ನುವುದೆಲ್ಲವೂ ಅಸತ್ಯವಾದುವು. ॥೨೪॥

ಜೀವನು ಇರುವನು ಎನ್ನುವುದೂ, ಭಾಷಣಮಾಡುತ್ತಾನೆ ಎನ್ನುವುದೂ, ಭಾಷಣವೂ, ಸಂಸಾರವೆಂಬುದೂ ಸಹ ಮೊಲದ ಕೊಂಬಿನಂತೆ ಅಸತ್ಯವಾದುವು. ॥೨೫॥

ಪುರಾಣಗಳಲ್ಲಿ ಹೇಳುವ ನಿರ್ಣಯಗಳೆಲ್ಲವೂ, ವೇದಗಳ ಸಿದ್ಧಾಂತಗಳೆಲ್ಲವೂ, ಉಪನಿಷತ್ತುಗಳ ಸಿದ್ಧಾಂತಗಳೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದುವುಗಳು. ॥೨೬॥

ಈ ಪ್ರಕರಣವೂ ಸಹ ಮೊಲದ ಕೊಂಬಿನಂತೆ ಅಸತ್ಯವಾದುದು. ಹೀಗೆ ಪ್ರಪಂಚದ ಅಸತ್ಯತೆಯನ್ನು ವಿವರಿಸುವ ಈ ಪ್ರಕರಣವನ್ನು ಕೇಳುವವನು ಬ್ರಹ್ಮನಾಗುವನು. ॥೨೭॥

ಭೂಯಃ ಶೃಣು ನಿದಾಘ ತ್ವಂ ಸರ್ವಂ ಬ್ರಹ್ಮೇತಿ ನಿಶ್ಚಯಂ ।
ಸುದುರ್ಲಭಮಿದಂ ನೃಣಾಂ ದೇವಾನಾಮಪಿ ಸತ್ತಮ ॥೨೮॥

ಇದಮಿತ್ಯಪಿ ಯದ್ರೂಪಮಹಮಿತ್ಯಪಿ ಯತ್ಪುನಃ ।
ದೃಶ್ಯತೇ ಯತ್ತದೇವೇದಂ ಸರ್ವಂ ಬ್ರಹ್ಮೇತಿ ಕೇವಲಂ ॥೨೯॥

ದೇಹೋಹಮಿತಿಸಂಕಲ್ಪಃ ತದೇವ ಭಯಮುಚ್ಯತೇ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೦॥

ದೇಹೋಹಮಿತಿ ಸಂಕಲ್ಪಸ್ತದಂತಃಕರಣಂ ಸ್ಮೃತಂ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೧॥

ದೇಹೋಹಮಿತಿ ಸಂಕಲ್ಪಃ ಸ ಹಿ ಸಂಸಾರಮುಚ್ಯತೇ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೨॥

---

ಎಲೈ ನಿದಾಘ, ಪುನಃ ನಿನಗೆ ಎಲ್ಲವೂ ಬ್ರಹ್ಮವೆಂಬ ನಿರ್ಣಯವನ್ನು ಹೇಳುವೆನು. ಈ ನಿರ್ಣಯವು ಮನುಷ್ಯರಿಗೂ ದೇವತೆಗಳಿಗೂ ದುರ್ಲಭವಾದುದು. ॥೨೮॥

"ಇದು" ಎಂಬ ರೂಪದಿಂದ, "ನಾನು" ಎಂಬ ರೂಪದಿಂದ ಕಾಣಿಸುವುದೆಲ್ಲವೂ ಸಹ ಬ್ರಹ್ಮವಸ್ತುವೇ ಆಗಿದೆ. ಬ್ರಹ್ಮವಸ್ತುವು ಹೊರತಾಗಿ ಬೇರೆಯಲ್ಲ. ॥೨೯॥

ಈ ದೇಹವೇ ನಾನು ಎನ್ನುವುದು ಭಯವು. ಏಕೆಂದರೆ ದೇಹಕ್ಕೆ ಸದಾ ಆಪತ್ತುಗಳು ಬರುತ್ತಿರುತ್ತವೆ. ಆದುದರಿಂದ ಯಾವಾಗಲೂ ದೇಹವು ಆತ್ಮವಲ್ಲ. ಆತ್ಮನು ಹೊರತಾಗಿ ದೇಹವು ಇಲ್ಲವೇ ಇಲ್ಲ. ॥೩೦॥

ದೇಹದಲ್ಲಿ ನಾನಿರುವೆನು—ಎನ್ನುವುದೂ ತಪ್ಪು, ಅದು ಮನಸ್ಸು ಮನಸ್ಸೇ ದೇಹದೊಳಗಿರುವುದು, ಹಾಗೆ ಸಂಕಲ್ಪಿಸುವುದೂ ಮನಸ್ಸೇ, ಆಮನಸ್ಸೆಂಬುದು ಯಾವಾಗಲೂ ಇಲ್ಲ. ಎಲ್ಲವು ಬ್ರಹ್ಮವಸ್ತುವೊಂದೋ. ॥೩೧॥

"ದೇಹವು ನಾನು" ಎನ್ನುವುದೇ ಸಂಸಾರ. ಸಂಸಾರವೆಂಬುದು ಯಾವಾಗಲೂ ಇಲ್ಲ. ಬ್ರಹ್ಮವಸ್ತುವೊಂದೇ ಸದಾ ಇರುವುದು. ॥೩೨॥

ದೇಹೋಽಹಮಿತಿ ಸಂಕಲ್ಪಸ್ತದ್ಬಂಧಮಿತಿ ಚೋಽಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೩॥

ದೇಹೋಽಹಮಿತಿ ಸಂಕಲ್ಪಸ್ತದ್ದುಃಖಮಿತಿ ನಿಶ್ಚಯಃ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೩೪॥

ದೇಹೋಽಹಮಿತಿ ಯದ್‌ಜ್ಞಾನಂ ಹೃದಯಗ್ರಂಥಿರೀರಿತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೫॥

ದೇಹೋಽಹಮಿತಿ ಯದ್ ಜ್ಞಾನಂ ತದೇವ ನರಕಂ ಸ್ಮೃತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೬॥

ದೇಹೋಽಹಮಿತಿ ಯದ್‌ಜ್ಞಾನಂ ಜಗತ್ಸರ್ವಮಿತೀರ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೭॥

---

"ದೇಹವು ನಾನು" ಎಂಬುದೇ ಬಂಧನವು, ದೇಹಕ್ಕೆ ಜನನ, ಮರಣ ಜರಾ, ವ್ಯಾಧಿಗಳ ಬಂಧನವಿದೆ, ಅಂತಹ ಬಂಧನವು ಯಾವಾಗಲೂ ಇಲ್ಲದುದು. ಬ್ರಹ್ಮವಸ್ತುವೊಂದೇ, ಇರುವುದು ಎಲ್ಲವೂ ಬ್ರಹ್ಮವಸ್ತುವೇ. ॥೩೩॥

"ದೇಹವೇ ನಾನು" ಎನ್ನುವುದೇ ದುಃಖವು. ಎಲ್ಲದುಃಖಕ್ಕೂ ದೇಹವೇ ಆಗರವಾಗಿದೆ, ಅಂತಹ ದುಃಖವೆಂಬುದು ಯಾವಾಗಲೂ ಇಲ್ಲ. ಎಲ್ಲವೂ ಬ್ರಹ್ಮವೇ. ॥೩೪॥

"ದೇಹವು ನಾನು" ಎಂಬುದೇ ಹೃದಯದ ಗ್ರಂಥಿಯು. ಅಂದರೆ ಅಜ್ಞಾನವು ಅಜ್ಞಾನವೆಂಬುದು ಯಾವಾಗಲೂ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೩೫॥

"ದೇಹವು ನಾನು" ಎನ್ನುವುದೇ ನರಕ, ನರಕದಂತೆ ದೇಹವು ಯಾತನೆಗಳ ಮನೆಯಾಗಿದೆ, ಆ ನರಕವೆಂಬುದೂ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ॥೩೬॥

"ದೇಹವೇ ನಾನು"ಎನ್ನುವುದೇ ಜಗತ್ತು ಜಗತ್ತೆಲ್ಲವೂ ನಾನು ಎನ್ನುವುದರ ಮೇಲೆ ನಿಂತಿದೆ, ಅದಿಲ್ಲದ ಮರುಕ್ಷಣ ಜಗತ್ತೇ ಇಲ್ಲ, ಆದುದರಿಂದ ಆ ಜಗತ್ತು ಯಾವಾಗಲೂ ಇಲ್ಲ, ಬ್ರಹ್ಮವೊಂದೇ ಇರುವುದು. ॥೩೭॥

ದೇಹತ್ರಯೇಽಪಿ ಭಾವಂ ಯತ್ತದ್ದೇಹಜ್ಞಾನಮುಚ್ಯತೇ ।
ಕಾಲತ್ರಯೇಽಪಿ ಭಾವಂ ಯತ್ತದ್ದೇಹಜ್ಞಾನಮುಚ್ಯತೇ ॥೩೮॥

ದೇಹೋಽಹಮಿತಿ ಯದ್ಭಾವಂ ಸದಸದ್ಭಾವಮೇವ ಚ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೩೯॥

ದೇಹೋಽಹಮಿತಿ ಸಂಕಲ್ಪಸ್ತತ್ಪ್ರಪಂಚಮಿಹೋಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿಸರ್ವಂ ಬ್ರಹ್ಮೇತಿ ಕೇವಲಂ ॥೪೦॥

ದೇಹೋಽಹಮಿತಿ ಯದ್ಭಾವಂ ತದೇವಾಜ್ಞಾನಮುಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೪೧॥

---

"ಆ ನಾನು" ಎಂಬ ಜ್ಞಾನವು ಸ್ಥೂಲ ಸೂಕ್ಷ್ಮ ಕಾರಣ ಶರೀರಗಳ ಮೂರರ ಜ್ಞಾನವಾಗಿರುವುದು, ಅಂತಹ ಶರೀರಗಳೂ ಆ ಜ್ಞಾನವೂ ಸಹ ಯಾವಾಗಲೂ ಇಲ್ಲ. ॥೩೮॥

"ದೇಹವು ನಾನು" ಎಂಬ ಜ್ಞಾನವು ಸತ್ಯವೂ ಅಲ್ಲ ಅಸತ್ಯವೂ ಅಲ್ಲ, ವ್ಯಾವಹಾರಿಕಸತ್ತೆಯು ಅದರಲ್ಲಿರುವುದು, ಅಂತಹ ವ್ಯಾವಹಾರಿಕೆಯ ಸತ್ತೆಯು ಯಾವಾಗಲೂ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೩೯॥

"ದೇಹವು ನಾನು" ಎನ್ನುವುದೇ ಪ್ರಪಂಚವು, ಆ ಪ್ರಪಂಚವು ಮೂರುಕಾಲಗಳಲ್ಲೂ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ॥೪೦॥

"ದೇಹವು ನಾನು" ಎನ್ನುವುದು, ಅಂದರೆ "ನಾನು ಬರುತ್ತೇನೆ, ಹೋಗುತ್ತೇನೆ" ಎನ್ನುವಲ್ಲಿ ಬರುವುದೂ ಹೋಗುವುದೂ ದೇಹವೇ, ಆತ್ಮನಲ್ಲ, ಆದುದರಿಂದ ನಾನು ಬರುತ್ತೇನೆ—ಎಂದು ಮೊದಲಾದ ದೇಹಾತ್ಮಜ್ಞಾನವು ಅಜ್ಞಾನವೇ, ಆ ಅಜ್ಞಾನವು ಯಾವಾಗಲೂ ಇಲ್ಲ, ಆ ರೀತಿ ವ್ಯವಹರಿಸುವುದು ತಪ್ಪು--ಎಂದಭಿಪ್ರಾಯವು. ॥೪೧॥

ದೇಹೋಹಮಿತಿ ಯಾ ಬುದ್ಧಿರ್ಮಲಿನಾ ವಾಸನೋಚ್ಯತೇ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೪೨॥

ದೇಹೋಹಮಿತಿ ಯಾ ಬುದ್ಧಿಃ ಸತ್ಯಂ ಜೀವಃ ಸ ಏವ ಹಿ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೪೩॥

ದೇಹೋಹಮಿತಿ ಸಂಕಲ್ಪಃ ಮಹಾನರಕವೀರಿತಂ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೇತಿ ಕೇವಲಂ ॥೪೪॥

ದೇಹೋಹಮಿತಿ ಯಾ ಬುದ್ಧಿರ್ಮನ ಏವೇತಿ ನಿಶ್ಚಯಂ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೪೫॥

ದೇಹೋಹಮಿತಿ ಯಾ ಬುದ್ಧಿಃ ಪರಿಚ್ಛಿನ್ನಮಿತೀರ್ಯತೇ ।
ಕಾಲತ್ರಯೇಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೪೬॥

---

"ದೇಹವು ನಾನು" ಎಂಬ ಬುದ್ಧಿಯು ಅನಾದಿಯಾದ ಅಜ್ಞಾನದ ವಾಸನೆಯು. ಅಂದರೆ ಸಂಸ್ಕಾರವು ಆ ಸಂಸ್ಕಾರವು ಕಾಲತ್ರಯದಲ್ಲೂ ಇಲ್ಲ. ಅಂದರೆ ಆ ಸಂಸ್ಕಾರವು ಸತ್ಯವಲ್ಲ. ಬ್ರಹ್ಮವಸ್ತುವೊಂದೇ ಸತ್ಯವು. ॥೪೨॥

"ದೇಹವು ನಾನು" ಎಂದು ವ್ಯವಹರಿಸುವ ಬುದ್ಧಿಯು, ಅದೇ ಜೀವನು, ಹಾಗೆ ದೇಹಾತ್ಮಜ್ಞಾನವಿರುವವನೇ ಜೀವನು ಎಂದರ್ಥವು, ಆ ಜೀವನೂ ಸಹ ಯಾವಾಗಲೂ ಇಲ್ಲವೇ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೪೩॥

ಈ ದೇಹಾತ್ಮಜ್ಞಾನವೇ ಮಹಾನರಕವು, ನರಕದಂತೆ ಕಷ್ಟದಾಯಕವಾದುದು. ಆ ಮಹಾನರಕವು ಯಾವಾಗಲೂ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೪೪॥

ದೇಹವು ನಾನು-ಎನ್ನುವುದು ಮನವೇ ಹೊರತು ಆತ್ಮನಲ್ಲ. ಆ ಮನವು ಮೂರು ಕಾಲಗಳಲ್ಲೂ ಇಲ್ಲ. ಬ್ರಹ್ಮವಸ್ತು ಒಂದೇ ಇರುವುದು. ॥೪೫॥

ದೇಹವು ನಾನು-ಎನ್ನುವುದು ಮಹಾವ್ಯಾಪಕನಾದ ಆತ್ಮನಿಗೆ ಚಿಕ್ಕದೇಹದ ಸ್ವರೂಪವನ್ನು ಕಲ್ಪಿಸುವುದಾಗಿದೆ. ಅಂತಹ ಚಿಕ್ಕತನವು ಆತ್ಮನಿಗೆ ಯಾವಾಗಲೂ ಇಲ್ಲ. ಆತ್ಮನು ಮಹಾವ್ಯಾಪಕನಾದ ಪರಮಾತ್ಮಸ್ವರೂಪನು. ॥೪೬॥

ದೇಹೋಽಹಮಿತಿ ಯದ್‌ಜ್ಞಾನಂ ಸರ್ವಂ ಶೋಕಮಿತೀರಿತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೪೭॥

ದೇಹೋಽಹಮಿತಿ ಯದ್‌ಜ್ಞಾನಂ ಸಂಸ್ಪರ್ಶಮಿತಿ ಕಥ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೪೮॥

ದೇಹೋಽಹಮಿತಿ ಯಾ ಬುದ್ಧಿಸ್ತತದೇವ ಮರಣಂ ಸ್ಮೃತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೪೯॥

ದೇಹೋಽಹಮಿತಿ ಯದ್‌ಜ್ಞಾನಂ ಮಹಾಪಾಪಮಿತಿ ಸ್ಮೃತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೦॥

ದೇಹೋಽಹಮಿತಿ ಯಾ ಬುದ್ಧಿಸ್ತದೇವಾಶೋಭನಂ ಮತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೧॥

---

"ದೇಹವು ನಾನು" ಎಂಬ ದೇಹಾತ್ಮಜ್ಞಾನದಿಂದಲೇ ಎಲ್ಲ ಬಗೆಯ ದುಃಖಗಳೂ ಉಂಟಾಗುವುವು. ಆ ದೇಹಾತ್ಮಜ್ಞಾನವೂ ದುಃಖವೂ ಯಾವಾಗಲೂ ಇಲ್ಲ. ಪರಮಾತ್ಮವಸ್ತುವೊಂದೇ ಇರುವುದು. ॥೪೭॥

ದೇಹವು ನಾನು-ಎಂಬ ಜ್ಞಾನವೇ ಸಂಸಾರದ ಸರ್ವಸಂಬಂಧವು, ಅಂತಹ ಸರ್ವಸಂಬಂಧವು ಕಾಲತ್ರಯದಲ್ಲೂ ಇಲ್ಲ. ಇರುವುದೆಲ್ಲವೂ ಬ್ರಹ್ಮವಸ್ತುವೇ. ॥೪೮॥

ದೇಹವು ನಾನು-ಎಂಬ ಬುದ್ಧಿಯೇ ಮರಣವು. ಏಕೆಂದರೆ-ದೇಹಕ್ಕೆ ಮರಣವು ಸಿದ್ಧವು. ಆದರೆ ವಾಸ್ತವವಾಗಿ ಆ ದೇಹವೂ ಇಲ್ಲ, ಮರಣವೂ ಇಲ್ಲ. ಇರುವುದೆಲ್ಲವೂ ಪರಮಾತ್ಮವಸ್ತುವೇ. ॥೪೯॥

ದೇಹವು ನಾನು-ಎಂಬ ಜ್ಞಾನವು ಮಹಾಪಾಪವು. ಏಕೆಂದರೆ-ದೇಹವು ಮಹಾಪಾಪಮಯವಾದುದು. ವಸ್ತುತಃ ಆ ದೇಹವು ಆತ್ಮವಲ್ಲ. ಆದುದರಿಂದ ಆತ್ಮನಿಗೆ ಆ ದೇಹದ ಪಾಪವೂ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ. ॥೫೦॥

ದೇಹವು ನಾನು-ಎಂಬ ಬುದ್ಧಿಯು ಅಮಂಗಳಕರವಾದುದು. ವಸ್ತುತಃ ದೇಹವೂ ಇಲ್ಲ. ಅಮಂಗಳವೂ ಇಲ್ಲ. ಕಾಲತ್ರಯದಲ್ಲಿಯೂ ಇರುವುದು ಬ್ರಹ್ಮವಸ್ತುವೊಂದೇ. ॥೫೧॥

ದೇಹೋಽಹಮಿತಿ ಯಾ ಬುದ್ಧಿಸ್ಸೈವ ತೃಷ್ಣಾ ಹಿ ಚೋಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೨॥

ದೇಹೋಽಹಮಿತಿ ಸಂಕಲ್ಪಃ ಸರ್ವದೋಷಮಿತಿಸ್ಮೃತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೩॥

ದೇಹೋಽಹಮಿತಿ ಸಂಕಲ್ಪಸ್ತದೇವ ಮಲಮುಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೪॥

ದೇಹೋಽಹಮಿತಿ ಸಂಕಲ್ಪಃ ಮಹತ್ಸಂಶಯಮುಚ್ಯತೇ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೫॥

ದೇಹೋಽಹಮಿತಿ ಯದ್ ಜ್ಞಾನಂ ಸರ್ವಂ ಮಿಥ್ಯೇತಿ ನಿಶ್ಚಿತಂ ।
ಕಾಲತ್ರಯೇಽಪಿ ತನ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೬॥

---

ದೇಹವು-ನಾನು ಎಂಬ ಬುದ್ಧಿಯೇ ಆಸೆಯು, ಏಕೆಂದರೆ-ಆ ದೇಹಾತ್ಮಜ್ಞಾನದಿಂದಲೇ ನೂರೆಂಟು ಆಸೆಗಳುದಯಿಸುವುವು. ವಸ್ತುತಃ ದೇಹವೂ ಇಲ್ಲ. ಆಸೆಯೂ ಇಲ್ಲ. ಎಲ್ಲವೂ ಪರಮಾತ್ಮವಸ್ತುವೊಂದೇ. ॥೫೨॥

ದೇಹವು ನಾನು-ಎಂಬುದೇ ಮಹಾದೋಷವು. ಏಕೆಂದರೆ-ಆ ದೇಹಾತ್ಮಬುದ್ಧಿಯಿಂದಲೇ ಎಲ್ಲ ದೋಷಗಳೂ ಉದಯಿಸುವುವು. ವಸ್ತುತಃ ಆ ದೇಹವೂ ಇಲ್ಲ. ದೋಷಗಳೂ ಇಲ್ಲ. ಇರುವುದೆಲ್ಲವೂ ಪರಮಾತ್ಮವಸ್ತುವು ಒಂದೇ. ॥೫೩॥

ದೇಹವು ನಾನು-ಎಂಬ ದೇಹಾತ್ಮಜ್ಞಾನವೇ ಕೊಳೆಯು. ಏಕೆಂದರೆ ದೇಹವು ಕೊಳೆಯ ಮನೆಯು. ವಸ್ತುತಃ ಆ ದೇಹವೂ ಇಲ್ಲ. ಕೊಳೆಯೂ ಇಲ್ಲ. ಇರುವುದೆಲ್ಲವೂ ಪರಮಾತ್ಮವಸ್ತುವೊಂದೇ. ॥೫೪॥

ದೇಹವು ನಾನು—ಎಂಬ ಜ್ಞಾನವೇ ಮಹಾಸಂಶಯವು, ಏಕೆಂದರೆ--ಅದರಿಂದ ಆತ್ಮನು ಎಂತಹವನೆಂಬುದರಲ್ಲಿ ಸಂಶಯವುದಯಿಸುವುದು, ವಸ್ತುತಃ ಆ ದೇಹವೂ ಇಲ್ಲ, ಸಂಶಯವೂ ಇಲ್ಲ, ಇರುವುದೆಲ್ಲವೂ ಪರಮಾತ್ಮವಸ್ತುವು ಒಂದೇ. ॥೫೫॥

ದೇಹವು ನಾನು—ಎಂಬ ಜ್ಞಾನವು ಅಸತ್ಯವಾದುದು, ಯಾವ ಕಾಲದಲ್ಲೂ ದೇಹವು ಆತ್ಮವಾಗಲಾರದು, ದೇಹವೆಂಬುದು ಇಲ್ಲವೇ ಇಲ್ಲ. ಪರಮಾತ್ಮನೊರ್ವನೇ ಸದಾ ಇರುವವನು. ॥೫೬॥

ಯತ್ಕಿಂಚಿತ್ ಸ್ಮರಣಂ ದುಃಖಂ ಯತ್ಕಿಂಚಿತ್‌ಸ್ಮರಣಂ ಪುನಃ ।
ಯತ್ಕಿಂಚಿದಪಿ ಸಂಕಲ್ಪಂ ಯತ್ಕಿಂಚಿದ್ ಜ್ಞಾನಮುಚ್ಯತೇ ॥೫೭॥

ಯತ್ಕಿಂಚಿತ್ ಸ್ಮರಣಂ ಪಾಪಂ ಯತ್ಕಿಂಚಿತ್ ಸ್ಮರಣಂ ಜಗತ್ ।
ಯತ್ಕಿಂಚಿತ್ ಸ್ಮರಣಂ ಕಾಮೋ ಯತ್ಕಿಂಚಿತ್ ಸ್ಮರಣಂ ಮಲಂ॥೫೮॥

ಯತ್ಕಿಂಚಿದಪಿ ಸಂಕಲ್ಪಂ ಮಹಾರೋಗೇತಿ ಕಥ್ಯತೇ ।
ಯತ್ಕಿಂಚಿದಪಿ ಸಂಕಲ್ಪಂ ಮಹಾಮೋಹೇತಿ ಕಥ್ಯತೇ ॥೫೯॥

ಯತ್ಕಿಂಚಿದಪಿ ಸಂಕಲ್ಪಂ ಸಂಬಂಧಂ ನೇತರತ್ ಕ್ವಚಿತ್ ।
ಯತ್ಕಿಂಚಿದಪಿ ಸಂಕಲ್ಪಂ ಸರ್ವದುಃಖೇತಿ ನೇತರತ್ ॥೬೦॥

ಯತ್ಕಿಂಚಿದಪಿ ಸಂಕಲ್ಪಂ ತಾಪತ್ರಯಮುದೀರಿತಂ ।
ಯತ್ಕಿಂಚಿದಪಿ ಸಂಕಲ್ಪಂ ಕಾಮಂ ಕ್ರೋಧಂ ಚ ಕಥ್ಯತೇ ॥೬೧॥

---

ಮನುಷ್ಯನ ಜೀವನ ಕೆಲವು ಸ್ಮರಣಗಳು, ದುಃಖಮಯವಾಗಿರುವುವು, ಕೆಲವು ಸ್ಮರಣಗಳು ಬರಿಯ ಮನಸ್ಸು, ಮನಸ್ಸಿನ ಕಲ್ಪನೆಗಳು, ಕೆಲವು ಬರಿಯ ಸಂಕಲ್ಪಗಳು, ಕೆಲವು ಜ್ಞಾನವಾಗುವುವು. ॥೫೭॥

ಕೆಲವು ಸ್ಮರಣಗಳು ಪಾಪಮಯಾದುವುಗಳು, ಕೆಲವು ಜಗತ್ತಿನ ವಿಷಯ ಗಳು, ಕೆಲವು ಸುಖಾಪೇಕ್ಷೆಯವುಗಳು, ಕೆಲವು ಬರಿಯ ಕೊಳೆಗಳು. ॥೫೮॥

ಕೆಲವು ಸಂಕಲ್ಪವು ಮಹಾರೋಗವು, ಆ ಸಂಕಲ್ಪವು ಅತ್ಯಾಸೆಯ ರೂಪ ವಾದುದು, ಆ ಆಸೆಯಿಂದಲೇ ಮಾನವನು ನಾನಾರೋಗಗಳಿಗೆ ಈಡಾಡುವನು, ಅದರಂತೆ ಕೆಲವು ಸಂಕಲ್ಪಗಳು ಮಹತ್ತಾದ ಅಜ್ಞಾನವು, ಅಜ್ಞಾನಿಯಾದವನೇ ಹಾಗೆ ವ್ಯರ್ಥವಾಗಿ ಸಂಕಲ್ಪಿಸುವನು—ಎಂದರ್ಥವು. ॥೫೯॥

ಕೇವಲ ಸಂಕಲ್ಪವೇ ಅಸತ್ಯವಾದ ಸಂಸಾರಬಂಧವನ್ನುಂಟುಮಾಡುವುದು, ಆದುದರಿಂದ ಯಾವುದೊಂದು ಸಂಕಲ್ಪವೂ ಸಹ ದುಃಖಮಯವಾದುದು. ॥೬೦॥

ಸಂಕಲ್ಪವೆಲ್ಲವೂ ಮಾನವನಿಗೆ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕಗಳೆಂಬ ಮೂರು ತಾಪತ್ರಯಗಳನ್ನೂ ಉಂಟುಮಾಡುವುದು, ಸಂಕಲ್ಪವೆಲ್ಲವೂ ಸಹ ಕಾಮ ಕ್ರೋಧಮಯವಾದುದು. ॥೬೧॥

ಯತ್ಕಿಂಚಿದಪಿ ಸಂಕಲ್ಪಂ ಜಗತ್ಸತ್ಯತ್ವವಿಭ್ರಮಂ ।
ಯತ್ಕಿಂಚಿದಪಿ ಸಂಕಲ್ಪಂ ಮಹದ್ದೋಷಂ ನ ಚೇತರತ್ ॥೬೨॥

ಯತ್ಕಿಂಚಿದಪಿ ಸಂಕಲ್ಪಂ ಕಾಲತ್ರಯಮುದೀರಿತಂ ।
ಯತ್ಕಿಂಚಿದಪಿ ಸಂಕಲ್ಪಂ ನಾನಾರೂಪಮುದೀರಿತಂ ॥೬೩॥

ಯತ್ರ ಯತ್ರ ಚ ಸಂಕಲ್ಪಂ ತತ್ರ ತತ್ರ ಮಹಜ್ಜಗತ್ ।
ಯತ ಯತ್ರ ಚ ಸಂಕಲ್ಪಂ ತದೇವಾಸತ್ಯಮೇವ ಹಿ ॥೬೪॥

ಯತ್ಕಿಂಚಿದಪಿ ಸಂಕಲ್ಪಂ ತತ್ತನ್ನಾಸ್ತಿ ನ ಸಂಶಯಃ ।
ಯತ್ಕಿಂಚಿದಪಿ ಸಂಕಲ್ಪಂ ತತ್ತನ್ನೇತಿ ನ ಸಂಶಯಃ ॥೬೫॥

ಮನ ಏವ ಜಗತ್ಸರ್ವಂ ಮನ ಏವ ಮಹಾರಿಪುಃ ।
ಮನ ಏವ ಹಿ ಸಂಸಾರೋ ಮನ ಏವ ಜಗತ್ತ್ರಯಂ ॥೬೬॥

---

ಸಂಕಲ್ಪವೆಲ್ಲವೂ ಸಹ ಜಗತ್ತು ಸತ್ಯವೆಂಬ ಭ್ರಾಂತಿಯನ್ನುಂಟುಮಾಡುವುದು, ಆದುದರಿಂದ ಆ ಸಂಕಲ್ಪವೆಂಬುವುದೆಲ್ಲವೂ ಮಹಾದೋಷಕರವಾದುದು. ॥೬೨॥

ಸಂಕಲ್ಪವೆಲ್ಲವೂ ಭೂತಭವಿಷ್ಯದ್ವರ್ತಮಾನಕಾಲಗಳ ರೂಪವಾಗಿದೆ, ಮಾನವನ ಸಂಕಲ್ಪದಂತೆಯೇ ಕಾಲವು ಹಾಗೆ ನಾನಾರೂಪವನ್ನು ಹೊಂದುವುದು, ಆ ಸಂಕಲ್ಪವು ನಾನಾಬಗೆಯಾಗಿರುವುದು. ॥೬೩॥

ಸಂಕಲ್ಪ (ಆಸೆ) ವಿದ್ದಲ್ಲೆಲ್ಲಾ ಜಗತ್ತು ಇರುವುದು, ಸಂಕಲ್ಪವಿಲ್ಲದೇ ಹೋದರೆ ಜಗತ್ತೇ ಇಲ್ಲ. ಎಲ್ಲೆಲ್ಲಿ ಈ ಸಂಕಲ್ಪವಿರುವುದೋ ಅದೆಲ್ಲವೂ ಅಸತ್ಯವು. ॥೬೪॥

ಸಕಲ್ಪವೆಲ್ಲವೂ ಇಲ್ಲವೇ ಇಲ್ಲ. ಯಾವುದೊಂದು ಚಿಕ್ಕ ಸಂಕಲ್ಪವೂ ಇಲ್ಲ. ॥೬೫॥

ಜಗತ್ತೆಲ್ಲವೂ ಮನೋಮಯವಾದುದು. ಮನಃಕಲ್ಪಿತವಾದುದು. ಆದುದರಿಂದ ಅಸತ್ಯವಾದ ಜಗತ್ತನ್ನು ಮತ್ತು ಸಂಸಾರವನ್ನು ಮಾನವನಿಗೆ ತಗುಲಿಸುವ ಈ ಮನವು ಮಹಾವೈರಿಯು. ಜಗತ್ತೆಲ್ಲವೂ ಕೇವಲ ಮನಸ್ಸೊಂದರಿಂದಲೇ ನಿಂತಿದೆ. ॥೬೬॥

ಮನ ಏವ ಮಹದ್ದುಃಖಂ ಮನ ಏವ ಜರಾದಿಕಂ ।
ಮನ ಏವ ಹಿ ಕಾಲಂ ಚ ಮನ ಏವ ಮಲಂ ಸದಾ ॥೧೭॥

ಮನ ಏವ ಹಿ ಸಂಕಲ್ಪಂ ಮನ ಏವ ಹಿ ಜೀವಕಂ ।
ಮನ ಏವಾಶುಚಿರ್ನಿತ್ಯಂ ಮನ ಏವೇಂದ್ರಜಾಲಕಂ ॥೧೮॥

ಮನ ಏವ ಸದಾ ಮಿಥ್ಯಾ ಮನೋ ವಂಧ್ಯಾಕುಮಾರವತ್ ।
ಮನ ಏವ ಸದಾ ನಾಸ್ತಿ ಮನ ಏವ ಜಡಂ ಸದಾ ॥೧೯॥

ಮನ ಏವ ಹಿ ಚಿತ್ತಂ ಚ ಮನ ಏವಾಹಂಕಾರಕಂ ।
ಮನ ಏವ ಮಹದ್ಬಂಧಂ ಮನೋಂತಃಕರಣಂ ಕ್ವಚಿತ್ ॥೨೦॥

ಮನ ಏವ ಹಿ ಭೂಮಿಶ್ಚ ಮನ ಏವ ಹಿತೋಚ್ಚಕಂ ।
ಮನ ಏವ ಹಿ ತೇಜಶ್ಚ ಮನ ಏವ ಮರುನ್ಮಹಾನ್ ॥೨೧॥

---

ಮನಸ್ಸೇ ಮಹಾದುಃಖವು. ಮನಸ್ಸೇ ಮುಪ್ಪು ಮೊದಲಾದ ಅವಸ್ಥೆಯು. ಮನಸ್ಸೇ ಕಾಲವು. ಮನವೇ ಕೊಳೆಯು. ಅಂದರೆ ಇವೆಲ್ಲವೂ ಮನಸ್ಸಿನ ಪರಿಣಾಮಗಳು. ॥೧೭॥

ಮನಸ್ಸೇ ಸಂಕಲ್ಪವು. ಮನಸ್ಸೇ ಜೀವನವು ಅಥವಾ ಜೀವನು. ಮನಸ್ಸಿನ ಪ್ರತಿಬಿಂಬಭಾವವೇ ಜೀವನು. ಮನವು ಸದಾ ಅಶುಚಿಯು. ಮನಸ್ಸೇ ಇಂದ್ರ ಜಾಲವು. ಇಂದ್ರಜಾಲದಂತೆ ಅನೇಕ ಕಲ್ಪನೆಗಳ ಗೋಪುರಗಳನ್ನು ಕಟ್ಟುವುದು. ॥೧೮॥

ಮನಸ್ಸು ಅಸತ್ಯವಾದುದು. ಬಂಜೆಯುಮಗನಂತೆ ಮನಸ್ಸೆಂಬುದು ಯಾವಾಗಲೂ ಇಲ್ಲ. ಮನಸ್ಸು ಸದಾ ಜಡವು. ಚೇತನವಸ್ತುವಲ್ಲ. ಚೇತನ ವಸ್ತುವಾದ ಆತ್ಮನಿಂದ ಮನಸ್ಸಿಗೆ ಪ್ರಕಾಶವು. ॥೧೯॥

ಮನಸ್ಸೇ ಚಿತ್ತವು. (ನಿಶ್ಚಯಿಸುವುದು) ಮನಸ್ಸೇ ಅಹಂಕಾರವು. (ನಾನೇ ಕರ್ತೃವೆಂದು ಪ್ರವರ್ತಿಸುವುದು) ಮನವೇ ಬಂಧನವು. ಮನಸ್ಸೂ ಅಂತಕರಣವೂ ಒಂದೇ. ॥೨೦॥

ಮನಸ್ಸೇ ಭೂಮಿಯು. ಮನಸ್ಸೇ ಶಬ್ದವು. ಮನಸ್ಸೇ ತೇಜಸ್ಸು. ಮನವೇ ಮಹಾವಾಯುವು. ಇವೆಲ್ಲವೂ ಮನಸ್ಸಿನ ಕಲ್ಪನೆಗಳಿಂದಲೇ ಆದುವು. ॥೨೧॥

ಮನ ಏವ ಹಿ ಚಾಕಾಶಂ ಮನ ಏವ ಹಿ ಶಬ್ದಕಂ ।
ಮನ ಏವ ಸ್ಪರ್ಶರೂಪಂ ಮನ ಏವ ಹಿ ರೂಪಕಂ ॥೭೨॥

ಮನ ಏವ ಹಿ ಸಾಕಾರಂ ಮನೋ ಗಂಧಃ ಪ್ರಕೀರ್ತಿತಃ ।
ಅನ್ನಕೋಶಂ ಮನೋರೂಪಂ ಪ್ರಾಣಕೋಶಂ ಮನೋಮಯಂ ॥೭೩॥

ಮನಃಕೋಶಂ ಮನೋರೂಪಂ ವಿಜ್ಞಾನಂ ಚ ಮನೋಮಯಂ ।
ಮನ ಏವಾನಂದಕೋಶಂ ಮನೋಜಾಗ್ರದವಸ್ಥಿತಂ ॥೭೪॥

ಮನ ಏವ ಹಿ ಸ್ವಪ್ನಂ ಚ ಮನ ಏವ ಸುಷುಪ್ತಿಕಂ ।
ಮನ ಏವ ಹಿ ದೇವಾದಿ ಮನ ಏವ ಯಮಾದಯಃ ॥೭೫॥

ಮನ ಏವ ಹಿ ಯತ್ಕಿಂಚಿನ್ಮನ ಏವ ಮನೋಮಯಃ ।
ಮನೋಮಯಮಿದಂ ವಿಶ್ವಂ ಮನೋಮಯಮಿದಂ ಪುರಂ ॥೭೬॥

ಮನೋಮಯಮಿದಂ ಭೂತಂಮನೋಮಯಮಿದಂ ದ್ವಯಂ ।
ಮನೋಮಯಮಿಯಂ ಜಾತಿರ್ಮನೋಮಯಮಯಂ ಗುಣಃ ॥೭೭॥

---

ಮನಸ್ಸೇ ಆಕಾಶವು. ಮನಸ್ಸೇ ಶಬ್ದವು. ಮನಸ್ಸೇ ಸ್ಪರ್ಶವು. ಮನಸ್ಸೇ ರೂಪವು. ॥೭೨॥

ಮನಸ್ಸೇ ರಸವು. ಮನಸ್ಸೇ ಗಂಧವು. ಅನ್ನಮಯ ಕೋಶವೂ. ಮನಸ್ಸೇ ಪ್ರಾಣಮಯಕೋಶವೂ ಮನಸ್ಸೇ. ॥೭೩॥

ಮನೋಮಯಕೋಶವೂ ಮನಸ್ಸೇ. ವಿಜ್ಞಾನಮಯಕೋಶವೂ ಮನಸ್ಸೇ. ಆನಂದಮಯಕೋಶವೂ ಮನಃಕಲ್ಪಿತವೇ. ಜಾಗ್ರದವಸ್ಥೆಯು ಮನಸ್ಸೇ. ॥೭೪॥

ಸ್ವಪ್ನವೂ ಮನಸ್ಸೇ. ಮನವೇ ಸುಷುಪ್ತಿಯು. ದೇವತೆಗಳು ಮೊದಲಾದವರೂ ಮನಸ್ಸೇ. ಮನವೇ ಯಮ ಮೊದಲಾದವರು. ॥೭೫॥

ಯತ್ಕಿಂಚಿತ್ ಪದಾರ್ಥವೆಲ್ಲವೂ ಮನಸ್ಸೇ. ಮನೋಮಯನಾದ ಜೀವನೂ ಮನಸ್ಸೇ. ಪ್ರಪಂಚವೆಲ್ಲವೂ ಮನಸ್ಸೇ. ಈ ಶರೀರವೂ ಮನಸ್ಸೇ. ॥೭೬॥

ಮಹಾಭೂತಗಳೆಲ್ಲವೂ ಮನಸ್ಸಿನ ಪರಿಣಾಮವೇ. ಭೇದವೂ ಸಹ ಮನಸ್ಸಿನ ಕಲ್ಪನೆಯೇ. ಜಾತಿಯು ಮನಸ್ಸಿನ ಪರಿಣಾಮವು. ಗುಣಗಳು ಮನಸ್ಸಿನ ಪರಿಣಾಮವು. ॥೭೭॥

ಮನೋಮಯಮಿದಂ ದೃಶ್ಯಂ ಮನೋಮಯಮಿದಂ ಜಡಂ ।
ಮನೋಮಯಮಿದಂ ಯದ್ಯನ್ಮನೋ ಜೀವ ಇತಿ ಸ್ಥಿತಂ ॥೭೮॥

ಸಂಕಲ್ಪಮಾತ್ರಮಜ್ಞಾನಂ ಭೇದಃ ಸಂಕಲ್ಪಮೇವ ಹಿ ।
ಸಂಕಲ್ಪಮಾತ್ರಂ ವಿಜ್ಞಾನಂ ನಿತ್ಯಸಿದ್ಧೋಽಸ್ಮ್ಯಹಂ ಸದಾ ॥೭೯॥

ನಿರ್ಗುಣೋಽಸ್ಮಿ ನಿರೀಹೋಽಸ್ಮಿ ಇತ್ಯೇವಂ ಮಂತ್ರಮುತ್ತಮಂ ।
ಹರಿರ್ಬ್ರಹ್ಮಾಸ್ಮಿ ರುದ್ರೋಽಸ್ಮಿ ಏತದ್ಭೇದೋಽಪಿ ನಾಪ್ಯಹಂ ॥೮೦॥

ಕೇವಲಂ ಬ್ರಹ್ಮಮಾತ್ರೋಽಸ್ಮಿ ಕೇವಲೋಽಸ್ಮ್ಯಜಯೋಽಸ್ಮ್ಯಹಂ ।
ಸ್ವಯಮೇವ ಸ್ವಯಂ ಭಾಸ್ಯಂ ಸ್ವಯಮೇವ ಹಿ ನಾನ್ಯತಃ ॥೮೧॥

ಸ್ವಯಮೇವಾತ್ಮನಿಸ್ವಸ್ಥ ಇತ್ಯೇವಂ ಮಂತ್ರಮುತ್ತಮಂ ।
ಸ್ವಯಮೇವ ಸ್ವಯಂ ಭುಂಕ್ಷ್ವೇ ಸ್ವಯಮೇವ ಸ್ವಯಂ ರಮೇ॥೮೨॥

---

ಕಣ್ಣಿಗೆ ಕಾಣಿಸುವ ಚೇತನವಸ್ತುವೆಲ್ಲವೂ ಮನಸ್ಸೇ. ಜಡವಸ್ತುವೂ ಮನಸ್ಸೇ. ಜೀವವು ಮನಸ್ಸಿನ ಪರಿಣಾಮವೇ, ಅಂದರೆ ಮನಸ್ಸಿನ ಪ್ರತಿಬಿಂಬವೇ. ಹೀಗೆ ಎಲ್ಲವೂ ಬರಿಯ ಮನಸ್ಸಿನ ಕಲ್ಪನೆಗಳು. ||೭೮||

ಅಜ್ಞಾನವು ಬರಿಯ ಸಂಕಲ್ಪವು (ಊಹೆಯು). ಭೇದವೂ ಸಹ ಬರಿಯ ಕಲ್ಪನೆಯದು. ವಿಜ್ಞಾನವು ಊಹಾಮಾತ್ರವು. ನಾನು ಕಲ್ಪಿತನಲ್ಲದ ಯಾವಾಗಲೂ ಸಿದ್ಧನಾಗಿರುವೆನು. ಮೂರು ಕಾಲಗಳಲ್ಲೂ ನಾನಿರುವೆನು. ||೭೯||

ನನ್ನಲ್ಲಿ ಯಾವಗುಣಗಳೂ ಇಲ್ಲವು. ನನಗಾವ ಆಸೆಯೂ ಇಲ್ಲ. ಹರಿಯು ನಾನು. ಬ್ರಹ್ಮನು ನಾನು. ರುದ್ರನು ನಾನು. ಆದರೆ ನನ್ನಲ್ಲಿ ಹರಿರುದ್ರಬ್ರಹ್ಮರೆಂಬ ಭೇದಕಲ್ಪನೆಯು ಇಲ್ಲ. ಭೇದವೇ ಇಲ್ಲ. ||೮೦||

ಭೇದವಿಲ್ಲದ, ಗುಣಗಳಿಲ್ಲದ, ಪಾಪವಿಲ್ಲದ, ಶುದ್ಧಬ್ರಹ್ಮನು ನಾನು. ನನ್ನನ್ನು ಯಾರೂ ಜಯಿಸಲಾರರು. ನಾನೇ ನಾನಾಗಿ ಪ್ರಕಾಶಿಸುವೆನು. ಇನ್ನೊಂದು ವಸ್ತುವು ನನ್ನನ್ನು ಪ್ರಕಾಶಿಸಲಾರದು. ||೮೧||

ನನ್ನಲ್ಲೇ ನಾನು ಇರುವೆನು. ನನ್ನನ್ನೇ ನಾನು ಅನುಭವಿಸುವೆನು. ನನ್ನಲ್ಲೇ ನಾನು ಕ್ರೀಡಿಸುವೆನು. ಅನುಭವ ಕ್ರೀಡೆ ಇವೆಲ್ಲವೂ ನಾನೇ. ||೮೨||

ಸ್ವಯಮೇವ ಸ್ವಯಂಜ್ಯೋತಿರಿತ್ಯೇತತ್ಸ್ವಯಂಮೇ ಸ್ವಯಂ ।
ಸ್ವಸ್ಯಾತ್ಮನಿ ಸ್ವಯಂ ರಂಸ್ಯೇ ಸ್ವಾತ್ಮನ್ಯೇವಾವಲೋಕಯೇ ॥೮೩॥

ಸ್ವಾತ್ಮನ್ಯೇವ ಸುಖಂ ಚಾಸ್ತಿ ಇತ್ಯೇವಂ ಮಂತ್ರಮುತ್ತಮಂ ।
ಸ್ವಚ್ಛೈತನ್ಯಂ ಸ್ವಯಂ ಸ್ಥಾಸ್ಯೇ ಸ್ವಾತ್ಮರಾಜ್ಯೇ ಸುಖಂ ರಮೇ ॥೮೪॥

ಸ್ವಾತ್ಮಸಿಂಹಾಸನೇ ತಿಷ್ಠೇ ಇತ್ಯೇವಂ ಮಂತ್ರಮುತ್ತಮಂ ।
ಸ್ವಾತ್ಮಮಂತ್ರಂ ಸದಾ ಪಶ್ಯೇತ್ಸ್ವಾತ್ಮಜ್ಞಾನಂ ಸದಾಽಭ್ಯಸೇತ್ ॥೮೫॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಸ್ವಾತ್ಮಪಾಪಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ದ್ವೈತದುಃಖಂ ವಿನಾಶಯೇತ್ ॥೮೬॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಭೇದದುಃಖಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಚಿಂತಾರೋಗಂ ವಿನಾಶಯೇತ್ ॥೮೭॥

---

ನನ್ನಲ್ಲಿ ನಾನೇ ಪ್ರಕಾಶಿಸುವೆನು. ನನ್ನಲ್ಲಿಯೇ ನಾನು ವಿಹರಿಸುವೆನು. ನನ್ನಲ್ಲಿ ನನ್ನನ್ನೇ ನಾನು ನೋಡುವೆನು. ಪ್ರಕಾಶ, ವಿಹಾರ, ದರ್ಶನ ಇವೆಲ್ಲವೂ ನಾನೇ. ॥೮೩॥

ನನ್ನಲ್ಲಿಯೇ ಸುಖವು ಇರುವುದು. ಅಂದರೆ ನಾನೇ ಸುಖಸ್ವರೂಪನು. ನನ್ನಲ್ಲಿಯೇ ನಾನು ಸುಖರೂಪದಿಂದ ಇರುವೆನು. ಆತ್ಮರಾಜ್ಯದಲ್ಲಿ ಸುಖವಾಗಿ ವಿಹರಿಸುವೆನು. ॥೮೪॥

ಆತ್ಮರಾಜ್ಯದಲ್ಲಿ ಆತ್ಮಸಿಂಹಾಸನದಲ್ಲಿ ಇರುವೆನು. ಇದೇ ಮಂತ್ರವು. ಈ ಆತ್ಮಮಂತ್ರವನ್ನು ಯಾವಾಗಲೂ ಪಠಿಸುತ್ತ ಆತ್ಮಜ್ಞಾನಿಯಾಗಬೇಕು. ॥೮೫॥

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಎಲ್ಲ ಪಾಪಗಳನ್ನೂ ನಾಶಪಡಿಸುವುದು. "ನಾನೇ ಬ್ರಹ್ಮನು" ಎಂಬ ಮಂತ್ರವು ಎಲ್ಲ ಭೇದಗಳ ದುಃಖಗಳನ್ನೂ ನಾಶಪಡಿಸುವುದು, ॥೮೬॥

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಎಲ್ಲ ಭೇದಕಲ್ಪಿತ ದುಃಖಗಳನ್ನೂ ಹೋಗಲಾಡಿಸುವುದು. "ನಾನೇ ಬ್ರಹ್ಮನು" ಎಂಬ ಮಂತ್ರವು ಚಿಂತೆಯೆಂಬ ರೋಗವನ್ನು ಹೋಗಲಾಡಿಸುವುದು. ॥೮೭॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಬುದ್ಧಿವ್ಯಾಧಿಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಆಧಿಂ ವ್ಯಾಧಿಂ ವಿನಾಶಯೇತ್ ॥೮೮॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಸರ್ವಶೋಕಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಕಾಮದೋಷಂ ವಿನಾಶಯೇತ್ ॥೮೯॥

ಅಹಂ ಬ್ರಹ್ಮಾಸ್ಮ್ಯಹಂಮಂತ್ರೋ ಕ್ರೋಧದೋಷಂ ವಿನಾಶಯೇತ್ ।
ಅಹಂ ಬ್ರಹ್ಮಾ ಸ್ಮ್ಯಹಂ ಮಂತ್ರೋ ಚಿಂತಾದೋಷಂ ವಿನಾಶಯೇತ್॥೯೦॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಸಂಕಲ್ಪಂ ಚ ವಿಸರ್ಜಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅಜ್ಞಾನಧ್ವಂಸಮಾಚರೇತ್ ॥೯೧॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅವಿವೇಕಮಲಂ ದಹೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರ ಇದಂ ದುಃಖಂ ವಿನಾಶಯೇತ್ ॥೯೨॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಕೋಟಿದೋಷಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಸರ್ವತಂತ್ರಂ ವಿನಾಶಯೇತ್ ॥೯೩॥

---

"ನಾನೇ ಬ್ರಹ್ಮನು" ಎಂಬ ಮಂತ್ರವು ಎಲ್ಲ ದುಃಖಗಳಿಗೂ ಕಾರಣವಾದ ಬುದ್ಧಿಯೆಂಬ ರೋಗವನ್ನು ನಾಶಮಾಡುವುದು. "ನಾನು ಬ್ರಹ್ಮನು" ಎಂಬ ಮಂತ್ರವು ಎಲ್ಲ ರೋಗಗಳನ್ನೂ ಮನೋರೋಗಗಳನ್ನೂ ನಾಶಮಾಡುವುದು ॥೮೮॥

"ನಾನೇ ಬ್ರಹ್ಮನು" ಎಂಬ ಆತ್ಮ ಮಂತ್ರವು ಎಲ್ಲ ದುಃಖಗಳನ್ನೂ ಹೋಗಲಾಡಿಸುವುದು. ಎಲ್ಲ ಕಾಮದೋಷಗಳನ್ನೂ ಹೋಗಲಾಡಿಸುವುದು ॥೮೯॥

"ನಾನೇ ಬ್ರಹ್ಮನು" ಎಂಬ ಮಂತ್ರವು ಕ್ರೋಧದ ದೋಷವನ್ನು ಹೋಗಲಾಡಿಸುವುದು. ಚಿಂತೆಯೆಲ್ಲವನ್ನೂ ಹೋಗಲಾಡಿಸುವುದು. ॥೯೦॥

"ನಾನೇ ಬ್ರಹ್ಮನು" ಎಂಬ ಮಂತ್ರವು ಸಂಕಲ್ಪವನ್ನು ಹೋಗಲಾಡಿಸುವುದು. ಅಜ್ಞಾನವನ್ನು ಸಮೂಲವಾಗಿ ಹೋಗಲಾಡಿಸುವುದು. ॥೯೧॥

"ನಾನೇ ಬ್ರಹ್ಮನು" ಎಂಬ ಮಂತ್ರವು ಅವಿವೇಕವೆಲ್ಲವನ್ನೂ ದಹಿಸುವುದು. ಆ ಮಂತ್ರವು ತಾಪತ್ರಯವೆಲ್ಲವನ್ನೂ ಹೋಗಲಾಡಿಸುವುದು. ॥ ೯೨ ॥

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಕೋಟಿಕೋಟಿ ದೋಷಗಳನ್ನೂ

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಸರ್ವದೋಷಂ ವಿನಾಶಯೇತ್ ॥೯೪॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ದೃಷ್ಟಾದೃಷ್ಟಂ ವಿನಾಶಯೇತ್ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರ ಇದಂ ಸರ್ವಂ ವಿಸರ್ಜಯೇತ್ ॥೯೫॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಹ್ಯಾತ್ಮಜ್ಞಾನಪ್ರಕಾಶಕಂ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಆತ್ಮಲೋಕಜಯಪ್ರದಂ ॥೯೬॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅಸತ್ಯಾದಿವಿನಾಶಕಂ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅನ್ಯತ್ಸರ್ವಂ ವಿನಾಶಯೇತ್ ॥೯೭॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅಪ್ರತರ್ಕ್ಯಸುಖಪ್ರದಂ ।
ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಅನಾತ್ಮಜ್ಞಾನಮಾಹರೇತ್ ॥೯೮॥

---

ನಾಶಪಡಿಸುವುದು. ಎಲ್ಲ ತಂತ್ರಗಳನ್ನೂ ನಾಶಪಡಿಸುವುದು. ಶರೀರದೋಷವೆಲ್ಲ ವನ್ನೂ ನಾಶಮಾಡುವುದು. ॥೯೩-೯೪॥

"ನಾನೇ ಬ್ರಹ್ಮನು" ಎಂಬ ಮಂತ್ರವು ಕಾಣಿಸುವಂತಹ-ಕಾಣಿಸದಂತಹ ಎಲ್ಲ ಪಾಪಗಳನ್ನೂ ಹೋಗಲಾಡಿಸುವುದು. "ಇದು" ಎಂಬ ಎಲ್ಲ ಭೇದವಸ್ತು ಗಳನ್ನೂ ನಾಶಪಡಿಸುವುದು. ॥೯೫॥

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಆತ್ಮಜ್ಞಾನವನ್ನುಂಟುಮಾಡು ವುದು. ಆ ಮಂತ್ರದಿಂದ ಆತ್ಮಲೋಕವನ್ನು ಜಯಿಸಬಹುದು. ॥೯೬॥

"ನಾನೇ ಬ್ರಹ್ಮನು" ಎಂಬ ಮಂತ್ರವು ಅಸತ್ಯವೆಲ್ಲವನ್ನೂ ಹೋಗಲಾಡಿ ಸುವುದು. ಆ ಮಂತ್ರವು ಆತ್ಮನು ಹೊರತಾದ ವಸ್ತುವೆಲ್ಲವನ್ನೂ ನಿವಾರಿಸುವುದು. ॥೯೭॥

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಊಹೆಗೆ ನಿಲುಕದಂತಹ ಆತ್ಮಸುಖವನ್ನುಂಟುಮಾಡುವುದು. ಅನಾತ್ಮಜ್ಞಾನವನ್ನು ಹೋಗಲಾಡಿಸುವುದು. ॥೯೮॥

ಅಹಂ ಬ್ರಹ್ಮಾಸ್ಮ್ಯಹಂ ಮಂತ್ರೋ ಜ್ಞಾನಾನಂದಂ ಪ್ರಯಚ್ಛತಿ
ಸಪ್ತಕೋಟಿಮಹಾಮಂತ್ರಾ ಜನ್ಮಕೋಟಿಶತಪ್ರದಾಃ ।
ಸರ್ವಮಂತ್ರಾನ್ ಸಮುತ್ಸೃಜ್ಯ ಜಪಮೇನಂ ಸಮಭ್ಯಸೇತ್ ॥೯೯॥

ಸದ್ಯೋಮೋಕ್ಷಮವಾಪ್ನೋತಿ ನಾತ್ರ ಸಂದೇಹಮಸ್ತಿ ಮೇ ।
ಮಂತ್ರಪ್ರಕರಣಂ ಪ್ರೋಕ್ತಂ ರಹಸ್ಯಂ ವೇದಕೋಟಿಷು ॥೧೦೦॥

ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೧೦೧॥

ನಿತ್ಯಾನಂದಮಯಃ ಸಏಷ ಪರಮಾನಂದೋದಯಃ ಶಾಶ್ವತೋ
ಯಸ್ಮಾನ್ನಾನ್ಯದತೋಽನ್ಯದಾರ್ತಮಖಿಲಂ ತಜ್ಜಂ ಜಗತ್ಸರ್ವದಾ ।
ಯೋ ವಾಚಾ ಮನಸೇಂದ್ರಿಯಾತಿಗಣ್ಯೈರ್ದೇಹೋಪಿ ವೇದ್ಯೋ ನವೈ
ರಚ್ಛೇದ್ಯೋ ಭವವೈದ್ಯ ಈಶ ಇತಿ ಯಾ ಸಾ ಧೀಃ ಪರಂ ಮುಕ್ತಯೇ
॥೧೦೨॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇಽಷ್ಟಮೋಽಧ್ಯಾಯಃ

---

"ನಾನೇ ಬ್ರಹ್ಮನು" ಎಂಬ ಆತ್ಮಮಂತ್ರವು ಜ್ಞಾನಾನಂದವನ್ನುಂಟು ಮಾಡುವುದು. ಏಳು ಕೋಟಿ ಮಹಾಮಂತ್ರಗಳೆಲ್ಲವೂ ನೂರಾರು ಕೋಟಿ ಜನ್ಮಗಳ ನ್ನುಂಟುಮಾಡುವುವು. ಆದುದರಿಂದ ಆ ಮಂತ್ರವೆಲ್ಲವನ್ನೂ ಬಿಟ್ಟು ಆತ್ಮ ಮಂತ್ರ ವೊಂದನ್ನೇ ಜಪಿಸಬೇಕು. ॥೯೯॥

ಈ ಆತ್ಮ ಮಂತ್ರವನ್ನು ಜಪಿಸುವವರು ಕೂಡಲೇ ಮುಕ್ತಿಯನ್ನು ಪಡೆ ವರು, ಇದರಲ್ಲಿ ಎಳ್ಳಷ್ಟು ಸಂದೇಹವಿಲ್ಲ. ಎಲೈ ಮುನಿಯೇ, ಹೀಗೆ ವೇದಗಳಲ್ಲಿ ರಹಸ್ಯ ವಾದಂತಹ ಆತ್ಮಮಂತ್ರಪ್ರಕರಣವನ್ನು ವಿವರಿಸಿರುವೆನು. ಇದನ್ನು ಒಂದು ಬಾರಿ ಕೇಳಿದವನೂ ಸಹ ಬ್ರಹ್ಮನೇ ಆಗುವನು. ॥೧೦೦-೧೦೧॥

ಆತ್ಮನು ಸದಾ ಆನಂದಸ್ವರೂಪನು, ನಿತ್ಯನು, ಅವನೊಬ್ಬನೇ ಸತ್ಯವಾಗಿರು ವನು. ಮಿಕ್ಕೆಲ್ಲವೂ ಅವನಿಂದಲೇ ಕಲ್ಪಿತವಾಗಿ ದುಃಖಮಯವಾಗಿರುವುದು, ಆತನು ದೇಹದಲ್ಲಿದ್ದರೂ ಮನಸ್ಸು ವಾಕ್ಕು-ಮೊದಲಾದ ಇಂದ್ರಿಯಗಳಿಗೆ ಗೋಚರನಾಗ ಲಾರನು, ಆಯುಧಾದಿಗಳಿಂದ ಆತ್ಮನನ್ನು ಭೇದಿಸಲಾಗದು, ಸಂಸಾರರೋಗವನ್ನು

ಹೋಗಲಾಡಿಸುವ ಉತ್ತಮವೈದ್ಯನವನು. ಆತ್ಮನ ಜ್ಞಾನದಿಂದಲೇ ಪರಮ ಮುಕ್ತಿಯು ಲಭಿಸುವುದು. ||೧೦೨||

ಶಿವರಹಸ್ಯದ ಆರನೆಯ ಅಂಶದಲ್ಲಿ ಎಂಟನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ನವಮೋಽಧ್ಯಾಯಃ

॥ ಋಭುರುವಾಚ ॥

ನಿತ್ಯತರ್ಪಣಮಾಚಕ್ಷೇ ನಿದಾಘ ಶೃಣು ಮೇ ವಚಃ ।
ವೇದಶಾಸ್ತ್ರೇಷು ಸರ್ವೇಷು ಅತ್ಯಂತಂ ದುರ್ಲಭಂ ನೃಣಾಂ ॥೧॥

ಸದಾ ಪ್ರಪಂಚಂ ನಾಸ್ತ್ಯೇವ ಇದಮಿತ್ಯಪಿ ನಾಸ್ತಿ ಹಿ ।
ಬ್ರಹ್ಮಮಾತ್ರಂ ಸದಾ ಪೂರ್ಣಮಿತ್ಯೇವಂ ಬ್ರಹ್ಮತರ್ಪಣಂ ॥೨॥

ಸದ್ರೂಪಮಾತ್ರಂ ಬ್ರಹ್ಮೈವ ಸಚ್ಚಿದಾನಂದಮಪ್ಯಹಂ ।
ಆನಂದಘನ ಏವಾಹಮಿತ್ಯೇವಂ ಬ್ರಹ್ಮತರ್ಪಣಂ ॥೩॥

---

## ಒಂಭತ್ತನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ನನ್ನ ಮಾತನ್ನು ಕೇಳು. ವೇದಶಾಸ್ತ್ರಗಳಲ್ಲಿಯೂ ದುರ್ಲಭವಾದಂತಹ ನಿತ್ಯತರ್ಪಣವನ್ನು ಹೇಳುವೆನು. ॥೧॥

ಪ್ರಪಂಚವು ತ್ರಿಕಾಲಗಳಲ್ಲೂ ಇಲ್ಲ. ಇದು ಎನ್ನುವುದು ಇಲ್ಲ. ಎಲ್ಲೆಲ್ಲಿಯೂ ಬ್ರಹ್ಮವಸ್ತುವೇ ಪೂರ್ಣವಾಗಿರುವುದು, ಇದೇ ಬ್ರಹ್ಮತರ್ಪಣವು. ಎಲ್ಲವೂ ಬ್ರಹ್ಮ, ಬ್ರಹ್ಮನು ಹೊರತಾಗಿ ಏನೂ ಇಲ್ಲ ಎಂದು ತಿಳಿಯುವುದೇ ಬ್ರಹ್ಮತರ್ಪಣ. ॥೨॥

ಸತ್ಯಸ್ವರೂಪವೂ ಆನಂದಸ್ವರೂಪವೂ ಜ್ಞಾನಸ್ವರೂಪವೂ ಆದ ಬ್ರಹ್ಮವಸ್ತುವೊಂದೇ ಇರುವುದು. ಆ ಬ್ರಹ್ಮವಸ್ತುವೇ ನಾನು ಎಂದು ತಿಳಿಯುವುದು ಬ್ರಹ್ಮತರ್ಪಣ. ॥೩॥

ಸರ್ವದಾ ಸರ್ವಶೂನ್ಯೋಽಹಂ ಸದಾತ್ಮಾನಂದವಾನಹಂ ।
ನಿತ್ಯಾನಿತ್ಯಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೪॥

ಅಹಮೇವ ಚಿದಾಕಾಶ ಆತ್ಮಾಕಾಶೋಽಸ್ಮಿ ಸರ್ವದಾ ।
ಆತ್ಮನಾತ್ಮನಿ ತೃಪ್ತೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೫॥

ಏಕತ್ವಸಂಖ್ಯಾಹೀನೋಽಸ್ಮಿ ಅರೂಪೋಽಸ್ಮ್ಯಹಮದ್ವಯಃ ।
ನಿತ್ಯಶುದ್ಧಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೬॥

ಆಕಾಶಾದಪಿ ಸೂಕ್ಷ್ಮೋಽಹಮತ್ಯಂತಾಭಾವಕೋಽಸ್ಮ್ಯಹಂ ।
ಸರ್ವಪ್ರಕಾಶರೂಪೋಽಸ್ಮಿ ಇತ್ಯೇವಂ ಬ್ರಹ್ಮತರ್ಪಣಂ ॥೭॥

---

ನನ್ನಲ್ಲಿ ಯಾವಾಗಲೂ ಏನೂ ಇಲ್ಲ. ಸದಾ ನಾನು ಆತ್ಮಾನಂದವನ್ನನುಭವಿಸುವೆನು. ನಿತ್ಯನಾದ ನಾನು ಮಾಯೆಯಿಂದ ಅನಿತ್ಯಜಗತ್ತಿನ ರೂಪವಾಗುವೆನು ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೪॥

ನಾನು ಆಕಾಶದಂತೆ ವ್ಯಾಪಕನಾದ ಜ್ಞಾನಮೂರ್ತಿಯು. ಜಗತ್ತಿನಲ್ಲಿ ಆತ್ಮರೂಪದಿಂದ ವ್ಯಾಪಿಸಿರುವೆನು. ನನ್ನಲ್ಲಿಯೇ ನಾನು ತೃಪ್ತನಾಗಿರುವೆನು ಎಂದು ತಿಳಿಯುವುದು ಬ್ರಹ್ಮತರ್ಪಣವು. ॥೫॥

ಒಂದು—ಎಂಬ ಸಂಖ್ಯೆಯು ನನ್ನಲ್ಲಿಲ್ಲ, ನನ್ನಿಂದ ಹೊರತಾಗಿ ಎರಡನೆಯ ವಸ್ತುವಿಲ್ಲ. ಅನಿತ್ಯವಾದ ರೂಪವು ನನಗಿಲ್ಲ, ನಿತ್ಯನೂ ಶುದ್ಧನೂ ನಾನು—ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೬॥

ಆಕಾಶಕ್ಕಿಂತಲೂ ಸೂಕ್ಷ್ಮ (ಇಂದ್ರಿಯಗಳಿಗೆ ಅಗೋಚರ)ನು ನಾನು, ಆಕಾಶವಾದರೂ ಶಬ್ದದಿಂದ ಶ್ರೋತ್ರೇಂದ್ರಿಯ ವಿಷಯವಾಗುವುದು. ನಾನು ಯಾವ ಗುಣಗಳೂ ಇಲ್ಲದುದರಿಂದ ಯಾವ ಇಂದ್ರಿಯಗಳಿಗೂ ವಿಷಯನಲ್ಲ, ನನ್ನ ಹೊರತಾದ ಯಾವ ವಸ್ತುಗಳೂ ತ್ರಿಕಾಲದಲ್ಲೂ ನನ್ನಲ್ಲಿಲ್ಲ. ನಾನು ಎಲ್ಲ ವಸ್ತುವನ್ನೂ ಬೆಳಗಿಸುವ ಜ್ಞಾನಜ್ಯೋತಿಸ್ವರೂಪನು. ॥೭॥

ಪರಬ್ರಹ್ಮಸ್ವರೂಪೋಽಸ್ಮಿ ಪರಾವರಸುಖೋಽಸ್ಮ್ಯಹಂ ।
ಸತ್ತಾಮಾತ್ರಸ್ವರೂಪೋಽಹಂ ದೃಕ್‌ದೃಶ್ಯಾದಿವಿವರ್ಜಿತಃ ॥೮॥

ಯತ್ಕಿಂಚಿದಪ್ಯಹಂ ನಾಸ್ತಿ ತೂಷ್ಣೀಂ ತೂಷ್ಣೀಮಿಹಾಸ್ಮ್ಯಹಂ ।
ಶುದ್ಧಮೋಕ್ಷಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೯॥

ಸರ್ವಾನಂದಸ್ವರೂಪೋಽಸ್ಮಿ ಜ್ಞಾನಾನಂದಮಹಂ ಸದಾ ।
ವಿಜ್ಞಾನಮಾತ್ರರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೧೦॥

ಬ್ರಹ್ಮಮಾತ್ರಮಿದಂ ಸರ್ವಂ ನಾಸ್ತಿ ನಾಸ್ತ್ಯತ್ರ ತೇ ಶಪೇ ।
ತದೇವಾಹಂ ನ ಸಂದೇಹ ಇತ್ಯೇವಂ ಬ್ರಹ್ಮತರ್ಪಣಂ ॥೧೧॥

ತ್ವಮಿತ್ಯೇತತ್ತದಿತ್ಯೇತನ್ನಾಸ್ತಿ ನಾಸ್ತೀತಿ ಕಿಂಚನ ।
ಶುದ್ಧಚೈತನ್ಯಮಾತ್ರೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೧೨॥

---

ಪರಬ್ರಹ್ಮನು ನಾನು. ಅತ್ಯುತ್ತಮವಾದ ಆತ್ಮಸುಖವನ್ನನುಭವಿಸುವೆನು. "ಸತ್" ಇದೆ—ಎಂಬುದರ ಭಾವರೂಪನು ನಾನು, ದೃಕ್ದೃಶ್ಯ-ದರ್ಶನವಸ್ತುಗಳು ನನ್ನಲ್ಲಿಲ್ಲ. ॥೮॥

ನಾನು ಯಾವುದೊಂದು ಚಿಕ್ಕವಸ್ತುವೂ ಅಲ್ಲ, ನಾನು ಯಾವ ಕಾರ್ಯಗಳನ್ನೂ ಮಾಡದೇ ಸಾಕ್ಷಿಯಾಗಿರುವೆನು, ಶುದ್ಧಮೋಕ್ಷಸ್ವರೂಪನು ನಾನು. ॥೯॥

ಎಲ್ಲ ಆನಂದಗಳ ಸ್ವರೂಪನು ನಾನು, ಅಂದರೆ ಲೋಕದ ಆನಂದಗಳೆಲ್ಲವೂ ನನ್ನ ಆನಂದದ ಕಿಂಚಿತ್ಕಿಂಚಿತ್ತಾದ ಅಂಶಗಳು, ನಾನು ಸದಾ ಜ್ಞಾನಾನಂದಸ್ವರೂಪನು, ನನ್ನ ಆನಂದವನ್ನು ನಾನೇ ಅನುಭವಿಸುವೆನು, ಆ ಆನಂದವೂ ನಾನೇ, ಆ ಅನುಭವವೂ ನಾನೇ, ನನ್ನ ಹೊರತಾಗಿ ಬೇರೆಯೇನೂ ಇಲ್ಲ. ॥೧೦॥

ಇದೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮನು ಹೊರತಾಗಿ ಯಾವುದೂ ಇಲ್ಲ, ಆ ಬ್ರಹ್ಮನೇ ನಾನು—ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೧೧॥

ನನ್ನಲ್ಲಿ ನೀನು,-ಅವನು-ಅದು-ಇದು,-ಎಂದು ಮೊದಲಾದ ಭೇದವಿಲ್ಲವು, ಯಾವ ಭೇದವೂ ಇಲ್ಲದೇ ಶುದ್ಧವಾದ ಜ್ಞಾನಮೂರ್ತಿಯು ನಾನು. ॥೧೨॥

ಅತ್ಯಂತಾಭಾವರೂಪೋಽಹಮಹಮೇವ ಪರಾತ್ಪರಃ ।
ಅಹಮೇವಸುಖಂ ನಾನ್ಯದಿತ್ಯೇವಂ ಬ್ರಹ್ಮತರ್ಪಣಂ ॥೧೩॥

ಇದಂ ಮೋಽಹಮಯಂ ಕಿಂಚಿನ್ನಾಸ್ತಿ ನಾಸ್ತ್ಯೇವ ತೇ ಶಪೇ ।
ನಿರ್ಗುಣಾನಂದರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೧೪॥

ಸಾಕ್ಷಿವಸ್ತುವಿಹೀನತ್ವಾತ್ಸಾಕ್ಷಿತ್ವಂ ನಾಸ್ತಿಮೇ ಸದಾ ।
ಕೇವಲಂ ಬ್ರಹ್ಮಭಾವತ್ವಾದಿತ್ಯೇವಂ ಬ್ರಹ್ಮತರ್ಪಣಂ ॥೧೫॥

ಅಹಮೇವಾವಿಶೇಷೋಽಹಮಹಮೇವ ಹಿ ನಾಮಕಂ ।
ಅಹಮೇವವಿಮೋಽಹಂ ವೈ ಇತ್ಯೇವಂ ಬ್ರಹ್ಮತರ್ಪಣಂ ॥೧೬॥

ಇಂದ್ರಿಯಾಭಾವರೂಪೋಽಹಂ ಸರ್ವಾಭಾವಸ್ವರೂಪಕಂ ।
ಬಂಧಮುಕ್ತಿವಿಹೀನೋಽಸ್ಮಿ ಇತ್ಯೇವಂ ಬ್ರಹ್ಮತರ್ಪಣಂ ॥೧೭॥

---

ನನ್ನಲ್ಲಿ ಪ್ರಪಂಚದ ಅತ್ಯಂತಾಭಾವವು ಇದೆ. ಆ ಅಭಾವವೂ ನಾನೇ, ಅಂದರೆ ನನ್ನಲ್ಲಾವ ಪ್ರಪಂಚವೂ ಯಾವಾಗಲೂ ಇಲ್ಲ, ಸರ್ವೋತ್ತಮನು ನಾನು. ಸುಖವು ನಾನು – ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೧೩॥

ಮೋಹವನ್ನುಂಟುಮಾಡುವ ಈ ಅಸತ್ಯವಸ್ತುಗಳಾವುವೂ ನನ್ನಲ್ಲಿಲ್ಲ. ಗುಣಗಳ ಲೇಶವೂ ಇಲ್ಲದ ಆನಂದಸ್ವರೂಪನು ನಾನು, ಎಂದು ತಿಳಿಯುವುದು ಬ್ರಹ್ಮತರ್ಪಣ. ॥೧೪॥

ಸಾಕ್ಷಿಯಾಗಿ ನಾನು ನೋಡಬಹುದಾದ ವಸ್ತುವೂ ಕಾರ್ಯಗಳೂ ವಸ್ತುತಃ ಇಲ್ಲದುದರಿಂದ ವಸ್ತುತಃ ನಾನು ಸಾಕ್ಷಿಯು ಅಲ್ಲ, ಶುದ್ಧಬ್ರಹ್ಮನು ನಾನು. ॥೧೫॥

ನನ್ನಲ್ಲಿ ಯಾವ ವಿಶೇಷವೂ ಇಲ್ಲ, ಎಲ್ಲ ಹೆಸರುಗಳೂ ನಾನೇ, ಎಲ್ಲ ಮೋಹವು ನಾನು-ಎಂದು ತಿಳಿಯುವುದು ಬ್ರಹ್ಮತರ್ಪಣವು. ॥೧೬॥

ಯಾವ ಇಂದ್ರಿಯಗಳೂ ನನಗಿಲ್ಲ, ಎಲ್ಲದರ ಅಭಾವವು ನಾನು, ನನಗೆ ಬಂಧನವೂ ಇಲ್ಲ, ಮುಕ್ತಿಯೂ ಇಲ್ಲ. ನಿಜವಾಗಿ ಬಂಧವಿದ್ದರೆತಾನೆ ಮುಕ್ತಿಯಿರುವುದು? ಎರಡೂ ಇಲ್ಲ-ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೧೭॥

ಸರ್ವಾನಂದಸ್ವರೂಪೋಽಹಂ ಸರ್ವಾನಂದಘನೋಽಸ್ಮ್ಯಹಂ ।
ನಿತ್ಯಚೈತನ್ಯಮಾತ್ರೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೧೮॥

ವಾಚಾಮಗೋಚರಶ್ಚಾಹಂ ವಾಙ್ಮನೋ ನಾಸ್ತಿ ಕಿಂಚನ ।
ಚಿದಾನಂದಮಯಶ್ಚಾಹಂ ಇತ್ಯೇವಂ ಬ್ರಹ್ಮತರ್ಪಣಂ ॥೧೯॥

ಸರ್ವತ್ರಪೂರ್ಣರೂಪೋಽಹಂ ಸರ್ವತ್ರ ಸುಖಮಸ್ಮ್ಯಹಂ ।
ಸರ್ವತ್ರಾಚಿಂತ್ಯರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೦॥

ಸರ್ವತ್ರ ತೃಪ್ತಿರೂಪೋಽಹಂ ಸರ್ವಾನಂದಮಯೋಽಸ್ಮ್ಯಹಂ ।
ಸರ್ವಶೂನ್ಯಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೧॥

ಸರ್ವದಾ ಮತ್ಸ್ವರೂಪೋಽಹಂ ಪರಮಾನಂದವಾನಹಂ ।
ಏಕಏವಾಹಮೇವಾಹಮಿತ್ಯೇವಂ ಬ್ರಹ್ಮತರ್ಪಣಂ ॥೨೨॥

---

ಎಲ್ಲ ಆನಂದಗಳೂ ನಾನೇ, ನಾನು ಮೇಲೂ ಕೆಳಗೂ, ಎಲ್ಲೆಡೆಯಲ್ಲೂ ಆನಂದಮಯನಾಗಿರುವೆನು. ನಿತ್ಯಜ್ಞಾನಮೂರ್ತಿಯು ನಾನು. ॥೧೮॥

ವಾಕ್ಕಿಗೆ ನಾನು ಗೋಚರನಲ್ಲವು, ವಾಕ್ಕು ಮನಗಳು ನನ್ನಲ್ಲಿಲ್ಲ, ಜ್ಞಾನಾನಂದ ಮೂರ್ತಿಯು ನಾನು-ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೧೯॥

ಎಲ್ಲೆಲ್ಲಿಯೂ ನಾನು ಪೂರ್ಣರೂಪದಿಂದಿರುವೆನು, ಸುಖರೂಪದಿಂದಿರುವೆನು, ಚಿಂತಿಸಲಾರದ ವ್ಯಾಪಕರೂಪದಿಂದ ಎಲ್ಲೆಡೆಯಲ್ಲೂ ಇರುವವನು ನಾನೇ. ॥೨೦॥

ಎಲ್ಲೆಲ್ಲಿಯೂ ನಾನು ತೃಪ್ತಿಯ ರೂಪದಿಂದಿರುವೆನು. ಆನಂದಮಯನು ನಾನು, ನನ್ನಲ್ಲಿ ಅಸತ್ಯವಾದ ಯಾವ ವಸ್ತುವೂ ಇಲ್ಲ-ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೨೧॥

ನಾನು ಸದಾ ನನ್ನ ಸ್ವರೂಪನೇ ಆಗಿರುವೆನು, ಆತ್ಮಾನಂದವನ್ನು ಸದಾ ಅನುಭವಿಸುವೆನು. ನಾನು ಓರ್ವನೇ ಇರುವೆನು, ನನ್ನ ಹೊರತು ಯಾರೂ ಇಲ್ಲ. ॥೨೨॥

ಮುಕ್ತೋಽಹಂ ಮೋಕ್ಷರೂಪೋಽಹಂ ಸರ್ವಂ ಮೌನಪರೋಽಸ್ಮ್ಯಹಂ।
ಸರ್ವನಿರ್ವಾಣರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೩॥

ಸರ್ವದಾ ಮತ್ಸ್ವರೂಪೋಽಹಂ ಸರ್ವದಾ ತುರ್ಯವಾನಹಂ ।
ತುರ್ಯಾತೀತಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೪॥

ಸತ್ಯವಿಜ್ಞಾನಮಾತ್ರೋಽಹಂ ಸನ್ಮಾತ್ರಾನಂದವಾನಹಂ ।
ನಿರ್ವಿಕಲ್ಪಸ್ವರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೫॥

ಸರ್ವದಾ ಹ್ಯಜರೂಪೋಽಹಂ ನಿರೀಹೋಽಹಂ ನಿರಂಜನಃ ।
ಬ್ರಹ್ಮವಿಜ್ಞಾನರೂಪೋಽಹಮಿತ್ಯೇವಂ ಬ್ರಹ್ಮತರ್ಪಣಂ ॥೨೬॥

ಬ್ರಹ್ಮತರ್ಪಣಮೇವೋಕ್ತಮೇತತ್ಪ್ರಕರಣಂ ಮಯಾ ।
ಯಚ್ಛೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿಸ್ವಯಂ ॥೨೭॥

---

ಮೋಕ್ಷವನ್ನು ಹೊಂದಿರುವೆನು. ನಾನು, ಮೋಕ್ಷವೂ ನಾನೇ, ಸದಾ ನಾನು ಮೌನಿಯಾಗಿರುವೆನು, ಎಲ್ಲ ಸುಖಗಳ ಸ್ವರೂಪವು ನಾನು. ॥೨೩॥

ಮಾಯೆ, ಈಶ್ವರ, ಜೀವಿಗಳ ಭೇದವಿಲ್ಲದ ನಾಲ್ಕನೆಯವನು ನಾನು, ಆ ನಾಲ್ಕು ಎಂಬ ಸಂಖ್ಯಾಭೇದವೂ ನನ್ನಲ್ಲಿಲ್ಲ-ಎಂದು ತಿಳಿಯುವುದು ಬ್ರಹ್ಮತರ್ಪಣವು. ॥೨೪॥

ಸತ್ಯಸ್ವರೂಪನೂ, ಜ್ಞಾನಸ್ವರೂಪನೂ, ಆನಂದಸ್ವರೂಪನೂ, ಯಾವ ಆಕಾರವೂ ಇಲ್ಲದವನೂ ನಾನು ಆಗಿರುವೆನು-ಎಂದು ತಿಳಿಯುವುದೇ ಬ್ರಹ್ಮತರ್ಪಣವು. ॥೨೫॥

ನಾನು ಎಂದೂ ಜನಿಸುವುದಿಲ್ಲ, ನನಗೆ ಯಾವ ಆಸೆಯೂ ಇಲ್ಲ. ಯಾವ ಕರ್ಮಗಳ ಸಂಬಂಧವೂ ಇಲ್ಲ. ಬ್ರಹ್ಮಜ್ಞಾನಸ್ವರೂಪನು ನಾನು. ॥೨೬॥

ಎಲೈ ನಿದಾಘಮುನಿಯೇ, ಹೀಗೆ ನಿನಗೆ ಬ್ರಹ್ಮತರ್ಪಣವನ್ನು ವಿವರಿಸುವೆನು. ಇದನ್ನು ಯಾವನಾದರೂ ಒಂದುಬಾರಿಕೇಳಿದರೂ ಅವನು ಬ್ರಹ್ಮನೇ ಆಗುವನು. ॥೨೭॥

ನಿತ್ಯಹೋಮಂ ಪ್ರವಕ್ಷ್ಯಾಮಿ ಸರ್ವವೇದೇಷು ದುರ್ಲಭಂ ।
ಸರ್ವಶಾಸ್ತ್ರಾರ್ಥಮುದ್ಧೃತಂ ಸಾವಧಾನಮನಾಃ ಶೃಣು ॥೨೮॥

ಅಹಂ ಬ್ರಹ್ಮಾಸ್ಮಿ ಶುದ್ಧೋಽಸ್ಮಿ ನಿತ್ಯೋಽಸ್ಮಿ ಪ್ರಭುರಸ್ಮ್ಯಹಂ ।
ಓಂಕಾರಾರ್ಥಸ್ವರೂಪೋಽಸ್ಮಿ ಏವಂ ಹೋಮಂ ಸುದುರ್ಲಭಂ ॥೨೯॥

ಪರಮಾತ್ಮ ಸ್ವರೂಪೋಽಹಂ ಪರಾನಂದಪರೋಽಸ್ಮ್ಯಹಂ ।
ಚಿದಾನಂದಸ್ವರೂಪೋಽಸ್ಮಿ ಏವಂ ಹೋಮಂ ಸುದುರ್ಲಭಂ ॥೩೦॥

ನಿತ್ಯಾನಂದಸ್ವರೂಪೋಽಸ್ಮಿ ನಿಷ್ಕಲಂಕಮಯೋಽಸ್ಮ್ಯಹಂ ।
ಚಿದಾಕಾರಸ್ವರೂಪೋಽಸ್ಮಿ ಏವಂ ಹೋಮಂ ಸುದುರ್ಲಭಂ ॥೩೧॥

ನಹಿ ಕಿಂಚಿತ್ಸ್ವರೂಪೋಽಸ್ಮಿ ನಾಹಮಸ್ಮಿ ನಸೋಽಸ್ಮ್ಯಹಂ ।
ನಿರ್ವ್ಯಾಪಾರಸ್ವರೂಪೋಽಸ್ಮಿ ಏವಂ ಹೋಮಂ ಸುದುರ್ಲಭಂ ॥೩೨॥

---

ಅದ್ವಿತೀಯಬ್ರಹ್ಮಪರವಾದ ಎಲ್ಲ ಶಾಸ್ತ್ರಗಳ ತಾತ್ಪರ್ಯವಾದ ವೇದ ಗಳಿಂದಲೂ ವರ್ಣಿಸಲ್ಪಡದಂತಹ ನಿತ್ಯಹೋಮವನ್ನು ಹೇಳುವೆನು, ಗಮನವಿಟ್ಟು ಕೇಳು. ॥೨೮॥

ನಾನು ಬ್ರಹ್ಮನು, ಶುದ್ಧನು, ನಿತ್ಯನು, ಈಶ್ವರನು, ಓಂಕಾರವು ನನ್ನನ್ನೇ ಹೇಳುತ್ತಿರುವುದು-ಎಂದು ತನ್ನನ್ನು ಪರಮಾತ್ಮನೆಂಬ ಜ್ಯೋತಿಯಲ್ಲಿ ಸಮರ್ಪಿಸು ವುದೇ ನಿತ್ಯಹೋಮವು. ಇದು ಆತ್ಮಾನುಭವದಿಂದ ಮಾತ್ರ ಸಾಧ್ಯವು. ॥೨೯॥

ನಾನೇ ಪರಮಾತ್ಮನು, ಪರಮಾನಂದಸ್ವರೂಪನು ನಾನು, ಜ್ಞಾನಾನಂದ ಸ್ವರೂಪನು ನಾನು-ಎಂದು ಪರಮಾತ್ಮಾಗ್ನಿಯಲ್ಲಿ ತನ್ನನ್ನರ್ಪಿಸುವುದು ಅತ್ಯುತ್ತಮ ವಾದ ಅತಿದುರ್ಲಭವಾದಂತಹ ಹೋಮವು. ॥೩೦॥

ನಿತ್ಯಾನಂದಸ್ವರೂಪನು ನಾನು, ನನ್ನಲ್ಲಿ ಯಾವ ಕಳಂಕ (ಪಾಪ)ವೂ ಇಲ್ಲ. ಜ್ಞಾನಮೂರ್ತಿಯು ನಾನು- ಈ ಆತ್ಮಾನುಭವವೇ ನಿತ್ಯಹೋಮವು. ॥೩೧॥

ನನ್ನ ಸ್ವರೂಪವು ಚಿಕ್ಕದಲ್ಲ, ವ್ಯಾಪಕವಾದುದು, ನಾನು ನಾನಲ್ಲ, ಅವನು ನಾನಲ್ಲ-ಅಂದರೆ ಅದ್ವಿತೀಯನಾದ ನನಗೆ ನಾನು ಅವನು-ಎಂಬ ಭೇದವ್ಯವಹಾರವು ವಸ್ತುತಃ ಇಲ್ಲ, ನನ್ನಲ್ಲಿ ಯಾವ ಕಾರ್ಯವೂ ಇಲ್ಲ. ॥೩೨॥

ನಿರಂಶೋಽಸ್ಮಿ ನಿರಾಭಾಸೋ ನಮನೋನೇಂದ್ರಿಯೋಽಸ್ಮ್ಯಹಂ ।
ನ ಬುದ್ಧಿರ್ನವಿಕಲ್ಪೋಽಹಮೇವಂ ಹೋಮಂ ಸುದುರ್ಲಭಂ ॥೩೩॥

ನ ದೇಹಾದಿ ಸ್ವರೂಪೋಽಸ್ಮಿ ತ್ರಯಾದಿ ಪರಿವರ್ಜಿತಃ ।
ನ ಜಾಗ್ರತ್ಸ್ವಪ್ನರೂಪೋಽಹಮೇವಂ ಹೋಮಂ ಸುದುರ್ಲಭಂ ॥೩೪॥

ಶ್ರವಣಂ ಮನನಂ ನಾಸ್ತಿ ನಿದಿಧ್ಯಾಸನಮೇವ ಚ ।
ಸ್ವಗತಂ ಚ ಮೇ ಕಿಂಚಿದೇವಂ ಹೋಮಂ ಸುದುರ್ಲಭಂ ॥೩೫॥

ಅಸತ್ಯಂ ಹಿ ಮನಸ್ಸತ್ತಾ ಅಸತ್ಯಂ ಬುದ್ಧಿರೂಪಕಂ ।
ಅಹಂಕಾರಮಸದ್ವಿದ್ಧಿ ಕಾಲತ್ರಯಮಸತ್ಸದಾ ॥೩೬॥

ಗುಣತ್ರಯಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೩೭॥

ಶ್ರುತಂ ಸರ್ವಮಸದ್ವಿದ್ಧಿ ವೇದಂ ಸರ್ವಮಸತ್ಸದಾ ।
ಶಾಸ್ತ್ರಂ ಸರ್ವಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೩೮॥

---

ನನ್ನಲ್ಲಿ ಯಾವ ಅಂಶವೂ ಇಲ್ಲ. ಅಂಶದಿಂದ ನಾನು ಅವತರಿಸುವುದಿಲ್ಲ, ಮನಸ್ಸು ಇಂದ್ರಿಯಗಳು ನಾನಲ್ಲ, ಬುದ್ಧಿಯು ನಾನಲ್ಲ, ವಿಕಲ್ಪ (ಸಂಶಯವು) ನಾನಲ್ಲ. ॥೩೩॥

ಸ್ಥೂಲದೇಹ ಸೂಕ್ಷ್ಮದೇಹ ಕಾರಣದೇಹಗಳು ನಾನಲ್ಲ, ಅವುಗಳು ವಸ್ತುತಃ ನನಗಿಲ್ಲವೂ ಇಲ್ಲ, ಜಾಗ್ರದವಸ್ಥೆ ಸ್ವಪ್ನಾವಸ್ಥೆಗಳೂ ನನ್ನಲ್ಲಿಲ್ಲ-ಎನ್ನುವುದೇ ನಿತ್ಯ ಹೋಮವು. ॥೩೪॥

ಶ್ರವಣ ಮನನ ನಿದಿಧ್ಯಾಸಗಳು ನನಗಿಲ್ಲ, ರಹಸ್ಯವೆಂಬುದೂ ನನಗಿಲ್ಲ. ॥೩೫॥

ಮನಸ್ಸು ಅಸತ್ಯವು, ಬುದ್ಧಿಯು ಅಸತ್ಯವು, ಅಹಂಕಾರವು ಅಸತ್ಯವು, ಮೂರು ಕಾಲಗಳೂ ಅಸತ್ಯವಾದುವು, ಸತ್ತ್ವ-ರಜಸ್ಸು-ತಮಸ್ಸು-ಗಳೆಂಬ ಮೂರು ಗುಣಗಳೂ ಅಸತ್ಯವಾದುವುಗಳು, ನಾನೋರ್ವನೇ ಸತ್ಯನು. ॥೩೭॥

ಕೇಳಿಸುವುದೆಲ್ಲವೂ ಅಸತ್ಯವಾದುದು, ವೇದವೆಲ್ಲವೂ ಅಸತ್ಯವಾದುದು. ಶಾಸ್ತ್ರವೆಲ್ಲ ಅಸತ್ಯವಾದುದು, ನಾನೋರ್ವನೇ ಸತ್ಯವು. ॥೩೮॥

ಮೂರ್ತಿತ್ರಯಮಸದ್ವಿದ್ಧಿ ಲೋಕತ್ರಯಮಸತ್ಸದಾ ।
ಸರ್ವಲೋಕಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೩೯॥

ಯತ್ತದ್ದೃಶ್ಯಮಸದ್ವಿದ್ಧಿ ಸರ್ವಭೂತಮಸತ್ಸದಾ ।
ಸರ್ವತತ್ವಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೦॥

ನಾನಾರೂಪಮಸದ್ವಿದ್ಧಿ ನಾನಾವರ್ಣಮಸತ್ಸದಾ ।
ಜಾತಿರ್ನಾನಾ ಅಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೧॥

ಶಾಸ್ತ್ರಜ್ಞಾನಮಸದ್ವಿದ್ಧಿ ವೇದಜ್ಞಾನಂ ತಪೋಽಪ್ಯಸತ್ ।
ಸರ್ವತತ್ವಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೨॥

ಗುರುಶಿಷ್ಯಮಸದ್ವಿದ್ಧಿ ಗುರುರ್ಮಂತ್ರಮಸತ್ತತಃ ।
ಯದ್ದೃಶ್ಯಂ ತದಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೩॥

ಸರ್ವಾನ್ ಭೋಗಾನಸದ್ವಿದ್ಧಿ ಯಚ್ಚಿಂತ್ಯಂ ತದಸತ್ಸದಾ ।
ಯದ್ದೃಶ್ಯಂ ತದಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೪॥

---

ಬ್ರಹ್ಮವಿಷ್ಣುಮಹೇಶ್ವರರೆಂಬ ತ್ರಿಮೂರ್ತಿಗಳು ಅಸತ್ಯವು, ಭೂಲೋಕ ಪಾತಾಳ ಸ್ವರ್ಗ-ಮೊದಲಾದ ಲೋಕಗಳೆಲ್ಲವೂ ಅಸತ್ಯವಾದುವುಗಳು. ॥೩೯॥

ಕಣ್ಣಿಗೆ ಕಾಣಿಸುವುದೆಲ್ಲವೂ ಅಸತ್ಯವು, ಮಹಾಭೂತ ಸೂಕ್ಷ್ಮಭೂತಗಳೆಲ್ಲವೂ ಅಸತ್ಯ, ಪ್ರಾಣಿಗಳೆಲ್ಲವೂ ಅಸತ್ಯ, ಸಾಂಖ್ಯರು ಹೇಳುವ ತತ್ವಗಳೆಲ್ಲವೂ ಅಸತ್ಯವಾದವುಗಳು. ನಾನೊಬ್ಬನೇ ಸತ್ಯ. ॥೪೦॥

ಅನೇಕ ಬಗೆಯ ರೂಪಗಳೆಲ್ಲವೂ ಅಸತ್ಯ, ವರ್ಣಗಳೆಲ್ಲವೂ ಅಸತ್ಯ, ಜಾತಿಗಳೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ-ಇದೇ ನಿತ್ಯಹೋಮವು. ॥೪೧॥

ಶಾಸ್ತ್ರಗಳ ಜ್ಞಾನವೂ, ವೇದಗಳ ಜ್ಞಾನವೂ ತಪಸ್ಸೂ ಅಸತ್ಯವಾದುವುಗಳು, ತತ್ವಗಳೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ. ॥೪೨॥

ಗುರುಶಿಷ್ಯರು ಅಸತ್ಯ, ಗುರೂಪದೇಶವೂ ಅಸತ್ಯ, ಕಾಣಿಸುವುದೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ-ಹೀಗೆ ತಿಳಿಯುವುದೇ ನಿತ್ಯಹೋಮವು. ॥೪೩॥

ಭೋಗಗಳೆಲ್ಲವೂ ಅಸತ್ಯ, ಚಿಂತಿಸು (ವಿಮರ್ಶಿಸು) ವುದೆಲ್ಲವೂ ಅಸತ್ಯ,

ಸರ್ವೇಂದ್ರಿಯಮಸದ್ವಿದ್ಧಿ ಸರ್ವಮಂತ್ರಮಸತ್ತ್ವತಿ ।
ಸರ್ವಪ್ರಾಣಾನಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೫॥

ಜೀವಂ ದೇಹಮಸದ್ವಿದ್ಧಿ ಪರೇ ಬ್ರಹ್ಮಣಿ ನೈವ ಹಿ ।
ಮಯಿ ಸರ್ವಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೬॥

ದೃಷ್ಟಂ ಶ್ರುತಮಸದ್ವಿದ್ಧಿ ಓತಪ್ರೋತಮಸನ್ಮಯಿ ।
ಕಾರ್ಯಾಕಾರ್ಯಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೭॥

ದೃಷ್ಟಂ ಪ್ರಾಪ್ತಮಸದ್ವಿದ್ಧಿ ಸಂತೋಷಮಸದೇವ ಹಿ ।
ಸರ್ವಕರ್ಮಾಣ್ಯಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೮॥

ಸರ್ವಾಸರ್ವಮಸದ್ವಿದ್ಧಿ ಪೂರ್ಣಾಪೂರ್ಣಮಸತ್ಪರೇ ।
ಸುಖದುಃಖಮಸದ್ವಿದ್ಧಿ ಏವಂ ಹೋಮಂ ಸುದುರ್ಲಭಂ ॥೪೯॥

---

ನಾನೊಬ್ಬನೇ ಸತ್ಯ. ಹೀಗೆ ಆತ್ಮನು ಹೊರತು ಎಲ್ಲವೂ ಅಸತ್ಯವೆಂದು ಪ್ರಪಂಚ ಸತ್ಯತೆಯನ್ನು ನಿರಾಕರಿಸುವುದೇ ನಿತ್ಯಹೋಮ. ॥೪೪॥

ಇಂದ್ರಿಯಗಳೆಲ್ಲವು ಅಸತ್ಯ, ಮಂತ್ರಗಳೆಲ್ಲವು ಅಸತ್ಯ, ಪ್ರಾಣಗಳೆಲ್ಲವು ಅಸತ್ಯ. ॥೪೫॥

ಜೀವನೂ ದೇಹವೂ ಅಸತ್ಯ, ಪರಬ್ರಹ್ಮನಾದ ನನ್ನಲ್ಲಿ ದೇಹಭಾವವು ಇಲ್ಲ, ನಾನೊಬ್ಬನೇ ಸತ್ಯವು. ॥೪೬॥

ನೋಡುವುದು, ಕೇಳುವುದು-ಎಲ್ಲವೂ ಅಸತ್ಯ, ಸೇರಿರುವುದು-ಸೇರದಿರುವುದು ಎಲ್ಲವೂ ಅಸತ್ಯ, ದುಷ್ಕಾರ್ಯ-ಸತ್ಕಾರ್ಯಗಳೆಲ್ಲವೂ ಅಸತ್ಯ. ॥೪೭॥

ನೋಡಿದುದೆಲ್ಲವೂ ಅಸತ್ಯ, ಸಂತೋಷವೆಲ್ಲವೂ ಅಸತ್ಯ, ಕಾರ್ಯಗಳೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ. ॥೪೮॥

ದೊಡ್ಡದು-ಚಿಕ್ಕದು, ಪೂರ್ಣವಾದುದು-ಅಪೂರ್ಣವಾದುದು, ಸುಖ-ದುಃಖ ಇವೆಲ್ಲವೂ ಅಸತ್ಯ, ನಾನೊಬ್ಬನೇ ಸತ್ಯ. ॥೪೯॥

ಯಥಾಧರ್ಮಮಸದ್ವಿದ್ಧಿ ಪುಣ್ಯಾಪುಣ್ಯಮಸತ್ಸದಾ ।
ಲಾಭಾಲಾಭಮಸದ್ವಿದ್ಧಿ ದಾನಂ ದೇಯಮಸತ್ಸದಾ ॥೫೦॥

ಸದಾಜಯಮಸದ್ವಿದ್ಧಿ ತಥಾ ಗರ್ವಮಸತ್ಸದಾ ।
ಮನೋಮಯಮಸದ್ವಿದ್ಧಿ ಸಂಶಯಂ ನಿಶ್ಚಯಂ ತಥಾ ॥೫೧॥

ಶಬ್ದಂ ಸರ್ವಮಸದ್ವಿದ್ಧಿ ಸ್ಪರ್ಶಂ ಸರ್ವಮಸತ್ಸದಾ ।
ರೂಪಂ ಸರ್ವಮಸದ್ವಿದ್ಧಿ ರಸಂ ಸರ್ವಮಸತ್ಸದಾ ॥೫೨॥

ಗಂಧಂ ಸರ್ವಮಸದ್ವಿದ್ಧಿ ಜ್ಞಾನಂ ಸರ್ವಮಸತ್ಸದಾ ।
ಸರ್ವಾಜ್ಞಾನಮಸದ್ವಿದ್ಧಿ ಅಸತ್ಪ್ರಕೃತಿರುಚ್ಯತೇ ॥೫೩॥

ಭೂತಂ ಭವ್ಯಮಸದ್ವಿದ್ಧಿ ಅಸತ್ಪ್ರಕೃತಿರುಚ್ಯತೇ ।
ಅಸದೇವ ಸದಾ ಸರ್ವಮಸದೇವ ಭವೋದ್ಭವಂ ॥೫೪॥

ಅಸದೇವಮಸದ್ವಿದ್ಧಿ ಗುಣಂ ಸರ್ವಮಸತ್ಸದಾ ।
ಶಶಶೃಂಗವದೇವೇದಂ ಶಶಶೃಂಗವದಂತರಂ ॥೫೫॥

---

ಧರ್ಮಾಚರಣೆಯು ಅಸತ್ಯ, ಪಾಪಪುಣ್ಯಗಳು ಅಸತ್ಯ, ಲಾಭನಷ್ಟಗಳು ಅಸತ್ಯ, ದಾನ-ದೇಯಗಳು ಅಸತ್ಯ, ನಾನೊರ್ವನೇ ಸತ್ಯ. ॥೫೦॥

ಜಯವು ಅಸತ್ಯ, ಗರ್ವವು ಅಸತ್ಯ, ಮನೋಮಯಕೋಶ (ಅಹಂಕಾರ)ವು ಅಸತ್ಯ, ಸಂಶಯ-ನಿಶ್ಚಯಗಳು ಅಸತ್ಯ, ನಾನೊರ್ವನೇ ಸತ್ಯ. ॥೫೧॥

ಆಕಾಶ ವಾಯು ತೇಜಸ್ಸು ಜಲ ಭೂಮಿಗಳ ಮುಖ್ಯಗುಣಗಳಾದ ಶಬ್ದ ಸ್ಪರ್ಶರೂಪ ರಸ ಗಂಧ-ಗಳೆಲ್ಲವೂ ಅಸತ್ಯವಾದವುಗಳು. ಇವುಗಳ ಜ್ಞಾನವೆಲ್ಲವೂ ಅಸತ್ಯ, ಅಜ್ಞಾನವು ಅಸತ್ಯ, ಸಾಂಖ್ಯರ ಪ್ರಕೃತಿಯು ಅಸತ್ಯ. ॥೫೨-೫೩॥

ಹಿಂದೆ ಜನಿಸಿದ, ಈಗ ಜನಿಸುತ್ತಿರುವ ಮುಂದೆ ಜನಿಸುವಂತಹ ವಸ್ತುಗಳೆಲ್ಲವೂ ಅಸತ್ಯ. ಹೀಗೆ ನನ್ನ ಹೊರತು ಎಲ್ಲವೂ ಅಸತ್ಯ. ॥೫೪॥

ಅಸತ್ಯವೆಂಬುವುದು ಅಸತ್ಯ, ಗುಣಗಳೆಲ್ಲವು ಅಸತ್ಯ, ಮೊಲದ ಕೊಂಬಿನಂತೆ ಈ ಪ್ರಪಂಚವೆಲ್ಲವೂ ಅಸತ್ಯ, ನಾನೊರ್ವನೇ ಸತ್ಯ. ॥೫೫॥

ಶಶಶೃಂಗವದೇವ ತ್ವಂ ಶಶಶೃಂಗವದಸ್ಮ್ಯಹಂ ।
ಇತ್ಯೇವಮಾತ್ಮಹೋಮಾಖ್ಯಂ ಪ್ರೋಕ್ತಂ ಪ್ರಕರಣಂ ಮಯಾ ॥೫೬॥
ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೫೭॥

॥ ಸ್ಕಂದ ಉವಾಚ ॥

ಯಸ್ಮಿನ್ ಸಂಚವಿಚ್ಛೈತಿ ಸರ್ವಮಖಿಲಂ ದ್ಯೋತಂತಿ ಸೂರ್ಯೇಂದವಃ
ವಿದ್ಯುದ್ವಹ್ನಿಮರುದ್ಗಣಾಃ ಸವರುಣಾಃ ಭೀತಾ ಭಜಂತೀಶ್ವರಂ ।
ಭೂತಂ ಚಾಪಿ ಭವತ್ಯದೃಶ್ಯಮಖಿಲಂ ಶಂಭೋಃ ಸುಖಾಂಶಂ ಜಗತ್
ಜಾತಂ ಚಾಪಿ ಜನಿಷ್ಯತಿ ಪ್ರತಿಭವಂ ದೇವಾಸುರೈರೀರಿತಂ ॥೫೮॥
ತಂ ನೇಹಾಸ್ತಿ ನ ಕಿಂಚಿದತ್ರ ಭಗವಧ್ಯಾನಾನ್ನ ಕಿಂಚಿತ್ಪ್ರಿಯಂ ॥೫೯॥
ಯಃ ಪ್ರಾಣಾಪಾನ ಭೇದೈರ್ಮನನಮನನಧಿಯಾ ಧಾರಣಾಪಂಚಕಾದ್ಯೈಃ
ಮಧ್ಯೇ ವಿಶ್ವಜನೀನಸನ್ನಪಿ ಶಿವೋ ನೋ ದೃಶ್ಯತೇ ಸೂಕ್ಷ್ಮಯಾ ।
ಬುದ್ಧ್ಯಾ ಹೃದ್ಯತಯಾಪಿ ಶ್ರುತಿವಚನಶತೈರ್ದೇಶಿಕೋಕ್ತ್ಯೈವ ಸೂಕ್ತ್ಯಾ
ಯೋಗ್ಯೈರ್ಭಕ್ತಿಸಮನ್ವಿತೈಃ ಶಿವತರೋ ದೃಶ್ಯೋ ನ ಚಾನ್ಯತ್ತಥಾ ॥೬೦॥

---

ನೀನು-ಎಂಬುದು ಮೊಲದ ಕೊಂಬಿನಂತೆ ಅಸತ್ಯ, ನಾನು-ಎಂಬುದು ಮೊಲದ ಕೊಂಬಿನಂತೆ ಅಸತ್ಯ, ಎಲೈ ನಿದಾಘಮುನಿಯೆ, ಹೀಗೆ ನಿನಗೆ ಆತ್ಮಹೋಮವನ್ನು ವಿವರಿಸಿರುವೆನು, ಈ ಆತ್ಮಹೋಮವನ್ನು ಒಂದು ಬಾರಿ ಕೇಳಿದವನೂ ಸಹ ಬ್ರಹ್ಮನಾಗುವನು. ॥೫೭॥

ಪ್ರಪಂಚವೆಲ್ಲವೂ ಪರಮೇಶ್ವರನಲ್ಲಿಯೇ ಪ್ರಳಯವನ್ನೈದುವುದು. ಸೂರ್ಯಚಂದ್ರರು, ವಿದ್ಯುತ್ ಅಗ್ನಿಗಳು ಆ ದೇವನ ಪ್ರಕಾಶದಿಂದಲೇ ಬೆಳಗುವರು. ವಾಯು ವರುಣ ಸೂರ್ಯ ಚಂದ್ರರು ಆ ದೇವನ ಭಯದಿಂದಲೇ ತಮ್ಮ ಕಾರ್ಯಗಳನ್ನು ಮಾಡುತ್ತಿರುವರು. ಪ್ರತಿ ಕಲ್ಪದಲ್ಲಿಯೂ ಜಗತ್ತು ಆ ದೇವನಿಂದಲೇ ಜನಿಸುವುದು ಆದರೂ ಜಗತ್ತು ವಸ್ತುತಃ ಸತ್ಯವಾದುದಲ್ಲ, ಪರಮಾತ್ಮಜ್ಞಾನದಿಂದ ಆ ಜಗತ್ತೆಲ್ಲವೂ ಇಲ್ಲವಾಗುವುದು. ॥೫೮-೫೯॥

ಪ್ರಾಣಾಪಾನಾದಿ-ಐದು ಪ್ರಾಣಗಳುಳ್ಳ ಪ್ರಾಣಿಶರೀರದಲ್ಲಿ ಆತ್ಮರೂಪದಿಂದ ಪ್ರಕಾಶಿಸುತ್ತಿದ್ದರೂ ಜನಗಳಾತನನ್ನು ನೋಡಲಾರದವರಾಗಿರುವರು. ಪರಿಪಕ್ವವಾದ

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ನವಮೋಽಧ್ಯಾಯಃ

---

ಬುದ್ಧಿಯಿಂದಲೂ ವೇದವಾಕ್ಯಗಳಿಂದಲೂ ಗುರೂಪದೇಶದಿಂದಲೂ ಯೋಗಗಳಿಂದಲೂ ಭಕ್ತಿಯಿಂದಲೂ ಆ ದೇವದೇವನನ್ನು ಸಾಕ್ಷಾತ್ಕರಿಸಿಕೊಳ್ಳಬಹುದು.॥೬೦॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಒಂಬತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದಶಮೋಽಧ್ಯಾಯಃ

|| ಋಭುರುವಾಚ ||

ಬ್ರಹ್ಮಜ್ಞಾನಂ ಪ್ರವಕ್ಷ್ಯಾಮಿ ಜೀವನ್ಮುಕ್ತಸ್ಯ ಲಕ್ಷಣಂ ।
ಆತ್ಮಮಾತ್ರೇಣ ಯಸ್ತಿಷ್ಠೇತ್ಸ ಜೀವನ್ಮುಕ್ತ ಉಚ್ಯತೇ ||೧||

ಅಹಂ ಬ್ರಹ್ಮವದೇವೇದಮಹಮಾತ್ಮಾ ನ ಸಂಶಯಃ ।
ಚೈತನ್ಯಾತ್ಮೇತಿ ಯಸ್ತಿಷ್ಠೇಜ್ಜೀವನ್ಮುಕ್ತಃ ಸ ಉಚ್ಯತೇ ||೨||

---

## ಹತ್ತನೆಯ ಅಧ್ಯಾಯ

ಋಭುವು ಹೇಳಿದನು—ಎಲೈ ನಿದಾಘಮುನಿಯೇ, ಬ್ರಹ್ಮಜ್ಞಾನವನ್ನೂ ಜೀವನ್ಮುಕ್ತನ ಲಕ್ಷಣವನ್ನೂ ಹೇಳುವೆನು. ಜೀವನ್ಮುಕ್ತನೆಂದರೆ ಕೇವಲ ಆತ್ಮರೂಪನಾಗಿ ಯಾವನು ಆತ್ಮಾನಂದವನ್ನನುಭವಿಸುವನೋ ಅವನೇ ಜೀವನ್ಮುಕ್ತನು. ಜೀವಂತ (ಶರೀರವುಳ್ಳವ) ನಾಗಿದ್ದೂ ಮುಕ್ತನಾಗಿರುವವನು, ಸಂಸಾರಬಂಧನವನ್ನು ಕಳೆದುಕೊಂಡಿರುವನು. ||೧||

ನಾನೇ ಬ್ರಹ್ಮನು, ನಾನೇ ಆತ್ಮನು, ಜ್ಞಾನಮೂರ್ತಿಯು ನಾನು-ಎಂದಾವನು ಆತ್ಮಾನುಭವದಿಂದ ಇರುವನೋ ಅವನು ಜೀವನ್ಮುಕ್ತನು. ||೨||

ಚಿದಾತ್ಮಾಹಂ ಪರಾತ್ಮಾಹಂ ನಿರ್ಗುಣೋಽಹಂ ಪರಾತ್ಪರಃ ।
ಇತ್ಯೇವಂ ನಿಶ್ಚಯೋ ಯಸ್ಯ ಜೀವನ್ಮುಕ್ತಸ್ಸ ಉಚ್ಯತೇ ॥೩॥

ದೇಹತ್ರಯಾತಿರಿಕ್ತೋಽಹಂ ಬ್ರಹ್ಮಚೈತನ್ಯಮಸ್ಮ್ಯಹಂ ।
ಬ್ರಹ್ಮಾಹಮಿತಿ ಯಸ್ಯಾಂತಃ ಜೀವನ್ಮುಕ್ತಸ್ಸ ಉಚ್ಯತೇ ॥೪॥

ಯಸ್ಯ ದೇಹಾದಿಕಂ ನಾಸ್ತಿ ಚಿನ್ಮಾತ್ರೇಣಾವತಿಷ್ಠತೇ ।
ಪರಾನಂದೋ ಮುದಾನಂದಃ ಸ ಜೀವನ್ಮುಕ್ತ ಉಚ್ಯತೇ ॥೫॥

ಯಸ್ಯ ಕಿಂಚಿದಹಂ ನಾಸ್ತಿ ಯಸ್ಯ ಬ್ರಹ್ಮೇತಿ ನಿಶ್ಚಯಃ ।
ಪರಾನಂದಪ್ರಪೂರ್ಣೋ ಯಃ ಸ ಜೀವನ್ಮುಕ್ತ ಉಚ್ಯತೇ ॥೬॥

ಆನಂದಘನರೂಪೋಽಸ್ಮಿ ಪರಾನಂದಪರೋಽಸ್ಮ್ಯಹಂ ।
ಯಶ್ಚಿದೇವಂ ಪರಾನಂದಂ ಸ ಜೀವನ್ಮುಕ್ತ ಉಚ್ಯತೇ ॥೭॥

---

ಜ್ಞಾನಮೂರ್ತಿಯು ನಾನು, ಪರಮಾತ್ಮನು ನಾನು, ಅನಿತ್ಯವಾದಂತಹ ಯಾವ ಗುಣಗಳೂ ಇಲ್ಲ. ಸರ್ವೋತ್ತಮನು ನಾನು-ಎಂದಾವನಿಗೆ ನಿಶ್ಚಯವು ಇರುವುದೋ ಅವನೇ ನಿಜವಾದ ಜೀವನ್ಮುಕ್ತನು. ॥೩॥

ಕಾರಣ ಸೂಕ್ಷ್ಮ, ಸ್ಥೂಲಗಳೆಂಬ ಮೂರು ಬಗೆಯ ದೇಹಗಳೂ ನನಗಿಲ್ಲ. ಬ್ರಹ್ಮವಸ್ತುವು ನಾನು, ಜ್ಞಾನಸ್ವರೂಪವು ನಾನು, ಎಂದು ತಿಳಿಯುವವನೇ ಜೀವನ್ಮುಕ್ತನು. ॥೪॥

ಯಾವನು ದೇಹದಲ್ಲಿ ಮಮತೆಯಿಲ್ಲದೆ ಕೇವಲ ಆತ್ಮನನ್ನೇ ಅನುಸಂಧಾನ ಮಾಡುತ್ತಾ ಆತ್ಮಾನಂದವನ್ನು ಅನುಭವಿಸುತ್ತಿರುವನೋ ಅವನೇ ಜೀವನ್ಮುಕ್ತನು. ॥೫॥

ಯಾವನಿಗೆ "ನಾನು" ಎಂಬ ದೇಹಾತ್ಮಜ್ಞಾನವಿಲ್ಲವೋ ಯಾವನು ತಾನೇ ಬ್ರಹ್ಮನೆಂದು ತಿಳಿದು ಬ್ರಹ್ಮಾನಂದದಿಂದ ತುಂಬಿರುವನೋ ಅವನೇ ಜೀವನ್ಮುಕ್ತನು. ॥೬॥

ನಾನು ಮೇಲೂ ಕೆಳಗೂ ಎಲ್ಲೆಡೆಯಲ್ಲೂ ಆನಂದರೂಪನು. ಆನಂದವನ್ನನುಭವಿಸುವವನು ನಾನು. ಹೀಗೆ ಆತ್ಮಾನಂದವನ್ನನುಭವಿಸುವವನು ಜೀವನ್ಮುಕ್ತನು. ॥೭॥

ಚೈತನ್ಯಮಾತ್ರಂ ಯಸ್ಯಾಂತಶ್ಚಿನ್ಮಾತ್ರೈಕಸ್ವರೂಪವಾನ್ ।
ನಸ್ಮರತ್ಯನ್ಯಕಲಲಂ ಸ ಜೀವನ್ಮುಕ್ತ ಉಚ್ಯತೇ ॥೮॥

ಸರ್ವತ್ರ ಪರಿಪೂರ್ಣಾತ್ಮಾ ಸರ್ವತ್ರ ಕಲನಾತ್ಮಕಃ ।
ಸರ್ವತ್ರಾನಿತ್ಯಪೂರ್ಣಾತ್ಮಾ ಸ ಜೀವನ್ಮುಕ್ತ ಉಚ್ಯತೇ ॥೯॥

ಪರಮಾತ್ಮಪರೋ ನಿತ್ಯಂ ಪರಮಾತ್ಮೇತಿ ನಿಶ್ಚಿತಃ ।
ಆನಂದಾಕೃತಿರವ್ಯಕ್ತಃ ಸ ಜೀವನ್ಮುಕ್ತ ಉಚ್ಯತೇ ॥೧೦॥

ಶುದ್ಧಕೈವಲ್ಯಜೀವಾತ್ಮಾ ಸರ್ವಸಂಗವಿವರ್ಜಿತಃ ।
ನಿತ್ಯಾನಂದಪ್ರಸನ್ನಾತ್ಮಾ ಸ ಜೀವನ್ಮುಕ್ತ ಉಚ್ಯತೇ ॥೧೧॥

ಏಕರೂಪಃ ಪ್ರಶಾಂತಾತ್ಮಾ ಅನ್ಯಚಿಂತಾವಿವರ್ಜಿತಃ ।
ಕಿಂಚಿದಸ್ತಿತ್ವಹೀನೋ ಯಃ ಸ ಜೀವನ್ಮುಕ್ತ ಉಚ್ಯತೇ ॥೧೨॥

---

ಕೇವಲ ಚೈತನ್ಯ (ಆತ್ಮ) ಜ್ಞಾನವನ್ನು ಅನುಸಂಧಾನಮಾಡುತ್ತಾ ಮಿಕ್ಕ ಅಸತ್ಯವಾದುದನ್ನು ಯಾವನು ಸ್ಮರಿಸದಿರುವನೋ ಅವನೇ ಜೀವನ್ಮುಕ್ತನು. ॥೮॥

ಎಲ್ಲೆಡೆಯಲ್ಲಿ ತುಂಬಿದ ಆತ್ಮವುಳ್ಳವನು ಎಲ್ಲೆಡೆಯಲ್ಲೂ ಇರುವ ತನ್ನ ಹೊರತಾದ ವಸ್ತುಗಳೆಲ್ಲವೂ ಅಸತ್ಯವೆಂದು ತಿಳಿದಿರುವವನು-ಜೀವನ್ಮುಕ್ತನು. ॥೯॥

ನಾನೇ ಪರಮಾತ್ಮನೆಂದು ತಿಳಿದು ಯಾವನು ಸದಾ ಆನಂದಸ್ವರೂಪನಾದ ಪರಮಾತ್ಮನನ್ನು ಬೇರೆಯ ಪರಿವೆಯಿಲ್ಲದೇ ಆನುಸಂಧಾನಮಾಡುವನೋ ಅವನೇ ನಿಜವಾದ ಜೀವನ್ಮುಕ್ತನು. ॥೧೦॥

ನಾನು ಈ ಸಂಸಾರಸಂಬಂಧಗಳುಳ್ಳ ಜೀವನಲ್ಲ, ಯಾವ ಸಂಬಂಧವೂ ಇಲ್ಲದ ಶುದ್ಧ ಆತ್ಮನು ನಾನು, ಎಂಬ ನಿಶ್ಚಯದಿಂದ ನಿತ್ಯವಾದ ಆನಂದವನ್ನನುಭವಿಸುವವನು ಜೀವನ್ಮುಕ್ತನು. ॥೧೧॥

ನಾನು ಓರ್ವನೇ ಇರುವವನು, ಶಾಂತನು ನಾನು,—ಎಂದು ತಿಳಿದು ಬೇರಾವ ಚಿಂತೆಯೂ ಇಲ್ಲದೇ ಭೇದಭಾವವಿಲ್ಲದಿರುವವನು ಜೀವನ್ಮುಕ್ತನು. ॥೧೨॥

ನಮೇ ಚಿತ್ತಂ ನಮೇ ಬುದ್ಧಿರ್ನಾಹಂಕಾರೋ ನಚೇಂದ್ರಿಯಂ ।
ಕೇವಲಂ ಬ್ರಹ್ಮಮಾತ್ರಾತ್ಮಾ ಜೀವನ್ಮುಕ್ತ ಸ ಉಚ್ಯತೇ ॥೧೩॥

ನಮೇ ದೋಷೋ ನಮೇ ದೇಹೋ ನಮೇ ಪ್ರಾಣೋ ನಮೇ ಕ್ವಚಿತ್ ।
ದೃಢನಿಶ್ಚಯವಾನ್ ಯಃ ಸ ಜೀವನ್ಮುಕ್ತ ಸ ಉಚ್ಯತೇ ॥೧೪॥

ನಮೇ ಮಾಯಾ ನಮೇ ಕಾಮೋ ನಮೇ ಕ್ರೋಧಃ ಪರೋಽಸ್ಮ್ಯಹಂ ।
ನಮೇ ಕಿಂಚಿದಿದಂ ವಾಪಿ ಜೀವನ್ಮುಕ್ತ ಸ ಉಚ್ಯತೇ ॥೧೫॥

ನಮೇ ದೋಷೋ ನಮೇ ಲಿಂಗಂ ನಮೇ ಬಂಧುಃ ಕ್ವಚಿಜ್ಜಗತ್ ।
ಯಸ್ತು ನಿತ್ಯಂ ಸದಾನಂದೋ ಜೀವನ್ಮುಕ್ತಸ್ಸ ಉಚ್ಯತೇ ॥೧೬॥

ನಮೇ ಶ್ರೋತ್ರಂ ನಮೇ ನಾಸಾ ನಮೇ ಚಕ್ಷುರ್ನಮೇ ಮನಃ ।
ನಮೇ ಜಿಹ್ವೇತಿ ಯಃ ಸ್ವಾಂತರ್ಜೀವನ್ಮುಕ್ತಸ್ಸ ಉಚ್ಯತೇ ॥೧೭॥

---

ನನಗೆ ಮನಸ್ಸಿಲ್ಲ, ಬುದ್ಧಿಯಿಲ್ಲ, ಅಹಂಕಾರವಿಲ್ಲ, ಇಂದ್ರಿಯಗಳಿಲ್ಲ, ಕೇವಲ ಬ್ರಹ್ಮನು ನಾನು–ಎಂಬ ಬ್ರಹ್ಮ ಜ್ಞಾನವುಳ್ಳವನು ಜೀವನ್ಮುಕ್ತನು. ॥೧೩॥

ನನಗೆ ಯಾವ ದೋಷವೂ ಇಲ್ಲ, ದೇಹವಿಲ್ಲ, ಪ್ರಾಣಗಳಿಲ್ಲ—ಎಂಬ ದೃಢವಾದ ನಿಶ್ಚಯವುಳ್ಳವನೇ ಜೀವನ್ಮುಕ್ತನು. ॥೧೪॥

ಮಾಯೆಯೂ ನನಗಿಲ್ಲ, ಕಾಮಕ್ರೋಧಗಳು ನನಗಿಲ್ಲ, ಪರಮಾತ್ಮನು ನಾನು, "ನನ್ನದು" ಎನ್ನುವಂತಹ ವಸ್ತುವಾವುದೂ ಇಲ್ಲ – ಎಂದು ತಿಳಿವವನೇ ಜೀವನ್ಮುಕ್ತನು. ॥೧೫॥

ನನಗೆ ಯಾವ ಪಾಪಗಳೂ ಇಲ್ಲ, ಪುಲ್ಲಿಂಗಾದಿ ಲಿಂಗಗಳಿಲ್ಲ, ನನಗೆ ಬಂಧನವು ಇಲ್ಲ. ನನ್ನ ಹೊರತಾಗಿ ಯಾವ ಜಗತ್ತೂ ಇಲ್ಲ–ಎಂಬ ಅನುಭವವು ಯಾವನಿಗೆ ದೃಢವಾಗಿರುವುದೋ ಅವನೇ ಜೀವನ್ಮುಕ್ತನು. ॥೧೬॥

ನನಗೆ ಕಿವಿಯಿಲ್ಲ, ಮೂಗಿಲ್ಲ, ಕಣ್ಣುಗಳಿಲ್ಲ, ಮನಸ್ಸಿಲ್ಲ, ನಾಲಗೆಯಿಲ್ಲ—ಎಂಬ ನಿಜವಾದ ಆತ್ಮಜ್ಞಾನವು ಯಾವನಿಗಿದೆಯೋ ಅವನು ಜೀವನ್ಮುಕ್ತನು. ॥೧೭॥

ನಮೇ ದೇಹೋ ನಮೇ ಲಿಂಗಂ ನಮೇ ಕಾರಣಮೇವ ಚ ।
ನಮೇ ತುರ್ಯಮಿತಿಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೧೮॥

ಇದಂ ಸರ್ವಂ ನಮೇ ಕಿಂಚಿತ್ ಇದಂ ಸರ್ವಂ ನಮೇ ಕ್ವಚಿತ್ ।
ಬ್ರಹ್ಮಮಾತ್ರೇಣ ಯಸ್ತಿಷ್ಠೇತ್ ಸ ಜೀವನ್ಮುಕ್ತ ಉಚ್ಯತೇ ॥೧೯॥

ನಮೇ ಕಿಂಚಿನ್ನಮೇ ಕಶ್ಚಿನ್ನಮೇ ಕಶ್ಚಿತ್ ಕ್ವಚಿಜ್ಜಗತ್ ।
ಅಹಮೇವೇತಿ ಯಸ್ತಿಷ್ಠೇತ್ಸಜೀವನ್ಮುಕ್ತ ಉಚ್ಯತೇ ॥೨೦॥

ನಮೇ ಕಾಲೋ ನಮೇ ದೇಶೋ ನಮೇ ವಸ್ತು ನಮೇ ಸ್ಥಿತಿಃ ।
ನ ಮೇ ಸ್ನಾನಂ ನಮೇಽಪ್ರಾಪ್ಯಂ ಜೀವನ್ಮುಕ್ತಸ್ಸ ಉಚ್ಯತೇ ॥೨೧॥

ನ ಮೇ ತೀರ್ಥಂ ನ ಮೇ ಸೇವಾ ನ ಮೇ ದೇವಾ ನ ಮೇ ಸ್ಥಲಂ ।
ನ ಕ್ವಚಿದ್ಭೇದಹೀನೋ ಯೋ ಜೀವನ್ಮುಕ್ತಸ್ಸ ಉಚ್ಯತೇ ॥೨೨॥

---

ನನಗೆ ದೇಹವಿಲ್ಲ, ಜಾತಿಯಿಲ್ಲ, ನನಗೆ ಕಾರಣವು ಇಲ್ಲ, ನನಗೆ ನಾಲ್ಕನೆಯ ಅವಸ್ಥೆಯಾದ ಮುಪ್ಪು ಇಲ್ಲ ಮರಣವು ಇಲ್ಲ,—ಎಂದು ತಿಳಿವವನೇ ಜೀವನ್ಮುಕ್ತನು. ॥೧೮॥

"ಇದು" ಎನ್ನುವ ಯಾವ ವಸ್ತುವೂ ನನಗಿಲ್ಲ, "ಇವನು" ಎನ್ನುವ ಯಾವ ವಸ್ತುವೂ ಯಾವ ವ್ಯವಹಾರವೂ ನನಗಿಲ್ಲ-ಇಂತಹ ಬ್ರಹ್ಮನು ನಾನು—ಎಂಬ ಬ್ರಹ್ಮಭಾವನೆಯುಳ್ಳವನೇ ಜೀವನ್ಮುಕ್ತನು. ॥೧೯॥

ನನಗೇನೂ ಇಲ್ಲ, ನನಗೆ ಸಂಬಂಧಿಯೆಂಬುವನು ಯಾರೂ ಇಲ್ಲ, ನನ್ನ ಜಗತ್ತು ಎಂಬುವುದಾವುದೂ ಇಲ್ಲ, ನಾನೇ ನಾನು ಇರುವವನು – ಎಂಬ ತಿಳಿವುಳ್ಳವನೇ ಜೀವನ್ಮುಕ್ತನು. ॥೨೦॥

ಕಾಲವು ನನಗಿಲ್ಲ, ದೇಶವು ನನಗಿಲ್ಲ. ವಸ್ತುವು ನನಗಿಲ್ಲ, ಸ್ತುತಿಯು ನನಗಿಲ್ಲ, ಸ್ನಾನವು ನನಗಿಲ್ಲ, ಪಡೆಯುಬೇಕಾದುದು ನನಗಿಲ್ಲ–ಎಂದು ತಿಳಿವವನು ಜೀವನ್ಮುಕ್ತನು. ॥೨೧॥

ನನಗೆ ತೀರ್ಥಕ್ಷೇತ್ರವು ಇಲ್ಲ, ಸೇವೆಯೂ ಬೇಕಿಲ್ಲ, ದೇವತೆಗಳೂ ಇಲ್ಲ, ಯಾವುದೊಂದು ಸ್ಥಳವೂ ಇಲ್ಲ, ಯಾವ ಭೇದವೂ ಇಲ್ಲ.–ಹೀಗೆ ತಿಳಿವವನೇ ಜೀವನ್ಮುಕ್ತನು.. ॥೨೨॥

ನ ಮೇ ಬಂಧಂ ನ ಮೇ ಮೋಕ್ಷಂ ನ ಮೇ ಜ್ಞಾನಂ ನ ಮೇ ಪದಂ ।
ನ ಮೇ ವಾಕ್ಯಮಿತಿ ಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೨೩॥

ನ ಮೇ ಪುಣ್ಯಂ ನಮೇ ಪಾಪಂ ನ ಮೇ ಕಾಯಂ ನ ಮೇ ರಸಃ ।
ನ ಮೇ ಜೀವ ಇತಿ ಸ್ವಾತ್ಮಾ ಜೀವನ್ಮುಕ್ತಸ್ಸ ಉಚ್ಯತೇ ॥೨೪॥

ನ ಮೇ ಶಬ್ದಂ ನ ಮೇ ಸ್ಪರ್ಶೋ ನ ಮೇ ರೂಪಂ ನ ಮೇ ರಸಂ ।
ನ ಮೇ ದೃಶ್ಯ ಇತಿ ಸ್ವಾತ್ಮಾ ಜೀವನ್ಮುಕ್ತಸ್ಸ ಉಚ್ಯತೇ ॥೨೫॥

ನ ಮೇ ಮೋಕ್ಷೋ ನ ಮೇ ದ್ವೈತಂ ನ ಮೇ ವೇದೋ ನ ಮೇ ವಿಧಿಃ ।
ನ ಮೇ ದೂರಮಿತಿ ಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೨೬॥

ನ ಮೇ ಸರ್ವಂ ನ ಮೇ ಕಿಂಚಿನ್ನಮೇ ಜೀವಂ ನ ಮೇ ಕ್ವಚಿತ್ ।
ನ ಮೇ ಭಾನಂ ನ ಮೇ ವಸ್ತು ಜೀವನ್ಮುಕ್ತಸ್ಸ ಉಚ್ಯತೇ ॥೨೭॥

---

ಬಂಧನವು ನನಗಿಲ್ಲ, ಮೋಕ್ಷವು ನನಗಿಲ್ಲ, ಜನನ-ಮರಣಗಳು ನನಗಿಲ್ಲ, ಜ್ಞಾನವು ಇಲ್ಲ, ನಾನು ಪಡೆಯಬೇಕಾದ ಸ್ಥಾನವು ಇಲ್ಲ, ನನ್ನನ್ನು ಹೇಳುವಂತಹ ಪದವು ಇಲ್ಲ ವಾಕ್ಯವು ಇಲ್ಲ–ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೩॥

ಪುಣ್ಯ-ಪಾಪಗಳು ನನಗಿಲ್ಲ, ಶರೀರವು ನನಗಿಲ್ಲ, ರುಚಿಯು ನನಗಿಲ್ಲ, ಪ್ರಾಣವು ನನಗಿಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೪॥

ಶಬ್ದಸ್ಪರ್ಶರೂಪರಸಗಳು ನನಗಿಲ್ಲ, ನಾನು ಕಣ್ಣಿಗೆ ಕಾಣಿಸುವವನಲ್ಲ ಎಂದು ತಿಳಿಯುವವನೇ ನಿಜವಾದ ಜೀವನ್ಮುಕ್ತನು. ॥೨೫॥

ಮೋಕ್ಷವು ನನಗಿಲ್ಲ, ಭೇದವು ನನಗಿಲ್ಲ, ವೇದವು ನನಗಿಲ್ಲ, ನಿಯಮವು ನನಗಿಲ್ಲ, ದೂರ-ಸಮೀಪ ಎಂಬ ಭೇದವೂ ನನಗಿಲ್ಲ–ಎಂದು ತಿಳಿದು ಆತ್ಮಾರಾಮನಾಗಿರುವವನೇ ಜೀವನ್ಮುಕ್ತನು. ॥೨೬॥

ನನಗೆ ಎಲ್ಲವೂ ಇಲ್ಲ, ಸ್ವಲ್ಪವೂ ಇಲ್ಲ, ಜೀವವು ನನಗಿಲ್ಲ, ಒಂದೆಡೆಯೆಂದು ನನಗಿಲ್ಲ, ನನ್ನನ್ನು ಯಾವುದೂ ಪ್ರಕಾಶಪಡಿಸಲಾರದು, ನನ್ನ ಪ್ರಕಾಶದಿಂದಲೇ ಎಲ್ಲವೂ ಬೆಳಗುವುವು-ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೭॥

ನಮೋ ದೇಹೋ ನಮೋ ಲಿಂಗಂ ನಮೋ ಕಾರಣಮೇವ ಚ ।
ನಮೋ ತುರ್ಯಮಿತಿಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೧೮॥

ಇದಂ ಸರ್ವಂ ನಮೋ ಕಿಂಚಿತ್ ಇದಂ ಸರ್ವಂ ನಮೋ ಕ್ವಚಿತ್ ।
ಬ್ರಹ್ಮಮಾತ್ರೇಣ ಯಸ್ತಿಷ್ಠೇತ್ ಸ ಜೀವನ್ಮುಕ್ತ ಉಚ್ಯತೇ ॥೧೯॥

ನಮೋ ಕಿಂಚಿನ್ನಮೋ ಕಶ್ಚಿನ್ನಮೋ ಕಶ್ಚಿತ್ ಕ್ವಚಿಜ್ಜಗತ್ ।
ಅಹಮೇವೇತಿ ಯಸ್ತಿಷ್ಠೇತ್ಸಜೀವನ್ಮುಕ್ತ ಉಚ್ಯತೇ ॥೨೦॥

ನಮೋ ಕಾಲೋ ನಮೋ ದೇಶೋ ನಮೋ ವಸ್ತು ನಮೋ ಸ್ಥಿತಿಃ ।
ನ ಮೇ ಸ್ನಾನಂ ನಮೇಽಪ್ರಾಪ್ಯಂ ಜೀವನ್ಮುಕ್ತಸ್ಸ ಉಚ್ಯತೇ ॥೨೧॥

ನ ಮೇ ತೀರ್ಥಂ ನ ಮೇ ಸೇವಾ ನ ಮೇ ದೇವಾ ನ ಮೇ ಸ್ಥಲಂ ।
ನ ಕ್ವಚಿದ್ಭೇದಹೀನೋ ಯೋ ಜೀವನ್ಮುಕ್ತಸ್ಸ ಉಚ್ಯತೇ ॥೨೨॥

---

ನನಗೆ ದೇಹವಿಲ್ಲ, ಜಾತಿಯಿಲ್ಲ, ನನಗೆ ಕಾರಣವು ಇಲ್ಲ, ನನಗೆ ನಾಲ್ಕನೆಯ ಅವಸ್ಥೆಯಾದ ಮುಪ್ಪು ಇಲ್ಲ ಮರಣವು ಇಲ್ಲ,—ಎಂದು ತಿಳಿವವನೇ ಜೀವನ್ಮುಕ್ತನು. ॥೧೮॥

"ಇದು" ಎನ್ನುವ ಯಾವ ವಸ್ತುವೂ ನನಗಿಲ್ಲ, "ಇವನು" ಎನ್ನುವ ಯಾವ ವಸ್ತುವೂ ಯಾವ ವ್ಯವಹಾರವೂ ನನಗಿಲ್ಲ-ಇಂತಹ ಬ್ರಹ್ಮನು ನಾನು—ಎಂಬ ಬ್ರಹ್ಮಭಾವನೆಯುಳ್ಳವನೇ ಜೀವನ್ಮುಕ್ತನು. ॥೧೯॥

ನನಗೇನೂ ಇಲ್ಲ; ನನಗೆ ಸಂಬಂಧಿಯೆಂಬುವನು ಯಾರೂ ಇಲ್ಲ, ನನ್ನ ಜಗತ್ತು ಎಂಬುವುದಾವುದೂ ಇಲ್ಲ, ನಾನೇ ನಾನು ಇರುವವನು – ಎಂಬ ತಿಳಿವುಳ್ಳವನೇ ಜೀವನ್ಮುಕ್ತನು. ॥೨೦॥

ಕಾಲವು ನನಗಿಲ್ಲ, ದೇಶವು ನನಗಿಲ್ಲ. ವಸ್ತುವು ನನಗಿಲ್ಲ, ಸ್ಮೃತಿಯು ನನಗಿಲ್ಲ, ಸ್ನಾನವು ನನಗಿಲ್ಲ, ಪಡೆಯಬೇಕಾದುದು ನನಗಿಲ್ಲ–ಎಂದು ತಿಳಿವವನು ಜೀವನ್ಮುಕ್ತನು. ॥೨೧॥

ನನಗೆ ತೀರ್ಥಕ್ಷೇತ್ರವು ಇಲ್ಲ, ಸೇವೆಯೂ ಬೇಕಿಲ್ಲ, ದೇವತೆಗಳೂ ಇಲ್ಲ, ಯಾವುದೊಂದು ಸ್ಥಳವೂ ಇಲ್ಲ, ಯಾವ ಭೇದವೂ ಇಲ್ಲ.–ಹೀಗೆ ತಿಳಿವವನೇ ಜೀವನ್ಮುಕ್ತನು.. ॥೨೨॥

ನ ಮೇ ಬಂಧಂ ನ ಮೇ ಮೋಕ್ಷಂ ನ ಮೇ ಜ್ಞಾನಂ ನ ಮೇ ಪದಂ ।
ನ ಮೇ ವಾಕ್ಯಮಿತಿ ಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೨೩॥

ನ ಮೇ ಪುಣ್ಯಂ ನಮೇ ಪಾಪಂ ನ ಮೇ ಕಾಯಂ ನ ಮೇ ರಸಃ ।
ನ ಮೇ ಜೀವ ಇತಿ ಸ್ವಾತ್ಮಾ ಜೀವನ್ಮುಕ್ತಸ್ಸ ಉಚ್ಯತೇ ॥೨೪॥

ನ ಮೇ ಶಬ್ದಂ ನ ಮೇ ಸ್ಪರ್ಶೋ ನ ಮೇ ರೂಪಂ ನ ಮೇ ರಸಂ ।
ನ ಮೇ ದೃಶ್ಯ ಇತಿ ಸ್ವಾತ್ಮಾ ಜೀವನ್ಮುಕ್ತಸ್ಸ ಉಚ್ಯತೇ ॥೨೫॥

ನ ಮೇ ಮೋಕ್ಷೋ ನ ಮೇ ದ್ವೈತಂ ನ ಮೇ ವೇದೋ ನ ಮೇ ವಿಧಿಃ ।
ನ ಮೇ ದೂರಮಿತಿ ಸ್ವಸ್ಥೋ ಜೀವನ್ಮುಕ್ತಸ್ಸ ಉಚ್ಯತೇ ॥೨೬॥

ನ ಮೇ ಸರ್ವಂ ನ ಮೇ ಕಿಂಚಿನ್ನಮೇ ಜೀವಂ ನ ಮೇ ಕ್ವಚಿತ್ ।
ನ ಮೇ ಭಾನಂ ನ ಮೇ ವಸ್ತು ಜೀವನ್ಮುಕ್ತಸ್ಸ ಉಚ್ಯತೇ ॥೨೭॥

---

ಬಂಧನವು ನನಗಿಲ್ಲ, ಮೋಕ್ಷವು ನನಗಿಲ್ಲ, ಜನನ-ಮರಣಗಳು ನನಗಿಲ್ಲ, ಜ್ಞಾನವು ಇಲ್ಲ, ನಾನು ಪಡೆಯಬೇಕಾದ ಸ್ಥಾನವು ಇಲ್ಲ, ನನ್ನನ್ನು ಹೇಳುವಂತಹ ಪದವು ಇಲ್ಲ ವಾಕ್ಯವು ಇಲ್ಲ–ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೩॥

ಪುಣ್ಯ-ಪಾಪಗಳು ನನಗಿಲ್ಲ, ಶರೀರವು ನನಗಿಲ್ಲ, ರುಚಿಯು ನನಗಿಲ್ಲ, ಪ್ರಾಣವು ನನಗಿಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೪॥

ಶಬ್ದಸ್ಪರ್ಶರೂಪರಸಗಳು ನನಗಿಲ್ಲ, ನಾನು ಕಣ್ಣಿಗೆ ಕಾಣಿಸುವವನಲ್ಲ ಎಂದು ತಿಳಿಯುವವನೇ ನಿಜವಾದ ಜೀವನ್ಮುಕ್ತನು. ॥೨೫॥

ಮೋಕ್ಷವು ನನಗಿಲ್ಲ, ಭೇದವು ನನಗಿಲ್ಲ, ವೇದವು ನನಗಿಲ್ಲ, ನಿಯಮವು ನನಗಿಲ್ಲ, ದೂರ-ಸಮೀಪ ಎಂಬ ಭೇದವೂ ನನಗಿಲ್ಲ–ಎಂದು ತಿಳಿದು ಆತ್ಮಾರಾಮನಾಗಿರುವವನೇ ಜೀವನ್ಮುಕ್ತನು. ॥೨೬॥

ನನಗೆ ಎಲ್ಲವೂ ಇಲ್ಲ, ಸ್ವಲ್ಪವೂ ಇಲ್ಲ, ಜೀವವು ನನಗಿಲ್ಲ, ಒಂದೆಡೆಯೆಂದು ನನಗಿಲ್ಲ, ನನ್ನನ್ನು ಯಾವುದೂ ಪ್ರಕಾಶಪಡಿಸಲಾರದು, ನನ್ನ ಪ್ರಕಾಶದಿಂದಲೇ ಎಲ್ಲವೂ ಬೆಳಗುವುವು–ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೭॥

ನ ಮೇ ಗುರುರ್ನಮೇ ಶಿಷ್ಯೋ ನ ಮೇ ಬೋಧೋ ನ ಮೇ ಪರಃ ।
ನ ಮೇ ಶ್ರೇಷ್ಠಂ ಕ್ವಚಿದ್ವಸ್ತು ಜೀವನ್ಮುಕ್ತಸ್ಸ ಉಚ್ಯತೇ ॥೨೮॥

ನ ಮೇ ಬ್ರಹ್ಮಾ ನ ಮೇ ವಿಷ್ಣುರ್ನಮೇ ರುದ್ರೋ ನ ಮೇ ರವಿಃ ।
ನ ಮೇ ಕರ್ಮ ಕ್ವಚಿದ್ವಸ್ತು ಜೀವನ್ಮುಕ್ತಸ್ಸ ಉಚ್ಯತೇ ॥೨೯॥

ನ ಮೇ ಪೃಥ್ವೀ ನ ಮೇ ತೋಯಂ ನ ಮೇ ತೇಜೋ ನ ಮೇ ವಿಯತ್ ।
ದ್ವಂದ್ವಂ ಸಂಕಲ್ಪಮೇವಂ ಹಿ ಜೀವನ್ಮುಕ್ತಸ್ಸ ಉಚ್ಯತೇ ॥೩೦॥

ಸಂಕಲ್ಪಮಾತ್ರಂ ಕಾಲಂ ಚ ದೇಶಃ ಸಂಕಲ್ಪನೇವ ಹಿ ।
ಸಂಕಲ್ಪಮಾತ್ರಂ ದೇಹಂ ಚ ಪ್ರಾಣಂ ಸಂಕಲ್ಪಮಾತ್ರಕಂ ॥೩೧॥

ಸಂಕಲ್ಪಮಾತ್ರಂ ಮನನಂ ಸಂಕಲ್ಪಂ ಶ್ರವಣಂ ತಥಾ ।
ಸಂಕಲ್ಪಮಾತ್ರಂ ನರಕಂ ಸಂಕಲ್ಪಂ ಸ್ವರ್ಗಮಿತ್ಯಪಿ ॥೩೨॥

---

ನನಗೆ ಗುರುವು ಇಲ್ಲ, ಶಿಷ್ಯನು ಇಲ್ಲ, ಉಪದೇಶವೂ ಇಲ್ಲ, ನನ್ನಿಂದ ಹೊರತಾಗಿ ಉತ್ತಮನಾಗಲೀ ಅಧಮನಾಗಲೀ ಇಲ್ಲ,—ಎಂದು ತಿಳಿವವನೇ ಜೀವನ್ಮುಕ್ತನು. ॥೨೮॥

ನನ್ನ ಹೊರತಾಗಿ ಬ್ರಹ್ಮನು ಇಲ್ಲ, ಹರಿಯೂ ಇಲ್ಲ, ರುದ್ರನೂ ಇಲ್ಲ, ಸೂರ್ಯನು ಇಲ್ಲ, ನನಗೆ ಯಾವ ಕಾರ್ಯವೂ ಇಲ್ಲ—ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೯॥

ನನ್ನ ಹೊರತಾಗಿ ಭೂಮಿಯು ಇಲ್ಲ, ಜಲವು ಇಲ್ಲ, ತೇಜಸ್ಸು ಇಲ್ಲ, ಆಕಾಶವು ಇಲ್ಲ, ಸುಖ-ದುಃಖ ಮೊದಲಾದ ದ್ವಂದ್ವಗಳು ನನಗಿಲ್ಲ-ಎಂದು ತಿಳಿಯುವನೇ ಜೀವನ್ಮುಕ್ತನು. ॥೩೦॥

ಕಾಲದೇಶಗಳು ಬರಿಯ ಕಲ್ಪನೆಯಿಂದಾದ ವಸ್ತುಗಳು, ದೇಹವು ಪ್ರಾಣವು ಬರಿಯ ಕಲ್ಪನೆಯಿಂದಾದ ವಸ್ತುಗಳು-ಎಂದು ತಿಳಿಯುವನೇ ಜೀವನ್ಮುಕ್ತನು. ॥೩೧॥

ಶ್ರವಣ ಮನನಗಳು ಬರಿಯ ಕಲ್ಪನೆಯವುಗಳು ಸ್ವರ್ಗ-ನರಕಗಳೆನ್ನುವುವೂ ಬರಿಯ ಕಲ್ಪನೆ. ॥೩೨॥

ಸಂಕಲ್ಪನೋವ ಚಿನ್ಮಾತ್ರಂ ಸಂಕಲ್ಪಂ ಚಾತ್ಮಚಿಂತನಂ ।
ಸಂಕಲ್ಪಂ ನಾಮ ನೋಕಿಂಚಿದ್ಬ್ರಹ್ಮ ಸಂಕಲ್ಪಮೇವ ಹಿ ॥೩೩॥

ಸಂಕಲ್ಪಮೇವ ಯತ್ಕಿಂಚಿತ್ತನ್ನಾಸ್ತ್ಯೇವ ಕದಾಚನ ।
ನಾಸ್ತಿ ನಾಸ್ತ್ಯೇವ ನಾಸ್ತ್ಯೇವ ನಾಸ್ತಿ ನಾಸ್ತಿ ಜಗತ್ತ್ರಯಂ ॥೩೪॥

ನಾಸ್ತಿ ನಾಸ್ತಿ ಗುರುರ್ನಾಸ್ತಿ ನಾಸ್ತಿ ಶಿಷ್ಯೋಽಪಿ ವಸ್ತುತಃ ।
ನಾಸ್ತಿ ನಾಸ್ತಿ ಶರೀರಂ ಚ ನಾಸ್ತಿ ನಾಸ್ತಿ ಮನಃ ಕ್ವಚಿತ್ ॥೩೫॥

ನಾಸ್ತಿ ನಾಸ್ತ್ಯೇವ ಕಿಂಚಿದ್ವಾ ನಾಸ್ತಿ ನಾಸ್ತ್ಯಖಿಲಂ ಜಗತ್ ।
ನಾಸ್ತಿ ನಾಸ್ತ್ಯೇವ ಭೂತಂ ವಾ ಸರ್ವಂ ನಾಸ್ತಿ ನ ಸಂಶಯಃ ॥೩೬॥

ಸರ್ವಂ ನಾಸ್ತಿಪ್ರಕರಣಂ ಮಯೋಕ್ತಂ ಚ ನಿದಾಘ ತೇ ।
ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೩೭॥

---

ಪರಮಾತ್ಮವಸ್ತುವು ಊಹಿಸುವಂತಹ ವಸ್ತುವೇ, ಅಂದರೆ ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರವಲ್ಲ, ಆತ್ಮಧ್ಯಾನವು ಊಹೆಯೇ, ಅಂದರೆ ಧ್ಯಾನವು ಸತ್ಯವಾದುದಲ್ಲ, ಆತ್ಮನೋರ್ವನೇ ಸತ್ಯ, ಬ್ರಹ್ಮ, ಆತ್ಮ ಪರಮಾತ್ಮ—ಮೊದಲಾದ ಹೆಸರುಗಳು ಬರಿಯ ಕಲ್ಪನೆಯವುಗಳೇ, ಅಂದರೆ ಬ್ರಹ್ಮ ಆತ್ಮ ಪರಮಾತ್ಮ...... ಮೊದಲಾದ ಶಬ್ದಗಳಿಂದ ಹೇಳುವ ಆತ್ಮವಸ್ತುವೊಂದೇ ಸತ್ಯವಾದುದು. ಆತ್ಮ ಪರ ವಾದ ಶಬ್ದಗಳೆಲ್ಲವೂ ಅಸತ್ಯ. ॥೩೩॥

ಆದುದರಿಂದ ಆತ್ಮನೋರ್ವನು ಹೊರತಾಗಿ ಜಗತ್ತೆಲ್ಲವೂ ಬರಿಯ ಊಹೆಯು, ವಸ್ತುತಃ ಇಲ್ಲ, ಆ ಊಹೆಯೂ ಅಸತ್ಯ. ॥೩೪॥

ಗುರುವೂ ಇಲ್ಲ, ಶಿಷ್ಯನೂ ಇಲ್ಲ, ಶರೀರವೂ ಇಲ್ಲ, ಮನಸ್ಸೂ ಇಲ್ಲ. ॥೩೫॥

ಆತ್ಮನ ಹೊರತಾಗಿ ಯಾವುದೊಂದು ವಸ್ತುವೂ ಇಲ್ಲ, ಜಗತ್ತೇ ಇಲ್ಲ, ಒಂದು ಪ್ರಾಣಿಯೂ ಇಲ್ಲ, ಎಲ್ಲವೂ ಇಲ್ಲ. ॥೩೬॥

ಎಲೈ ನಿದಾಘಮುನಿಯೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವೆಂಬ ತತ್ತ್ವಾಂಶವನ್ನು ನಿನಗೆ ವಿವರಿಸುವೆನು, ಇದನ್ನು ಶ್ರದ್ಧೆಯಿಂದ ಒಂದು ಬಾರಿ ಕೇಳಿದವನೂ ಬ್ರಹ್ಮವಸ್ತುವಾಗುವನು. ॥೩೭॥

॥ ಸೂತ ಉವಾಚ ॥

ವೇದಾಂತೈರಪಿ ಚಂದ್ರಶೇಖರಪದಾಂಭೋಜಾನುರಾಗಾದರೋ
ದಾರೋದಾರಕುಮಾರದಾರನಿಕರೈಃ ಪ್ರಾಣೈರ್ಧನೈರುಜ್ಝಿತಃ ।
ತ್ಯಾಗಾದ್ಯೋ ಮನಸಾ ಸಕೃಚ್ಛಿವಪದಧ್ಯಾನಾತ್ತು ಯತ್ಪ್ರಾಪ್ಯತೇ
ತನ್ನೈವಾಪ್ಯತಿ ಶಬ್ದತರ್ಕನಿವಹೈಃ ಶಾಂತಂ ಮನಸ್ತದ್ಭವೇತ್ ॥೩೮॥

ಅಶೇಷದೃಶ್ಯೋಜ್ಝಿತದೃಙ್ಮಯಾನಾಂ
ಸಂಕಲ್ಪವರ್ಜ್ಯೇನ ಸದಾ ಸ್ಥಿತಾನಾಂ ।
ನ ಜಾಗ್ರತಃ ಸ್ವಪ್ನಸುಷುಪ್ತಿಭಾವೋ
ನ ಜೀವನಂ ನೋ ಮರಣಂ ಚ ಚಿತ್ರಂ ॥೩೯॥

ಇತಿ ಶ್ರೀ ಶಿವರಹಸ್ಯೇ ಷಷ್ಠಾಂಶೇ ದಶಮೋಽಧ್ಯಾಯಃ

---

ಮಾನವನು ವೇದಾಂತಗಳಿಂದ ಪರಮೇಶ್ವರನ ಸ್ವರೂಪನ್ನರಿದು ಹೆಂಡತಿ ಮಕ್ಕಳು ಐಶ್ವರ್ಯಗಳಲ್ಲಿ ಮಮತೆಯಿಲ್ಲದೇ ವಿರಕ್ತನಾಗಿ ಸ್ಥಿರಬುದ್ಧಿಯಿಂದ ಆ ದೇವನ ಅಡಿದಾವರೆಯನ್ನು ಧ್ಯಾನಿಸಿ ಯಾವ ಪದವನ್ನು ಪಡೆಯುವನೋ ಆ ಪದವು ಒಣತರ್ಕಗಳಿಂದ ಲಭಿಸಲಾರದು. ॥೩೮॥

ಸ್ಥಿರವಾದ ವಸ್ತುಗಳಲ್ಲಿ ಮಮತೆಯಿಲ್ಲದೆ ಸದಾ ನಿಸ್ಪೃಹರಾಗಿ ವಿರಕ್ತರಾಗಿರುವ ಪರಮಾತ್ಮಯೋಗಿಗಳಿಗೆ ಜಾಗ್ರತ್ ಸ್ವಪ್ನ ಸುಷುಪ್ತಿ-ಗಳೆಂಬ ಅವಸ್ಥೆಗಳೂ ಜೀವನವೂ ಮರಣವೂ ಇಲ್ಲ. ॥೩೯॥

ಶಿವರಹಸ್ಯದ ಆರನೆಯ ಅಂಶದಲ್ಲಿ ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಶಂಕರಾಖ್ಯೇ

ಷಷ್ಠಾಂಶೇ

## ಏಕಾದಶೋಽಧ್ಯಾಯಃ

॥ ನಿದಾಘ ಉವಾಚ ॥

ಕುತ್ರ ವಾ ಭವತಃ ಸ್ನಾನಂ ಕರೋತಿ ನಿತರಾಂ ಗುರೋ ।
ಸ್ನಾನಂ ಮಂತ್ರಂ ಸ್ನಾನಕಾಲಂ ತರ್ಪಣಂ ಚ ವದಸ್ವ ಮೇ ॥೧॥

॥ ಋಭುರುವಾಚ ॥

ಆತ್ಮಸ್ನಾನಂ ಮಹಾಸ್ನಾನಂ ನಿತ್ಯಸ್ನಾನಂ ನ ಚಾನ್ಯತಃ ।
ಇದಮೇವ ಮಹಾಸ್ನಾನಂ ಅಹಂ ಬ್ರಹ್ಮಾಸ್ಮಿ ನಿಶ್ಚಯಃ ॥೨॥

ಪರಬ್ರಹ್ಮಸ್ವರೂಪೋಽಹಂ ಪರಮಾನಂದಮಸ್ಮ್ಯಹಂ ।
ಇದಮೇವ ಮಹಾಸ್ನಾನಂ ಅಹಂ ಬ್ರಹ್ಮಾಸ್ಮಿ ನಿಶ್ಚಯಃ ॥೩॥

---

## ಹನ್ನೊಂದನೆಯ ಅಧ್ಯಾಯ

ಓ ಋಭುಮುನಿಯೇ, ನೀನು ನಿತ್ಯವೂ ಇರುವುದೆಲ್ಲಿ? ಸ್ನಾನವು ಎಲ್ಲಿ? ಮಂತ್ರವೇನು? ಸ್ನಾನಕಾಲವಾವುದು? ತರ್ಪಣಕಾಲವಾವುದು? ॥೧॥

ಆತ್ಮಸ್ನಾನವೇ ಮಹಾಸ್ನಾನವೂ ನಿತ್ಯಸ್ನಾನವೂ ಆಗಿದೆ. "ನಾನು ಬ್ರಹ್ಮನು" ಎಂಬ ತಿಳಿವಳಿಕೆಯೇ ಆತ್ಮಸ್ನಾನವು. ॥೨॥

ಪರಬ್ರಹ್ಮನು ನಾನು ನಿತ್ಯಾನಂದಸ್ವರೂಪನು ನಾನು, ಎಂಬ ಬ್ರಹ್ಮಜ್ಞಾನವೇ ಮಹಾಸ್ನಾನವು, ಈ ಸ್ನಾನದಿಂದ ಪ್ರಪಂಚವೆಂಬ ಕೊಳೆಯು ಹೋಗುವುದು. ॥೩॥

ಕೇವಲಜ್ಞಾನರೂಪೋಹಂ ಕೇವಲಂ ಪರಮೋಸ್ಮ್ಯಹಂ ।
ಕೇವಲಂ ಶಾಂತರೂಪೋಹಂ ಕೇವಲಂ ನಿರ್ಮಲೋಸ್ಮ್ಯಹಂ ॥೪॥

ಕೇವಲಂ ನಿತ್ಯರೂಪೋಹಂ ಕೇವಲಂ ಶಾಶ್ವತೋಸ್ಮ್ಯಹಂ ।
ಇದಮೇವ ಮಹಾಸ್ನಾನಂ ಅಹಂ ಬ್ರಹ್ಮಾಸ್ಮಿ ನಿಶ್ಚಯಃ ॥೫॥

ಕೇವಲಂ ಸರ್ವರೂಪೋಹಮಹಂ ತ್ಯಕ್ತ್ವಾಹಮಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೬

ಸರ್ವಹೀನಸ್ವರೂಪೋಹಂ ಚಿದಾಕಾಶಮಯೋಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೭॥

ಕೇವಲಂ ತುರ್ಯರೂಪೋಸ್ಮಿ ತುರ್ಯಾತೀತೋಸ್ಮಿ ಕೇವಲಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೮॥

ಕೇವಲಾಕಾರರೂಪೋಸ್ಮಿ ಶುದ್ಧರೂಪೋಸ್ಮ್ಯಹಂ ಸದಾ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೯॥

---

ಶುದ್ಧಜ್ಞಾನಸ್ವರೂಪನು ನಾನು, ಪರಮಾತ್ಮನು ನಾನು, ಶಾಂತನು ನಾನು, ನಿರ್ಮಲನು ನಾನು. ॥೪॥

ನಿತ್ಯಸ್ವರೂಪನು, ನಾನೊರ್ವನೇ ಶಾಶ್ವತನು, ನಾನೇ ಬ್ರಹ್ಮನು, ಎಂಬ ನಿಶ್ಚಯವೇ ಮಹಾಸ್ನಾನವು. ॥೫॥

ಜಗತ್ತೆಲ್ಲವೂ ನನ್ನ ಸ್ವರೂಪವೇ, ನಾನು ಎಂಬ ಅಹಂಕಾರವೂ ಭೇದವೂ ನನಗಿಲ್ಲ, ನಾನೇ ಪರಬ್ರಹ್ಮನು-ಎಂಬ ಆತ್ಮ ನಿಶ್ಚಯವೇ ಮಹಾಸ್ನಾನವು. ॥೬॥

ನನ್ನ ಹೊರತಾಗಿ ಯಾವ ವಸ್ತುವೂ ಇಲ್ಲ. ವ್ಯಾಪಕನಾದ ಜ್ಞಾನಮೂರ್ತಿಯು ನಾನು, ನಾನೇ ಪರಬ್ರಹ್ಮನು-ಎಂಬ ನಿಶ್ಚಯವೇ ಮಹಾಸ್ನಾನವು. ॥೭॥

ದೇಹ ಇಂದ್ರಿಯ ಮನಸ್ಸುಗಳಿಂದ ಭಿನ್ನನಾದ ನಾಲ್ಕನೆಯವನು ನಾನು. ನಾಲ್ಕು ಎಂಬ ಸಂಖ್ಯಾಭೇದವೂ ನನ್ನಲ್ಲಿಲ್ಲ, ನಾನೇ ಪರಬ್ರಹ್ಮನು ॥೮॥

ಶುದ್ಧವಾದ ಸ್ವರೂಪವುಳ್ಳವನು ನಾನು, ನಿರ್ಗುಣನು ನಾನು, ನಾನೇ ಪರಬ್ರಹ್ಮನು, ನಾನೇ ಅದ್ವಿತೀಯಬ್ರಹ್ಮನು-ಎಂಬ ನಿಶ್ಚಯವೇ ಮಹಾಸ್ನಾನವು. ॥೯॥

ಕೇವಲಂ ಜ್ಞಾನಶುದ್ಧೋಽಸ್ಮಿ ಕೇವಲೋಽಸ್ಮಿ ಪ್ರಿಯೋಽಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೦॥

ನಿರ್ವಿಕಲ್ಪಸ್ವರೂಪೋಽಹಂ ನಿರಂಹೋಽಸ್ಮ್ಯಹಮೇವ ಹಿ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೧॥

ಸದಾಽಸಂಗಸ್ವರೂಪೋಽಸ್ಮಿ ಸರ್ವದಾ ಪರಮೋಽಸ್ಮ್ಯಹಂ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೨॥

ಸದಾ ಹ್ಯೇಕಸ್ವರೂಪೋಽಸ್ಮಿ ಸನಾತನೋಽಸ್ಮ್ಯಹಂ ಸುಖಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೩॥

ಅಪರಿಚ್ಛಿನ್ನರೂಪೋಽಸ್ಮಿ ಅನಂತಾನಂದಮಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೪॥

---

ಆತ್ಮಜ್ಞಾನದಿಂದ ಪ್ರಪಂಚವೆಂಬ ಕೊಳೆಯನ್ನು ಕಳೆದುಕೊಂಡ ಪರಿಶುದ್ಧನು ನಾನು, ಆತ್ಮರೂಪದಿಂದ ನಾನು ಎಲ್ಲರಿಗೂ ಬೇಕಾದವನು, ನಾನೇ ಪರಬ್ರಹ್ಮನು, ನಾನೇ ಬ್ರಹ್ಮನು-ಎಂಬ ನಿಶ್ಚಯವೇ ಮಹಾಸ್ನಾನವು. ॥೧೦॥

ನಿಶ್ಚಯ ಸ್ವರೂಪನು ನಾನು, ಅಹಂಕಾರ ಮಮಕಾರಗಳಿಲ್ಲದವನು ನಾನು, ನಾನೇ ಪರಬ್ರಹ್ಮನು. ನಾನೇ ಅದ್ವಿತೀಯ ಬ್ರಹ್ಮನು-ಎಂಬ ನಿಶ್ಚಯವೇ ಮಹಾಸ್ನಾನವು. ॥೧೧॥

ನನಗೆ ಪ್ರಪಂಚಸಂಬಂಧವು ಇಲ್ಲ, ಸರ್ವೋತ್ತಮನಾದ ಪರಬ್ರಹ್ಮನು ನಾನು ಅದ್ವಿತೀಯ ಬ್ರಹ್ಮನು ನಾನು-ಎಂದು ತಿಳಿವುದೇ ಮಹಾಸ್ನಾನವು. ॥೧೨॥

ಯಾವಾಗಲೂ ನಾನು ಒಂದೇ ಬಗೆಯ ರೂಪವುಳ್ಳವನು, ಯಾವಾಗಲೂ ಇರುವವನು ನಾನು, ನಾನೇ ಬ್ರಹ್ಮನು-ಎಂಬ ನಿಶ್ಚಯವೇ ಮಹಾಸ್ನಾನವು. ॥೧೩॥

ಅಖಂಡವಾದ ಪೂರ್ಣವಾದ ವ್ಯಾಪಕವಾದ ಸ್ವರೂಪನು ನಾನು, ನಾಶವಿಲ್ಲದ ಆನಂದಮೂರ್ತಿಯು ನಾನು, ನಾನೇ ಪರಬ್ರಹ್ಮನು, ನಾನೇ ಅದ್ವಿತೀಯಬ್ರಹ್ಮನು. ॥೧೪॥

ಸತ್ಪರಾನಂದರೂಪೋಹಂ ಚಿತ್ಪರಾನಂದಮಸ್ಮ್ಯಹಂ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೫॥

ಅಂತರಾನಂದರೂಪೋಹಮವಾಙ್ಮನಸಗೋಚರಃ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ನಿಶ್ಚಯಃ ॥೧೬॥

ಬ್ರಹ್ಮಾನಂದಸ್ವರೂಪೋಹಂ ಸತ್ಯಾನಂದಸ್ವರೂಪಕಃ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೭॥

ಆತ್ಮಮಾತ್ರಸ್ವರೂಪೋಸ್ಮಿ ಆತ್ಮಾನಂದಮಯೋಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೮॥

ಆತ್ಮಮಾತ್ರಪ್ರಕಾಶೋಸ್ಮಿ ಆತ್ಮಜ್ಯೋತಿ ರಸೋಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೧೯॥

ಆದಿಮಧ್ಯಾಂತಹೀನೋಸ್ಮಿ ಆಕಾರರಹಿತೋಸ್ಮ್ಯಹಂ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೦॥

---

ಸತ್ಯವಾದ ಉತ್ಕೃಷ್ಟವಾದ ಆನಂದರೂಪನು ನಾನು, ಜ್ಞಾನಸ್ವರೂಪನು ನಾನು, ನಾನೇ ಪರಬ್ರಹ್ಮನು. ನಾನೇ ಅದ್ವಿತೀಯಬ್ರಹ್ಮನು. ॥೧೫॥

ಆನಂದಮೂರ್ತಿಯಾದ ನಾನು ಎಲ್ಲ ಪ್ರಾಣಿಗಳ ಹೃದಯದಲ್ಲಿ ನೆಲಸಿರುವೆನು, ಆದರೆ ವಾಕ್ಕುಮನಗಳಿಗೆ ಗೋಚರನಲ್ಲ. ॥೧೬॥

ಬ್ರಹ್ಮಾನಂದವು ನಾನು, ಸತ್ಯವಾದ ಆನಂದಸ್ವರೂಪನು ನಾನು, ನಾನೇ ಪರಬ್ರಹ್ಮನು ಅದ್ವಿತೀಯಬ್ರಹ್ಮನು ನಾನು-ಎಂಬ ನಿಶ್ಚಯವೇ ಮಹಾಸ್ನಾನವು. ॥೧೭॥

ಕೇವಲ ಆತ್ಮಸ್ವರೂಪನು ನಾನು, ಆತ್ಮಾನಂದಮಯನು ನಾನು, ಪರಬ್ರಹ್ಮನು ನಾನು, ಶುದ್ಧಬ್ರಹ್ಮನು ನಾನು. ॥೧೮॥

ಕೇವಲ ಆತ್ಮರೂಪದಿಂದಲೇ ನಾನು ಪ್ರಕಾಶಿಸುವೆನು, ಆತ್ಮಜ್ಯೋತಿಯ ಘನಸ್ವರೂಪನು ನಾನು, ನಾನೇ ಪರಬ್ರಹ್ಮನು, ನಾನು ಶುದ್ಧಬ್ರಹ್ಮನು. ॥೧೯॥

ಆದಿ-ಮಧ್ಯ-ಅಂತಗಳು ನನಗಿಲ್ಲ. ಪರಬ್ರಹ್ಮವಸ್ತುವು ಹೀಗೇ ಇರುವುದು. ಆದುದರಿಂದ ನಾನೇ ಪರಬ್ರಹ್ಮನು. ॥೨೦॥

ನಿತ್ಯಪೂರ್ಣಸ್ವರೂಪೋಸ್ಮಿ ನಿತ್ಯಂ ನಿರ್ಮನಸೋಸ್ಮ್ಯಹಂ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೧॥

ನಿತ್ಯಂ ಸತ್ತಾಸ್ವರೂಪೋಸ್ಮಿ ನಿತ್ಯಮುಕ್ತೋsಸ್ಮ್ಯಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೨॥

ನಿತ್ಯಂ ಸತ್ಯಸ್ವರೂಪೋಸ್ಮಿ ಸರ್ವಾತೀತೋಸ್ಮ್ಯಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೩॥

ರೂಪಾತೀತಸ್ವರೂಪೋಸ್ಮಿವ್ಯೋಮರೂಪೋಸ್ಮ್ಯಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೪॥

ಭೂಮಾನಂದಸ್ವರೂಪೋಸ್ಮಿ ಭಾಷಾನಂದೋಸ್ಮ್ಯಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೫॥

---

ನಿತ್ಯವಾದ ಪೂರ್ಣವಾದ ಸ್ವರೂಪನು ನಾನು ನನಗೆ ಮನಸ್ಸು ಇಲ್ಲ, ಬ್ರಹ್ಮವಸ್ತುವು ಹೀಗೆಯೇ ಇರುವುದು. ಆದುದರಿಂದ ನಾನೇ ಬಹ್ಮನು. ||೨೧||

ಸದಾ ನಾನು ಸತ್ಯಸ್ವರೂಪನು. ಸದಾ ನಾನು ಮುಕ್ತನು. ಪರಬ್ರಹ್ಮವಸ್ತುವು ಹೀಗೆಯೇ ಇರುವುದು. ಆದುದರಿಂದ ನಾನೇ ಪರಬ್ರಹ್ಮನು. ||೨೨||

ನಾನು ಯಾವಾಗಲೂ ನಾಶವಾಗತಕ್ಕವನಲ್ಲ, ಎಲ್ಲವನ್ನೂ ಆಕ್ರಮಿಸಿದವನು ನಾನು, ಬ್ರಹ್ಮವಸ್ತುವು ಹೀಗೆಯೇ ಇರುವುದು, ಆದುದರಿಂದ ನಾನೇ ಬ್ರಹ್ಮನು. ||೨೩||

ನನಗೆ ರೂಪವು ಇಲ್ಲ, ಗಗನದಂತೆ ನೀರೂಪನೂ ವ್ಯಾಪಕನೂ ಆಗರುವೆನು, ಬ್ರಹ್ಮನೂ ಹೀಗೆಯೇ ಇರುವನು, ಆದುದರಿಂದ ನಾನೇ ಬ್ರಹ್ಮನು. ||೨೪||

ವ್ಯಾಪಕವಾದ ಆನಂದಸ್ವರೂಪನು ನಾನು, ಭಾಷೆಯಿಂದುಂಟಾಗುವ ಆನಂದವು ನಾನೇ, ಬ್ರಹ್ಮವಸ್ತುವು ಹೀಗೆಯೇ ಇರುವುದು, ಆದುದರಿಂದ ನಾನೇ ಬ್ರಹ್ಮನು. ||೨೫||

ಸರ್ವಾಧಿಷ್ಠಾನರೂಪೋಽಹಂ ಸರ್ವದಾ ಚಿದ್ಘನೋಽಸ್ಮ್ಯಹಂ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೬॥

ದೇಹಭಾವವಿಹೀನೋಽಹಂ ಚಿತ್ತಹೀನೋಽಹಮೇವ ಹಿ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೭॥

ದೇಹವೃತ್ತಿವಿಹೀನೋಽಹಮತ್ರೈವಾಹಮಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೮॥

ಸರ್ವದೃಶ್ಯವಿಹೀನೋಽಸ್ಮಿ ದೃಶ್ಯರೂಪೋಽಹಮೇವ ಹಿ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೨೯॥

ಸರ್ವದಾ ಪೂರ್ಣರೂಪೋಽಸ್ಮಿ ನಿತ್ಯತೃಪ್ತೋಽಸ್ಮ್ಯಹಂ ಸದಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೦॥

---

ನಾನು ಸಕಲ ಪದಾರ್ಥಗಳಿಗೂ ಅಧಿಷ್ಠಾನರೂಪನಾಗಿರುವೆನು. ಸದಾ ನಾನು ಜ್ಞಾನಘನನು. ಬ್ರಹ್ಮನೂ ಹೀಗೆಯೇ ಇರುವನು, ಆದುದರಿಂದ ನಾನೇ ಬ್ರಹ್ಮನು. ॥೨೬॥

ದೇಹಭಾವವು ನನಗಿಲ್ಲ, ಮನೋಭಾವವು ನನಗಿಲ್ಲ, ಪರಬ್ರಹ್ಮವಸ್ತುವು ಹೀಗೆಯೇ ಇರುವುದು. ಆದುದರಿಂದ ನಾನೇ ಪರಬ್ರಹ್ಮನು. ॥೨೭॥

ದೇಹದ ಯಾವ ಕರ್ಮಗಳೂ ನನಗಿಲ್ಲ, ಈ ಜಗತ್ತಿನಲ್ಲಿಯೇ ನಾನು ಬೆಳಗುತ್ತಿರುವೆನು. ವೈಕುಂಠಕೈಲಾಸಗಳೆನ್ನುವಲ್ಲಿಯಲ್ಲ, ಬ್ರಹ್ಮವಸ್ತುವು ಹೀಗೆಯೇ ಇರುವುದು. ಆದುದರಿಂದ ನಾನೇ ಬ್ರಹ್ಮನು. ॥೨೮॥

ಕಾಣಿಸುವ ವಸ್ತುಗಳು ಯಾವುವೂ ನನ್ನಲ್ಲಿಲ್ಲ, ಆದರೆ ಕಾಣಿಸುವ ಆವಸ್ತುಗಳ ಸ್ವರೂಪನು (ಪ್ರಕಾಶವು) ನಾನು, ಬ್ರಹ್ಮವಸ್ತುವು ಹೀಗೆಯೇ ಇರುವುದು, ಆದುದರಿಂದ ನಾನೇ ಬ್ರಹ್ಮನು. ॥೨೯॥

ಯಾವಾಗಲೂ ನಾನು ಪರಿಪೂರ್ಣನು, ತೃಪ್ತನು. ಬ್ರಹ್ಮವಸ್ತುವು ಹೀಗೆಯೇ ಇರುವುದು. ಆದುದರಿಂದ ನಾನೇ ಬ್ರಹ್ಮನು. ॥೩೦॥

ಇದಂ ಬ್ರಹ್ಮೈವ ಸರ್ವಂ ಸ್ಯಾದಹಂ ಚೈತನ್ಯಮೇವ ಹಿ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೧॥

ಅಹಮೇವಾಹಮೇವಾಸ್ಮಿ ನಾನ್ಯತ್ಕಿಂಚಿನ್ನವಿದ್ಯತೇ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೨॥

ಅಹಮೇವ ಮಹಾನಾತ್ಮಾ ಅಹಮೇವ ಪರಾತ್ಪರಃ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೩॥

ಅಹಮೇವ ಮಹಾನ್ನಾನ್ಯದಿತ್ಯೇವಂ ಮಂತ್ರಮುತ್ತಮಂ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೪॥

ಅಹಮೇವಾನ್ಯವದ್ಭಾಮಿ ಅಹಮೇವ ಶರೀರವತ್ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೫॥

---

ಜಗತ್ತೆಲ್ಲವೂ ಬ್ರಹ್ಮಸ್ವರೂಪವು, ಆ ಬ್ರಹ್ಮವಸ್ತುವು ನಾನೇ ಆಗಿರುವೆನು. ಇಂತಹ ನಿಶ್ಚಯವೇ ಮಹಾಸ್ನಾನವು (ಜಗತ್ತಿನ ಕೊಳೆಯನ್ನು ತೊಳೆವುದು)॥೩೧॥

"ನಾನು" ಎಂಬ ವ್ಯವಹಾರ ವಿಷಯವಾದ ಆತ್ಮನು ನಾನು, ನನ್ನ ಹೊರತಾಗಿ ಯಾವ ವಸ್ತುವೂ ಇಲ್ಲ, ಬ್ರಹ್ಮವಸ್ತುವೂ ಹೀಗೆಯೇ ಇರುವುದು. ಆದುದರಿಂದ ನಾನೇ ಬ್ರಹ್ಮವಸ್ತುವು. ॥೩೨॥

ನಾನೇ ಪರಮಾತ್ಮನು, ನಾನು ಸರ್ವೋತ್ತಮನು, ಪರಬ್ರಹ್ಮವಸ್ತುವು ಹೀಗೆಯೇ ಇರುವುದು, ಆದುದರಿಂದ ನಾನೇ ಪರಬ್ರಹ್ಮನು. ॥೩೩॥

ನಾನೇ ಮಹತ್ತತ್ವವು, ಅಥವಾ ವಿರಾಟ್ಪುರುಷನು, ಪರಬ್ರಹ್ಮನು ಹೀಗೆಯೇ ಇರುವನು, ಆದುದರಿಂದ ನಾನೇ ಪರಬ್ರಹ್ಮನು. ॥೩೪॥

ನಾನೇ ಬೇರೆಬೇರೆಯಾಗಿರುವಂತೆ ನಾನಾ ಜೀವಾತ್ಮರೂಪದಿಂದ ಪ್ರಕಾಶಿಸುವೆನು, ನಾನು ಬಂದೆನು ಮೊದಲಾದ ದೇಹಾತ್ಮಜ್ಞಾನದಿಂದಲೂ ಪ್ರಕಾಶಿಸುವೆನು ಪರಬ್ರಹ್ಮನು ಹೀಗೆಯೇ ಪ್ರಕಾಶಿಸುವನು, ಆದುದರಿಂದ ನಾನೇ ಪರಬ್ರಹ್ಮನು.॥೩೫॥

ಅಹಂ ಚ ಶಿಷ್ಯವದ್ಭಾಮಿ ಅಹಂ ಲೋಕತ್ರಯಾದಿವತ್ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೬॥

ಅಹಂ ಕಾಲತ್ರಯಾತೀತಃ ಅಹಂ ವೇದೈರುಪಾಸಿತಃಃ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೭॥

ಅಹಂ ಶಾಸ್ತ್ರೇಷು ನಿರ್ಣೀತಃ ಅಹಂ ಚಿತ್ತೇ ವ್ಯವಸ್ಥಿತಃ ।
ಇದಮೇವ ಪರಂಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೮॥

ಮತ್ತ್ಯಕ್ತಂ ನಾಸ್ತಿ ಕಿಂಚಿದ್ವಾ ಮತ್ತ್ಯಕ್ತಂ ಪೃಥಿವೀ ಚ ವಾ ।
ಇದಮೇವ ಪರಂ ಬ್ರಹ್ಮ ಅಹಂ ಬ್ರಹ್ಮಾಸ್ಮಿ ಕೇವಲಂ ॥೩೯॥

ಮಯಾತಿರಿಕ್ತಂ ತೋಯಂ ವಾ ಇದಂ ಮಂತ್ರಮನುತ್ತಮಂ ॥೪೦॥

ನ ಮೇ ಕಾರ್ಯಮಿತಿಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ।
ನ ಮೇ ವಾರ್ತಾ ನ ಮೇ ವಾಕ್ಯಂ ನ ಮೇ ಗೋತ್ರಂ ನ ಮೇ ಕುಲಂ॥೪೧॥

---

ಶಿಷ್ಯನಂತೆ ನಾನು ಕಾಣಿಸುವೆನು. ಮೂರುಲೋಕಗಳಂತೆ ಪ್ರಕಾಶಿಸುವೆನು. ಆ ಲೋಕಗಳಿಗೆ ಆದಿಕಾರಣನಂತೆಯೂ ಬೆಳಗುವೆನು. ॥೩೬॥

ನಾನು ಭೂತಭವಿಷ್ಯದ್ವರ್ತಮಾನ ಕಾಲಗಳ ಅಂಕೆಗೊಳಪಡದವನು, ವೇದಗಳು ನನ್ನನ್ನು ಪರಮಾತ್ಮನೆಂದು ಉಪಾಸಿಸುವುವು ॥೩೭॥

ಶಾಸ್ತ್ರಗಳಲ್ಲಿ ನನ್ನ ಸ್ವರೂಪವನ್ನು ಸಿದ್ಧಾಂತಿಸುವರು, ನಾನು ಪ್ರತಿಯೊಂದು ಪ್ರಾಣಿಯ ಹೃದಯದಲ್ಲಿ ನೆಲಸಿರುವೆನು. ॥೩೮॥

ನನ್ನಿಂದ ಹೊರತಾಗಿ ಯಾವ ವಸ್ತುವೂ ಇಲ್ಲ. ನನ್ನ ಹೊರತಾಗಿ ಭೂಮಿ ಜಲ ಮೊದಲಾದ ಭೂತಗಳೂ ಇಲ್ಲ. ಎಲ್ಲಕ್ಕೂ ನಾನು ಆಧಾರನು. ಪರಬ್ರಹ್ಮನು ಹೀಗೆಯೇ ಇರುವನು, ಆದುದರಿಂದ ನಾನೇ ಪರಬ್ರಹ್ಮನು. ॥೩೯-೪೦॥

ನನಗೆ ಯಾವ ಕಾರ್ಯವೂ ಇಲ್ಲ. ಆದುದರಿಂದ ಸ್ವಸ್ಥವಾಗಿರುವೆನು ನಾನು ಜೀವನ್ಮುಕ್ತನು. ಸುದ್ದಿಯು ನನಗಿಲ್ಲ, ವಾಕ್ಯವು ನನಗಿಲ್ಲ, ಕುಲಗೋತ್ರಗಳು

ನ ಮೇ ವಿದ್ಯೇತಿ ಯಃ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೪೨॥

ನ ಮೇ ನಾದೋ ನ ಮೇ ಶಬ್ದೋ ನ ಮೇ ಲಕ್ಷ್ಯಂ ನ ಮೇ ಭವಃ ।
ನ ಮೇ ಧ್ಯಾನಮಿತಿಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೪೩॥

ನ ಮೇ ಶೀತಂ ನ ಮೇ ಚೋಷ್ಣಂ ನ ಮೇ ಮೋಹೋ ನ ಮೇ ಜಯಃ ।
ನ ಮೇ ಸಂಧ್ಯೇತಿ ಯಸ್ತಿಷ್ಠೇಜ್ಜೀವನ್ಮುಕ್ತೋ ನ ಸಂಶಯಃ ॥೪೪॥

ನ ಮೇ ಜಪೋ ನ ಮೇ ಮಂತ್ರೋ ನ ಮೇ ಹೋಮೋ ನ ಮೇ ನಿಶಾ ।
ನ ಮೇ ಸರ್ವಮಿತಿಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೪೫॥

ನ ಮೇ ಭಯಂ ನ ಮೇ ಚಾನ್ಯತ್ ನ ಮೇ ತೃಷ್ಣಾ ನ ಮೇ ಕ್ಷುಧಾ ।
ನ ಮೇ ಚಾತ್ಮೇತಿ ಯಃ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೪೬॥

---

ನನಗಿಲ್ಲ, ವಿದ್ಯೆಯು ನನಗಿಲ್ಲ ಎಂದು ಯಾವನು ಸ್ವಸ್ಥನಾಗಿರುವನೋ ಅವನೇ ಜೀವನ್ಮುಕ್ತನು. ॥೪೧-೪೨॥

ನನಗೆ ನಾದವಿಲ್ಲ, ಶಬ್ದವಿಲ್ಲ, ಪಡೆಯಬೇಕಾದ ಗುರಿಯಿಲ್ಲ. ಜನನಮರಣಗಳಿಲ್ಲ, ಧ್ಯಾನವು ನನಗಿಲ್ಲ ಎಂದು ತಿಳಿದು ಸ್ವಸ್ಥವಾಗಿರುವವನೇ ಜೀವನ್ಮುಕ್ತನು.॥೪೩

ನನಗೆ ಶೀತ-ಉಷ್ಣ ಮುಂತಾದ ದ್ವಂದ್ವಗಳಿಲ್ಲ, ಮೋಹವು ನನಗಿಲ್ಲ. ಜಯಿಸಲ್ಪಡುವವನಲ್ಲ. ಸಂಜೆಯು ನನಗಿಲ್ಲ. ಎಂದು ತಿಳಿಯುವವನು ಜೀವನ್ಮುಕ್ತನು. ॥೪೪॥

ಜಪವು ನನಗಿಲ್ಲ, ಮಂತ್ರವು ನನಗಿಲ್ಲ, ಹೋಮವು ನನಗಿಲ್ಲ, ರಾತ್ರಿಯು ನನಗಿಲ್ಲ, ನನಗೆ ಯಾವುದೂ ಇಲ್ಲ ಎಂದು ತಿಳಿದು ಸ್ವಸ್ಥವಾಗಿರುವವನೇ ಜೀವನ್ಮುಕ್ತನು. ಸ್ವಸ್ಥನೆಂದರೆ ತನ್ನಲ್ಲಿಯೇ ತಾನು ವಿಹರಿಸುವವನು ಎಂದರ್ಥವು. ॥೪೫॥

ನನಗೆ ಭಯವಿಲ್ಲ, ಆಸೆಯು ಇಲ್ಲ, ಹಸಿವು ನೀರಡಿಕೆಗಳಿಲ್ಲ. ನನಗೆ ಬೇರೊಬ್ಬ ಆತ್ಮನಿಲ್ಲ ಎಂದು ಸ್ವಸ್ಥವಾಗಿರುವವನೇ ಜೀವನ್ಮುಕ್ತನು. ॥೪೬॥

ನ ಮೇ ಪೂರ್ವಂ ನ ಮೇ ಪಶ್ಚಾನ್ನಮೇ ಚೋರ್ಧ್ವಂ ನ ಮೇ ದಿಶಃ ।
ನ ಮೇ ಚಿತ್ತಮಿತಿ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೪೭॥

ನ ಮೇ ವಕ್ತವ್ಯಮಲ್ಪಂ ವಾ ನ ಮೇ ಶ್ರೋತವ್ಯಮಣ್ವಪಿ ।
ನ ಮೇ ಗಂತವ್ಯಮೀಷದ್ವಾ ಜೀವನ್ಮುಕ್ತೋ ನ ಸಂಶಯಃ ॥೪೮॥

ನ ಮೇ ಭೋಕ್ತವ್ಯಮೀಷದ್ವಾ ನ ಮೇ ಧ್ಯಾತವ್ಯಮಣ್ವಪಿ ।
ನ ಮೇ ಸ್ಮರ್ತವ್ಯಮೇವಾಪಿ ಜೀವನ್ಮುಕ್ತೋ ನ ಸಂಶಯಃ ॥೪೯॥

ನ ಮೇ ಭೋಗೋ ನಮೇ ರಾಗೋ ನ ಮೇ ಯೋಗೋ ನ ಮೇ ಲಯಃ ।
ನ ಮೇ ಸರ್ವಮಿತಿ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೫೦॥

ನ ಮೇ ಮೌರ್ಖ್ಯಂ ನ ಮೇ ಶಾಂತಂ ನ ಮೇ ಬಂಧಂ ನ ಮೇ ಪ್ರಿಯಂ ।
ನ ಮೇ ಮೋದಂ ಪ್ರಮೋದಂ ವಾ ಜೀವನ್ಮುಕ್ತೋ ನ ಸಂಶಯಃ ॥೫೧॥

---

ನನಗೆ ಪೂರ್ವ ಪಶ್ಚಿಮ ಮೊದಲಾದ ದಿಕ್ಕುಗಳಿಲ್ಲ. ಮೇಲೆ ಕೆಳಗೆ ಎಂಬುದಿಲ್ಲ. ಎಲ್ಲೆಡೆಯಲ್ಲಿಯೂ ನಾನೇ ಇರುವೆನು. ನನಗೆ ಮನಸ್ಸೆಂಬುದೂ ಇಲ್ಲ–ಎಂದು ತಿಳಿದು ತನ್ನಲ್ಲಿ ತಾನಿರುವವನೇ ಜೀವನ್ಮುಕ್ತನು. ॥೪೭॥

ನನಗೆ ಕೇಳಬೇಕಾದುದು, ಹೇಳಬೇಕಾದುದು ಸ್ವಲ್ಪವೂ ಇಲ್ಲ. ನಾನು ಪಡೆಯಬೇಕಾದುದು ಸ್ವಲ್ಪವೂ ಇಲ್ಲ ಎಂದು ತಿಳಿಯುವವನೇ ಜೀವನ್ಮುಕ್ತನು. ॥೪೮॥

ನಾನು ಅನುಭವಿಸಬೇಕಾದುದೇನೂ ಇಲ್ಲ, ಧ್ಯಾನಮಾಡಬೇಕಾದುದೇನೂ ಇಲ್ಲ, ಸ್ಮರಣಮಾಡತಕ್ಕುದೇನೂ ಇಲ್ಲ ಎಂದು ತಿಳಿಯುವವನೇ ಜೀವನ್ಮುಕ್ತನು.॥೪೯॥

ನನಗೆ ಭೋಗವು ಇಲ್ಲ, ರಾಗವು ಇಲ್ಲ, ಯೋಗವು ಇಲ್ಲ, ಮರಣವು ನನಗಿಲ್ಲ, ನನಗೆ ಏನೂ ಇಲ್ಲ ಎಂದು ತಿಳಿಯುವನೇ ಜೀವನ್ಮುಕ್ತನು. ॥೫೦॥

ದುಷ್ಟಸ್ವಭಾವವು ನನಗಿಲ್ಲ, ಶಾಂತಿಯು ನನಗಿಲ್ಲ, ಬಂಧನವು ನನಗಿಲ್ಲ, ಪ್ರಿಯವಾದುದೇನೂ ನನಗಿಲ್ಲ, ಪ್ರೀತಿಸಂತೋಷಗಳು ನನಗಿಲ್ಲ ಎಂದು ತಿಳಿಯುವನೇ ನಿಜವಾದ ಜೀವನ್ಮುಕ್ತನು. ॥೫೧॥

ನ ಮೇ ದೀರ್ಘಂ ನ ಮೇ ಹ್ರಸ್ವಂ ನ ಮೇ ಸ್ಥೂಲಂ ನ ಮೇ ಕೃಶಂ ।
ನ ಮೇ ಸರ್ವಮಿತಿಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೫೨॥

ನ ಮೇಸ್ತಿತ್ವಂ ನ ಮೇ ಜಾತಂ ನ ಮೇ ವೃದ್ಧಿರ್ನಮೇ ಕ್ಷಯಃ ।
ಅಧ್ಯಾರೋಪೋ ನ ಮೇ ಚಾಸ್ತಿ ಜೀವನ್ಮುಕ್ತೋ ನ ಸಂಶಯಃ ॥೫೩॥

ಆಂಧ್ಯಮಾದ್ಯಂ ನ ಮೇ ಕಿಂಚಿದಪವಾದೋ ನ ಮೇ ಕ್ವಚಿತ್ ।
ನ ಮೇ ಕಿಂಚಿದಹಂ ಯಸ್ತು ಜೀವನ್ಮುಕ್ತೋ ನ ಸಂಶಯಃ ॥೫೪॥

ನ ಮೇ ಶುದ್ಧಿರ್ನಮೇ ಶುಭ್ರೋ ನ ಮೇ ಚೈಕಂ ನ ಮೇ ಬಹು ।
ನ ಮೇ ಭೂತಂ ನ ಮೇ ಕಾರ್ಯಂ ಜೀವನ್ಮುಕ್ತೋ ನ ಸಂಶಯ ॥೫೫॥

ನ ಮೇ ಕೋಹಂ ನ ಮೇ ಚೇದಂ ನ ಮೇ ನಾನ್ಯಂ ನ ಮೇ ಸ್ವಯಂ ।
ನ ಮೇ ಕಶ್ಚಿನ್ನ ಮೇ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೫೬॥

---

ನನಗೆ ಉದ್ದವು ಇಲ್ಲ, ಹ್ರಸ್ವಸ್ವಭಾವವು ಇಲ್ಲ, ಸ್ಥೂಲತ್ವವು ನನಗಿಲ್ಲ, ಕೃಶತೆಯು ನನಗಿಲ್ಲ ಎಂದು ತಿಳಿಯುವವನೇ ಜೀವನ್ಮುಕ್ತನು. ॥೫೨॥

ನನಗೆ ಜನನ, ಅಸ್ತಿತ್ವ, ವೃದ್ಧಿ, ಕ್ಷಯ, ಪರಿಣಾಮ, ಮರಣಗಳೆಂಬ ಆರು ವಿಕಾರಗಳೂ ಇಲ್ಲ, ನಾನು ಎಲ್ಲಿಯೂ ಅಸತ್ಯವಾಗಿ ತೋರುವುದಿಲ್ಲ ಎಂದು ತಿಳಿಯುವವನೇ ನಿಜವಾದ ಜೀವನ್ಮುಕ್ತನು. ॥೫೩॥

ಕುರುಡು ಕಿವುಡು-ಮುಂತಾದ ಇಂದ್ರಿಯಶೂನ್ಯತೆಯು ನನಗಿಲ್ಲ. ಅಪವಾದವು ನನಗಿಲ್ಲ. ಅಹಂಕಾರವು ನನಗೆ ಸ್ವಲ್ಪವೂ ಇಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು. ॥೫೪॥

ನನಗೆ ಶುದ್ಧಿಯು ಇಲ್ಲ, ಶುಭ್ರತ್ವ ಮೊದಲಾದ ಗುಣಗಳು ನನಗಿಲ್ಲ, ಒಂದು ಅನೇಕ-ಎಂಬ ಭೇದವು ನನಗಿಲ್ಲ, ನನಗೆ ಕಳೆದುದು ಕಳೆಯದಿರುವುದು. ಮಾಡಬೇಕಾದುದು-ಎನ್ನುವಂತಹುದು ಇಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು. ॥೫೫॥

ನನಗೆ ಯಾರು ? ನಾನು, ಇದು, ಇವನು, ಬೇರೆಯವನು, ತಾನು-ಎಂಬ ಭೇದಗಳು ಇಲ್ಲ,–ಎಂದು ತಿಳಿಯುವವನೇ ಜೀವನ್ಮುಕ್ತನು. ॥೫೬॥

ನ ಮೇ ಮಾಂಸಂ ನ ಮೇ ರಕ್ತಂ ನ ಮೇ ಮೇದೋ ನ ಮೇ ಹ್ಯಸೃಕ್ ।
ನ ಮೇ ಕೃಪಾ ನ ಮೇಽಸ್ತೀತಿ ಜೀವನ್ಮುಕ್ತೋ ನ ಸಂಶಯಃ ॥೫೭॥

ನ ಮೇ ಸರ್ವಂ ನ ಮೇ ಶುಕ್ಲಂ ನ ಮೇ ನೀಲಂ ನ ಮೇ ಪೃಥಕ್ ।
ನ ಮೇ ಸ್ವಸ್ಥಃ ಸ್ವಯಂ ಯೋ ವಾ ಜೀವನ್ಮುಕ್ತೋ ನ ಸಂಶಯ ॥೫೮॥

ನ ಮೇ ತಾಪಂ ನ ಮೇ ಲೋಭೋ ನ ಮೇ ಗೌಣಂ ನ ಮೇ ಯಶಃ ।
ನ ಮೇ ನತ್ವಮಿತಿಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೫೯॥

ನ ಮೇ ಭ್ರಾಂತಿರ್ನ ಮೇ ಜ್ಞಾನಂ ನ ಮೇ ಗುಹ್ಯಂ ನ ಮೇಕುಲಂ ।
ನ ಮೇ ಕಿಂಚಿದಿತಿ ಧ್ಯಾಯೀ ಜೀವನ್ಮುಕ್ತೋ ನ ಸಂಶಯಃ ॥೬೦॥

ನ ಮೇ ತ್ಯಾಜ್ಯಂ ನ ಮೇ ಗ್ರಾಹ್ಯಂ ನ ಮೇ ಹಾಸ್ಯಂ ನ ಮೇ ಲಯಃ ।
ನ ಮೇ ದೈವಮಿತಿ ಸ್ವಸ್ಥೋ ಜೀವನ್ಮುಕ್ತೋ ನ ಸಂಶಯಃ ॥೬೧॥

---

ನನಗೆ ರಕ್ತ ಮಾಂಸ ಮೇದಸ್ಸು ಯಕೃತ್-ಮೊದಲಾದ ದೇಹಾವಯವ ಭೇದಗಳು ಇಲ್ಲ, ದಯೆಯು ನನಗಿಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು.॥೫೭॥

ನನಗೆ ಬಿಳಿದು ಕಪ್ಪು ಹಸರು-ಮೊದಲಾದ ಬಣ್ಣಗಳಾವುವೂ ಇಲ್ಲ. ಭೇದವು ನನಗಿಲ್ಲ, ನನಗಿಂತ ಹೊರತಾಗಿ ತನ್ನಾತ್ಮದಲ್ಲಿ ತಾನಿರುವನೆಂಬ ವ್ಯಕ್ತಿಯು ಇಲ್ಲ. ॥೫೮॥

ನನಗೆ ತಾಪವಿಲ್ಲ, ಲೋಭವಿಲ್ಲ, ಅಂಗಿತ್ವ (ಅಧೀನತೆ)ವು ನನಗಿಲ್ಲ, ಯಶಸ್ಸು ನನಗಿಲ್ಲ, ಇಲ್ಲವೆಂಬುದು ನನಗಿಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೫೯॥

ನನಗೆ ಭ್ರಾಂತಿಯು ಇಲ್ಲ, ಜ್ಞಾನವು ನನಗಿಲ್ಲ, ರಹಸ್ಯವು ನನಗಿಲ್ಲ, ಕುಲವು ನನಗಿಲ್ಲ-ಎಂದು ತಿಳಿಯುವವನೇ ನಿಜವಾದ ಜೀವನ್ಮುಕ್ತನು. ॥೬೦॥

ನನಗೆ ಬೇಡವಾದುದು-ಬೇಕಾದುದು ಎಂಬುದು ಇಲ್ಲ, ಹಾಸ್ಯವು ನನಗಿಲ್ಲ. ನಾಶವು ನನಗಿಲ್ಲ. ಅದೃಷ್ಟವೆಂಬುದು ನನಗಿಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು. ॥೬೧॥

ನ ಮೇ ವ್ರತಂ ನ ಮೇ ಗ್ಲಾನಿರ್ನ ಮೇ ಶೋಷ್ಯಂ ನ ಮೇ ಸುಖಂ ।
ನ ಮೇ ನ್ಯೂನಂ ಕ್ವಚಿದ್ವಸ್ತು ಜೀವನ್ಮುಕ್ತೋ ನ ಸಂಶಯಃ ॥೬೨॥

ನ ಮೇ ಜ್ಞಾತಾ ನ ಮೇ ಜ್ಞಾನಂ ನ ಮೇ ಜ್ಞೇಯಂ ನ ಮೇ ಸ್ವಯಂ ।
ನ ಮೇ ಸರ್ವಮಿತಿ ಜ್ಞಾನೀ ಜೀವನ್ಮುಕ್ತೋ ನ ಸಂಶಯಃ ॥೬೩॥

ನ ಮೇ ತುಭ್ಯಂ ನ ಮೇ ಮಹ್ಯಂ ನ ಮೇತ್ವಂ ಚ ನ ಮೇ ಹ್ಯಹಂ ।
ನ ಮೇ ಗುರುರ್ನ ಮೇ ಯಸ್ತು ಜೀವನ್ಮುಕ್ತೋ ನ ಸಂಶಯಃ ॥೬೪॥

ನ ಮೇ ಜಾಡ್ಯಂ ನ ಮೇ ಚೈತ್ಯಂ ನ ಮೇ ಗ್ಲಾನಂ ನ ಮೇ ಶುಭಂ ।
ನ ಮೇ ನ ಮೇತಿ ಯಸ್ತಿಷ್ಠೇಜ್ಜೀವನ್ಮುಕ್ತೋ ನ ಸಂಶಯಃ ॥೬೫॥

ನ ಮೇ ಗೋತ್ರಂ ನ ಮೇ ಸೂತ್ರಂ ನ ಮೇ ಪಾತ್ರಂ ನ ಮೇ ಕೃಪಾ ।
ನ ಮೇ ಕಿಂಚಿದಿತಿಧ್ಯಾಯೀ ಜೀವನ್ಮುಕ್ತೋ ನ ಸಂಶಯಃ ॥೬೬॥

---

ನಿಯಮವು ನನಗಿಲ್ಲ, ಒಣಗುವಿಕೆಯು ನನಗಿಲ್ಲ. ಸುಖವು ನನಗಿಲ್ಲ ಕೀಳುತನವು ನನಗಿಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೬೨॥

ನನ್ನನ್ನು ತಿಳಿಯುವವನಿಲ್ಲ ನನ್ನ ಜ್ಞಾನವು ಇಲ್ಲ, ನನಗೆ ತಿಳಿಯಬೇಕಾದ ವಸ್ತುವು ಇಲ್ಲ-ಎಂದು ತಿಳಿಯುವ ಜ್ಞಾನಿಯೇ ಜೀವನ್ಮುಕ್ತನು. ॥೬೩॥

ನಿನಗೆ, ನನಗೆ, ನೀನು, ನಾನು ; ಎಂಬ ಭೇದವು ನನಗಿಲ್ಲ, ಗುರುವು ನನಗಿಲ್ಲ ತರ್ಕಿಸಲ್ಪಡುವುದು ನನಗಿಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೬೪॥

ಸೋಮಾರಿತನ, ಜಡತನ, ಚೈತನ್ಯಗಳು ನನಗಿಲ್ಲ, ಬೇಸರವು ನನಗಿಲ್ಲ, ಒಳ್ಳೆಯದು ನನಗಿಲ್ಲ-ಎಂದು ಯಾವನು ನನಗಾವುದೂ "ಇಲ್ಲ" "ಇಲ್ಲ" ಎಂದು ತಿಳಿಯುವನೋ ಅವನು ನಿಜವಾದ ಜೀವನ್ಮುಕ್ತನು. ॥೬೫॥

ಗೋತ್ರವು ನನಗಿಲ್ಲ. ಸೂತ್ರವು ನನಗಿಲ್ಲ, ಯೋಗ್ಯತೆಯು ನನಗಿಲ್ಲ, ದಯೆಯು ನನಗಿಲ್ಲ,-ಎಂದು ತಿಳಿಯುವವನು ಜೀವನ್ಮುಕ್ತನು. ॥೬೬॥

ನ ಮೇ ಚಾತ್ಮಾ ನ ಮೇ ನಾತ್ಮಾ ನ ಮೇ ಸ್ವರ್ಗಂ ನ ಮೇ ಫಲಂ ।
ನ ಮೇ ದೂಷ್ಯಂ ಕ್ವಚಿದ್ವಸ್ತು ಜೀವನ್ಮುಕ್ತೋ ನ ಸಂಶಯಃ ॥೬೭॥

ನ ಮೇಽಭ್ಯಾಸೋ ನ ಮೇ ವಿದ್ಯಾ ನ ಮೇ ಶಾಂತಿರ್ನ ಮೇ ದಮಃ ।
ನ ಮೇ ಪುರಮಿತಿ ಜ್ಞಾನೀ ಜೀವನ್ಮುಕ್ತೋ ನ ಸಂಶಯಃ ॥೬೮॥

ನ ಮೇ ಜರಾ ನ ಮೇ ಬಾಲ್ಯಂ ನ ಮೇ ಯೌವನಮಣ್ವಪಿ ।
ನ ಮೇ ಮೃತಿರ್ನ ಮೇ ಧ್ವಾಂತಂ ಜೀವನ್ಮುಕ್ತೋ ನ ಸಂಶಯಃ ॥೬೯॥

ನ ಮೇ ಲೋಕಂ ನ ಮೇ ಭೋಗಂ ನ ಮೇ ಸರ್ವಮಿತಿ ಸ್ಮೃತಃ ।
ನ ಮೇ ಮೌನಮಿತಿ ಪ್ರಾಪ್ತಂ ಜೀವನ್ಮುಕ್ತೋ ನ ಸಂಶಯಃ ॥೭೦॥

ಅಹಂ ಬ್ರಹ್ಮಾ ಹ್ಯಹಂ ಬ್ರಹ್ಮಾ ಹ್ಯಹಂ ಬ್ರಹ್ಮೇತಿ ನಿಶ್ಚಯಃ ।
ಚಿದಹಂ ಚಿದಹಂ ಚೇತಿ ಜೀವನ್ಮುಕ್ತೋ ನ ಸಂಶಯಃ ॥೭೧॥

---

ನನಗೆ ಆತ್ಮನಿಲ್ಲ ಅನಾತ್ಮವಸ್ತುವು ಇಲ್ಲ, ಸ್ವರ್ಗ ಮೊದಲಾದ ಫಲಗಳು ಇಲ್ಲ, ನಿಂದಾಸ್ಪದವಾದುದೆಂಬುದು ನನಗಿಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೬೭॥

ನನಗೆ ವಿದ್ಯೆಯು ಇಲ್ಲ, ಅಭ್ಯಾಸವು ಇಲ್ಲ, ಶಾಂತಿಯು ಇಲ್ಲ. ಇಂದ್ರಿಯ ನಿಗ್ರಹವು ಇಲ್ಲ. ನಗರವು ನನಗಿಲ್ಲ-ಎಂದು ತಿಳಿಯುವವನೇ ಜೀವನ್ಮುಕ್ತನು ॥೬೮॥

ಬಾಲ್ಯ, ಯೌವನ, ವಾರ್ಧಕ್ಯ-ಮೊದಲಾದ ಅವಸ್ಥೆಗಳು ನನಗಿಲ್ಲವೇ ಇಲ್ಲ ಮರಣವು ನನಗಿಲ್ಲ, ಕತ್ತಲೆಯೂ ನನಗಿಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೬೯॥

ನನಗೆ ಲೋಕಗಳಿಲ್ಲ, ಲೋಕಗಳ ಭೋಗವು ಇಲ್ಲ, ನನಗೆ ಮೌನವು ಇಲ್ಲ, ಏನೂ ಇಲ್ಲ-ಎಂದು ತಿಳಿಯುವವನು ಜೀವನ್ಮುಕ್ತನು. ॥೭೦॥

ನಾನು ಬ್ರಹ್ಮನು, ನಾನು ಬ್ರಹ್ಮನು, ನಾನು ಬ್ರಹ್ಮನು, ಜ್ಞಾನಮೂರ್ತಿಯು ನಾನು, ಜ್ಞಾನಸ್ವರೂಪನು ನಾನು-ಎಂದು ಅನುಸಂಧಾನಮಾಡುವವನು ಜೀವನ್ಮುಕ್ತನು. ॥೭೧॥

ಬ್ರಹ್ಮೈವಾಹಂ ಚಿದೇವಾಹಂ ಪರೈವಾಹಂ ನ ಸಂಶಯಃ ।
ಸ್ವಯಮೇವ ಸ್ವಯಂ ಜ್ಯೋತಿರ್ಜೀವನ್ಮುಕ್ತೋ ನ ಸಂಶಯಃ ॥೭೨॥

ಸ್ವಯಮೇವ ಸ್ವಯಂ ಪಶ್ಯೇತ್ಸ್ವಯಮೇವ ಸ್ವಯಂ ಸ್ಥಿತಿಃ ।
ಸ್ವಾತ್ಮನ್ಯೇವ ಸ್ವಯಂ ಭೂತೋ ಜೀವನ್ಮುಕ್ತೋ ನ ಸಂಶಯಃ ॥೭೩॥

ಸ್ವಾತ್ಮಾನಂದಂ ಸ್ವಯಂ ಭುಂಕ್ತೇ ಸ್ವಾತ್ಮಾರಾಮಃ ಸ್ವಯಂ ವಶೇ ।
ಸ್ವಯಮೇವ ಸ್ವಯಂ ಪಶ್ಯೇಜ್ಜೀವನ್ಮುಕ್ತೋ ನ ಸಂಶಯಃ ॥೭೪॥

ಸ್ವಯಮೇವಾಸಮೇಕಾಗ್ರೇ ಸ್ವಯಮೇವ ಸ್ವಯಂ ಪ್ರಭುಃ ।
ಸ್ವಸ್ವರೂಪಂ ಸ್ವಯಂ ವೇತ್ತಿ ಜೀವನ್ಮುಕ್ತೋ ನ ಸಂಶಯಃ ॥೭೫॥

ಜೀವನ್ಮುಕ್ತಿಪ್ರಕರಣಂ ಸರ್ವವೇದೇಷು ದುರ್ಲಭಂ ।
ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೭೬॥

---

ನಾನೇ ಬ್ರಹ್ಮನು, ಬ್ರಹ್ಮನೇ ನಾನು, ಪರಮಾತ್ಮನೇ ನಾನು, ನಾನೇ ಪರಮಾತ್ಮ ಸ್ವಯಂಪ್ರಕಾಶನು ನಾನು, ಎಂದು ತಿಳಿಯುವವನು ಜೀವನ್ಮುಕ್ತನು. ॥೭೨॥

ತನ್ನನ್ನೇ ತಾನು ನೋಡುತ್ತಾ ತಾನೇ ತನ್ನಲ್ಲಿ ತಾನಾಗಿರುತ್ತಾ ತನ್ನಲ್ಲಿಯೇ ತಾನು ತಾನಾಗಿ ಜನಿಸುವೆನೆಂದು ತಿಳಿಯುವವನೇ ಜೀವನ್ಮುಕ್ತನು.॥೭೩॥

ತನ್ನ ಆತ್ಮಾನಂದವನ್ನು ತಾನೇ ಅನುಭವಿಸುತ್ತಾ, ತನ್ನಲ್ಲಿಯೇ ವಿಹರಿಸುತ್ತಾ ತನ್ನಲ್ಲಿಯೇ ತನ್ನನ್ನೇ ತಾನು ನೋಡುವವನೇ ಜೀವನ್ಮುಕ್ತನು. ॥೭೪॥

ನಾನೇ ಮೊದಲು ಜಗದಾದಿಯಲ್ಲಿ ಇದ್ದವನು, ನನಗೆ ನಾನೇ ಈಶ್ವರನು ಎಂದು ತಿಳಿದು ತನ್ನ ಸ್ವರೂಪವನ್ನು ತಾನೇ ನೋಡುವವನೇ ಜೀವನ್ಮುಕ್ತನು.॥೭೫॥

ವೇದಗಳಲ್ಲೂ ತಿಳಿಯಲಾರದಂತಹ ಈ ಜೀವನ್ಮುಕ್ತಿ ಪ್ರಕರಣವನ್ನು ಯಾವನು ಒಂದುಬಾರಿಯಾದರೂ ಕೇಳುವನೋ ಅವನು ಬ್ರಹ್ಮನೇ ಆಗುವನು. ॥೭೬॥

ಯೇ ವೇದವಾದವಿಧಿಕಲ್ಪಿತ ಭೇದಬುದ್ಧ್ಯಾ
ಪುಣ್ಯಾಭಿಸಂಧಿತಧಿಯಾ ಪರಿಕರ್ಶಯಂತಃ ।
ದೇಹಂ ಸ್ವಕೀಯಮತಿದುಃಖಪರಂಪರಾಭಿಃ
ತೇಷಾಂ ಸುಖಾಯ ನ ತು ಜಾತು ತವೇಶಪಾದಾತ್ ॥೭೭॥

ಕಸ್ಸಂತರೇತ ಭವಸಾಗರಮೇತದುದ್ಯ
ತ್ತಾರಂಗರಂಗಸದೃಶಂ ಜನಿಮೃತ್ಯುರೂಪಂ ।
ಈಶಾರ್ಚನಾವಿಧಿ ಸುಬೋಧಿತಭೇದಹೀನ
ಜ್ಞಾನೋಡುಪೇನ ಪ್ರತರೇದ್ಧ್ರುವಭಾವಯುಕ್ತಃ ॥೭೮॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಏಕಾದಶೋಽಧ್ಯಾಯಃ

---

ಯಾರು ಭೇದಬುದ್ಧಿಯುಳ್ಳವರಾಗಿ ಪುಣ್ಯವನ್ನು ಸಂಪಾದಿಸುವ ಆಸೆಯಿಂದ ಕರ್ಮಪರವಾದ ವೇದವಿಧಿಗಳನ್ನನುಸರಿಸುತ್ತಾ ತಮ್ಮ ದೇಹವನ್ನು ವ್ಯರ್ಥವಾಗಿ ಕ್ಲೇಶಪಡಿಸುವರೋ ಅವರಿಗೆ ಎಂದೆಂದಿಗೂ ಸುಖವಿಲ್ಲ ॥೭೭॥

ಜನನ ಮರಣಗಳೆಂಬ ಮಹಾಮಹಾತರಂಗಗಳಿಂದ ಭಯಂಕರವಾದೀ ಸಂಸಾರ ಸಾಗರವನ್ನು ದಾಟುವರು ಯಾರೆಂದರೆ; ವೇದದಲ್ಲಿ ಹೇಳಿದಂತೆ ಅಭೇದ ಬುದ್ಧಿಯುಳ್ಳವರು ಜ್ಞಾನವೆಂಬ ಹಡಗಿನಿಂದ ಸುಖವಾಗಿ ದಾಟಬಹುದು. ॥೭೮॥

ಶಿವರಹಸ್ಯದ ಆರನೆಯ ಅಂಶದಲ್ಲಿ ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದ್ವಾದಶೋಽಧ್ಯಾಯಃ

॥ ಋಭುರುವಾಚ ॥

ದೇಹಮುಕ್ತಿಪ್ರಕರಣಂ ನಿದಾಘ ಶೃಣು ದುರ್ಲಭಂ ।
ತ್ಯಕ್ತಾತ್ಯಕ್ತಂ ನ ಸ್ಮರತಿ ವಿದೇಹಾನ್ಮುಕ್ತ ಏವ ಸಃ ॥೧॥

ಬ್ರಹ್ಮರೂಪಃ ಪ್ರಶಾಂತಾತ್ಮಾ ನಾನ್ಯರೂಪಃ ಸದಾ ಸುಖೀ ।
ಸ್ವಚ್ಛರೂಪೋ ಮಹಾಮೌನೀ ವಿದೇಹಾನ್ಮುಕ್ತ ಏವ ಸಃ ॥೨॥

ಸರ್ವಾತ್ಮಾ ಸರ್ವಭೂತಾತ್ಮಾ ಶಾಂತಾತ್ಮಾ ಮುಕ್ತಿವರ್ಜಿತಃ ।
ಏಕಾತ್ಮವರ್ಜಿತಃ ಸಾಕ್ಷೀ ವಿದೇಹಾನ್ಮುಕ್ತ ಏವ ಸಃ ॥೩॥

---

## ಹನ್ನೆರಡನೆಯ ಅಧ್ಯಾಯ

ಎಲೈ ನಿದಾಘಮುನಿ, ಅತ್ಯುತ್ತಮವಾದ ದೇಹಮುಕ್ತಿಯನ್ನು ವಿವರಿಸುವೆನು ಕೇಳು, ಯಾವನು ಕಳೆದುದನ್ನೂ ಕಳೆಯದುದನ್ನೂ ಕುರಿತು ಯೋಚಿಸುವುದಿಲ್ಲವೋ ಆತನು ದೇಹದಿಂದ ಮುಕ್ತನು (ಬಿಡಲ್ಪಡುವನು) ಅಂದರೆ ಪುತ್ರ ಪತ್ನಿ ಮೊದಲಾದವರನ್ನು ವಿಧಿವಶಾತ್ ಕಳೆದುಕೊಂಡರೂ ದುಃಖಿಸದವನು ಮುಕ್ತನು. ದೇಹಾಭಿಮಾನವಿಲ್ಲದವನು ಎಂದಭಿಪ್ರಾಯ. ॥೧॥

ಬ್ರಹ್ಮಸ್ವರೂಪನೂ, ಶಾಂತನೂ, ನಾನಾರೂಪಗಳಿಲ್ಲದವನೆಂದು ತನ್ನನ್ನು ತಿಳಿದುಕೊಂಡಿರುವನೂ, ಪರಿಶುದ್ಧನೂ, ಮೌನಶಾಲಿಯೂ ಆದವನು ವಿದೇಹಮುಕ್ತನು. ॥೨॥

ಎಲ್ಲರ ಆತ್ಮಸ್ವರೂಪನೂ ಸರ್ವತ್ರ ಸಮದೃಷ್ಟಿಯುಳ್ಳವನೂ, ಬಂಧನವು ಸತ್ಯವಲ್ಲದ್ದರಿಂದ ಮುಕ್ತಿಯು ವಸ್ತುತಃ ಇಲ್ಲವೆಂದು ತಿಳಿದಿರುವವನೂ, ತಾನೋರ್ವ

ಲಕ್ಷ್ಯೈಕ್ಯಾತ್ಮಾ ಲಲಿತಾತ್ಮಾಹಂಲೀಲಾತ್ಮಾ ಸ್ವಾತ್ಮಮಾತ್ರಕಃ ।
ಅಜಾತ್ಮಾ ಚಾಮೃತಾತ್ಮಾ ಹಿ ವಿದೇಹೋ ಮುಕ್ತ ಏವ ಸಃ ॥೪॥

ಶುಭ್ರಾತ್ಮಾ ಸ್ವಯಮಾತ್ಮಾಹಂ ಸರ್ವಾತ್ಮಾ ಸ್ವಾತ್ಮಮಾತ್ರಕಃ ।
ತೂಷ್ಣೀಮಾತ್ಮಾ ಸ್ವಭಾವಾತ್ಮಾ ವಿದೇಹಾನ್ಮುಕ್ತ ಏವಸಃ ॥೫॥

ಆನಂದಾತ್ಮಾ ಪ್ರಿಯೋ ಹ್ಯಾತ್ಮಾ ಮೋಕ್ಷಾತ್ಮಾ ಕೋಪಿ ನಿರ್ಣಯಃ ।
ಇತ್ಯೇವಮಿತಿ ನಿಧ್ಯಾಯಿಿ ವಿದೇಹಾನ್ಮುಕ್ತ ಏವಸಃ ॥೬॥

ಬ್ರಹ್ಮೈವಾಹಂ ಚಿದೇವಾಹಂ ಏಕಂ ವಾಪಿ ನ ಚಿಂತ್ಯತೇ ।
ಚಿನ್ಮಾತ್ರೇಣೈವಯಸ್ತಿಷ್ಠೇದ್ವಿದೇಹಾನ್ಮುಕ್ತ ಏವಸಃ ॥೭॥

---

ಬೇರೆ ಆತ್ಮನೆಂದು ತಿಳಿಯದವನೂ, ಎಲ್ಲವನ್ನೂ ಸಾಕ್ಷಿಯಾಗಿ ನೋಡುವವನೂ, ಆದವನು ವಿದೇಹಮುಕ್ತನು. ॥೩॥

ಎಲ್ಲರಿಗೂ ಗುರಿಯಾದ ಆತ್ಮನೂ, 'ನಾನು' 'ನಾನು' ಎಂಬ ಭಾವನೆಗೆ ವಿಷಯನಾದವನೂ, ವಸ್ತುತಃ ತಾನೊರ್ವನೇ ಆತ್ಮನೆಂದು ತಿಳಿದಿರುವವನೂ, ಜನನಮರಣಗಳಿಲ್ಲದವನೂ, ಸಹ ವಿದೇಹ ಮುಕ್ತನು. ॥೪॥

ಪರಿಶುದ್ಧನಾದ ಆತ್ಮನು ನಾನು, ಎಲ್ಲರ ಆತ್ಮನು ನಾನು ಉದಾಸೀನನು ನಾನು, ನಾನೊರ್ವನೇ ಇರುವವನು. ಎಂದು ತಿಳಿದಿರುವವನು ವಿದೇಹಮುಕ್ತನು. ॥೫॥

ಆನಂದ ಸ್ವರೂಪನು ನಾನು, ಎಲ್ಲ ಪ್ರಾಣಿಗಳೂ ಅತಿ ಮಮತೆಯಿಂದ ನೋಡಿಕೊಳ್ಳುವ ಆತ್ಮನು ನಾನು, ಮುಕ್ತಿಯು ನನ್ನ ಹೊರತು ಬೇರೆಯಿಲ್ಲ ಎಂದು ತಿಳಿಯುವವನು ವಿದೇಹಮುಕ್ತನು, ದೇಹದಿಂದ ಬಿಡಲ್ಪಟ್ಟವನು, ದೇಹಾಭಿಮಾನ ವಿಲ್ಲದ ಜ್ಞಾನಿ. ॥೬॥

ವ್ಯಾಪಕವಾದ ಜ್ಞಾನಮೂರ್ತಿಯಾದ ಅದ್ವಿತೀಯನಾದ ಬ್ರಹ್ಮನೇ ನಾನು ಎಂದು ಕೇವಲ ಪರಮಾತ್ಮಸ್ವರೂಪನಾಗಿರುವವನು ಜೀವನ್ಮುಕ್ತನು. ॥೭॥

ನಿಶ್ಚಯಂ ಚ ಪರಿತ್ಯಜ್ಯ ಅಹಂ ಬ್ರಹ್ಮೇತಿ ನಿಶ್ಚಯಃ ।
ಆನಂದಭೂರಿದೇಹಸ್ತು ವಿದೇಹಾನ್ಮುಕ್ತ ಏವ ಸಃ ॥೮॥

ಸರ್ವಮಸ್ತೀತಿ ನಾಸ್ತೀತಿ ನಿಶ್ಚಯಂ ತ್ಯಜ್ಯ ತಿಷ್ಠತಿ ।
ಅಹಂ ಬ್ರಹ್ಮಾಸ್ಮಿ ನಾನ್ಯೋಽಸ್ತಿ ವಿದೇಹಾನ್ಮುಕ್ತ ಏವ ಸಃ ॥೯॥

ಕಿಂಚಿತ್ ಕ್ವಚಿತ್ ಕದಾಚಿಚ್ಚ ಆತ್ಮಾನಂ ನ ಸ್ಮರತ್ಯಹೋ ।
ಸ್ವಸ್ವಭಾವೇನ ಯಸ್ತಿಷ್ಠೇದ್ವಿದೇಹಾನ್ಮುಕ್ತ ಏವ ಸಃ ॥೧೦॥

ಅಹಮಾತ್ಮಾ ಪರೋ ಹ್ಯಾತ್ಮಾ ಚಿದಾತ್ಮಾನ್ಯಂ ನ ಚಿಂತತಿ ।
ಸ್ಥಾಸ್ಯಾಮೀತ್ಯಪಿ ಯೋ ಮುಕ್ತೋ ವಿದೇಹಾನ್ಮುಕ್ತ ಏವ ಸಃ ॥೧೧॥

ತೂಷ್ಣೀಮೇವ ಸ್ಥಿತಸ್ತೂಷ್ಣೀಂ ಸರ್ವಂ ತೂಷ್ಣೀಂ ನ ಕಿಂಚನ ।
ಅಹಮರ್ಥಪರಿತ್ಯಕ್ತೋ ವಿದೇಹಾನ್ಮುಕ್ತ ಏವ ಸಃ ॥೧೨॥

---

ಮಿಕ್ಕ ನಿಶ್ಚಯಗಳನ್ನು ಬಿಟ್ಟು ಆನಂದಮಯನಾದ ಬ್ರಹ್ಮನು ನಾನು ಎಂಬ ನಿಶ್ಚಯವುಳ್ಳವನು ವಿದೇಹಮುಕ್ತನು. ॥೮॥

ಎಲ್ಲವೂ ಇದೆ, ಎಲ್ಲವೂ ಇಲ್ಲ, ಎಂಬ ಸಂಶಯ ನಿಶ್ಚಯಗಳನ್ನು ಬಿಟ್ಟು ನಾನು ಬ್ರಹ್ಮನು ನನ್ನ ಹೊರತು ಯಾರೂ ಇಲ್ಲ. ಎಂದು ತಿಳಿಯುವವನು ವಿದೇಹ ಮುಕ್ತನು. ॥೯॥

ತನ್ನ ಸ್ವರೂಪದಲ್ಲಿ ತಾನಿರುತ್ತಾ ಎಲ್ಲಿಯೂ ಯಾವಾಗಲೂ ಏನನ್ನೂ ಚಿಂತಿಸದಂತಹವನೇ ವಿದೇಹಮುಕ್ತನು, ದೇಹಾಭಿಮಾನವಿಲ್ಲದ ಜ್ಞಾನಿಯು. ॥೧೦॥

ನಾನು ಪರಮಾತ್ಮನು ಜೀವನ್ಮುಕ್ತನೂ ನಾನು, ಎಂದು ತನ್ನ ಹೊರತು ಬೇರೆ ಏನನ್ನೂ ಚಿಂತಿಸದೆ ತನ್ನನ್ನೇ ಚಿಂತಿಸುವವನು ವಿದೇಹಮುಕ್ತನು. ॥೧೧॥

ಯಾವ ಕಾರ್ಯವೂ ಫಲವೂ ತನಗಿಲ್ಲವೆಂದು ತಿಳಿದು ಸಾಕ್ಷಿಯಾಗಿರುವವನು ಮತ್ತು ಅಹಂಭಾವವಿಲ್ಲದವನು ಯಾವನೋ ಅವನೇ ವಿದೇಹಮುಕ್ತನು. ॥೧೨॥

ಪರಮಾತ್ಮಾ ಗುಣಾತೀತಃ ಸರ್ವಾತ್ಮಾಪಿ ನ ಸನ್ಮತಃ ।
ಸರ್ವಭಾವಾನ್ಮಹಾತ್ಮಾಯೋ ವಿದೇಹಾನ್ಮುಕ್ತ ಏವ ಸಃ ॥೧೩॥

ಕಾಲಭೇದಂ ದೇಶಭೇದಂ ವಸ್ತುಭೇದಂ ಸ್ವಭೇದಕಂ ।
ಕಿಂಚಿದ್ಭೇದಂ ನ ಯಸ್ಯಾಸ್ತಿ ವಿದೇಹಾನ್ಮುಕ್ತ ಏವ ಸಃ ॥೧೪॥

ಅಹಂ ತ್ವಂ ತದಿದಂ ಸೋಽಯಂ ಕಿಂಚಿದ್ವಾಪಿ ನ ವಿದ್ಯತೇ ।
ಅತ್ಯಂತಂ ಸುಖಮಾತ್ರಾತ್ಮಾ ವಿದೇಹಾನ್ಮುಕ್ತ ಏವ ಸಃ ॥೧೫॥

ನಿರ್ಗುಣಾತ್ಮಾ ನಿರಾತ್ಮಾ ಹಿ ನಿತ್ಯಾತ್ಮಾ ನಿತ್ಯನಿರ್ಣಯಃ ।
ಶೂನ್ಯಾತ್ಮಾ ಸೂಕ್ಷ್ಮರೂಪೋ ಯೋ ವಿದೇಹೋ ಮುಕ್ತ ಏವ ಸಃ ॥೧೬॥

ವಿಶ್ವಾತ್ಮಾ ವಿಶ್ವಹೀನಾತ್ಮಾ ಕಾಲಾತ್ಮಾ ಕಾಲಹೇತುಕಃ ।
ದೇಹಾತ್ಮಾ ದೇಹಹೀನೋ ಯೋ ವಿದೇಹೋ ಮುಕ್ತ ಏವ ಸಃ ॥೧೭॥

---

ನಿರ್ಗುಣನಾದ ಪರಮಾತ್ಮನು ನಾನು, ಎಲ್ಲವಸ್ತುಗಳ ಸ್ವರೂಪನೆಂದು ಪರಿಗಣಿಸಿದರೂ ಅನಾತ್ಮವಸ್ತುವು ವಸ್ತುತಃ ನಾನಲ್ಲ ಎಂದು ತಿಳಿದವನು ವಿದೇಹಮುಕ್ತನು. ॥೧೩॥

ಯಾವನಿಗೆ ಕಾಲಭೇದ, ದೇಶಭೇದ, ವಸ್ತುಭೇದ, ತನ್ನಲ್ಲಿ ಭೇದ ಮೊದಲಾದ ಯಾವ ಭೇದಗಳೂ ಇಲ್ಲವೋ ಅವನೇ ವಿದೇಹಮುಕ್ತನು. ॥೧೪॥

ನಾನು, ನೀನು, ಅದು, ಇದು, ಅವನು, ಇವನು-ಎಂಬ ಭೇದವೇ ಇಲ್ಲ. ನಾನು ಕೇವಲ ಸುಖಸ್ವರೂಪನು-ಎಂದು ತಿಳಿದಿರುವವನು ವಿದೇಹಮುಕ್ತನು.॥೧೫॥

ನಾನು ನಿರ್ಗುಣನು, ನನ್ನ ಹೊರತು ಬೇರೆ ಆತ್ಮನಿಲ್ಲವು. ನಿತ್ಯನು ನಾನು, ನನ್ನಲ್ಲಿ ಯಾವಭಾವವೂ ಇಲ್ಲವು. ಇಂದ್ರಿಯಗಳಿಗೆ ಗೋಚರನಲ್ಲದ ಸೂಕ್ಷ್ಮನು ನಾನು-ಎಂದು ತಿಳಿಯುವವನು ವಿದೇಹಮುಕ್ತನು. ॥೧೬॥

ಜಗನ್ಮಯನು ನಾನು, ಆದರೆ ಜಗತ್ತು ನನ್ನಹೊರತಾಗಿ ವಸ್ತುತಃ ಇಲ್ಲವು. ಕಾಲರೂಪನೂ ಕಾಲಕ್ಕೆ ಕಾರಣನೂ ನಾನು, ದೇಹದಲ್ಲಿ ತೋರುವವನಾದರೂ ವಸ್ತುತಃ ನನಗೆ ದೇಹವಿಲ್ಲವು-ಎಂದು ತಿಳಿಯುವವನು ವಿದೇಹಮುಕ್ತನು. ॥೧೭॥

ಮಾತ್ರಾತ್ಮಾ ಮೇಯಹೀನೋ ಯೋ ಮೂಢಾತ್ಮಾ ನಾತ್ಮವರ್ಜಿತಃ ।
ಕೇವಲಾತ್ಮಾ ಪರಾತ್ಮಾ ಯೋ ವಿದೇಹೋ ಮುಕ್ತ ಏವ ಸಃ ॥೧೮॥

ಸರ್ವತ್ರಜಡಹೀನಾತ್ಮಾ ಸರ್ವೇಷಾಮಂತರಾತ್ಮಗಃ ।
ಸರ್ವೇಷಾಮಿತಿಯಸ್ತ್ಯಕ್ತೋ ವಿದೇಹೋ ಮುಕ್ತ ಏವ ಸಃ ॥೧೯॥

ಸರ್ವಸಂಕಲ್ಪಹೀನೇತಿ ಸಚ್ಚಿದಾನಂದಮಾತ್ರಕಃ ।
ಸ್ಥಾಸ್ಯಾಮೀತಿ ನ ಯಸ್ಯಾಂತೋ ವಿದೇಹೋ ಮುಕ್ತ ಏವ ಸಃ ॥೨೦॥

ಸರ್ವಂ ನಾಸ್ತಿ ತದಸ್ತೀತಿ ಚಿನ್ಮಾತ್ರೋsಸ್ತೀತಿ ಸರ್ವದಾ ।
ಪ್ರಬುದ್ಧೋ ನಾಸ್ತಿ ಯಸ್ಯಾಂತೋ ವಿದೇಹಾನ್ಮುಕ್ತ ಏವ ಸಃ ॥೨೧॥

ಕೇವಲಂ ಪರಮಾತ್ಮಾ ಯಃ ಕೇವಲಂ ಜ್ಞಾನವಿಗ್ರಹಃ ।
ಸತ್ತಾಮಾತ್ರಸ್ವರೂಪೋ ಯೋ ವಿದೇಹಾನ್ಮುಕ್ತ ಏವ ಸಃ ॥೨೨॥

---

ಪ್ರಮಾತೃವು ನಾನು, ಆದರೂ ನನ್ನ ಹೊರತು ಪ್ರಮಾಣಿಸಿ ನೋಡುವಂತಹ ಬೇರೆ ವಸ್ತುವು ಇಲ್ಲ, ಮೂಢರಲ್ಲಿಯೂ ನಾನಿರುವೆನು, ಅನಾತ್ಮವು ನಾನಲ್ಲ, ಪರಮಾತ್ಮನು ನಾನು-ಎಂದು ತಿಳಿಯುವವನೇ ವಿದೇಹಮುಕ್ತನು. ॥೧೮॥

ಎಲ್ಲಿಯೂ ನಾನು ಜಡನಲ್ಲ, ಎಲ್ಲರ ಹೃದಯದಲ್ಲಿ ನೆಲಸಿರುವ ಆತ್ಮನು ನಾನು, ಆದರೆ ಎಲ್ಲರ ಎಂಬ ಭೇದವು ನನಗಿಲ್ಲ-ಎಂದು ತಿಳಿಯುವವನು ವಿದೇಹಮುಕ್ತನು. ॥೧೯॥

ಯಾವ ಸಂಕಲ್ಪವೂ ನನಗಿಲ್ಲ, ಸತ್ಯಜ್ಞಾನಾನಂದಸ್ವರೂಪನು ನಾನು, ಕೊನೆಯೂ ಮೊದಲೂ ಮಧ್ಯವೂ ನಾಶವೂ ನನಗಿಲ್ಲವು-ಎಂದು ತಿಳಿಯುವವನು ವಿದೇಹಮುಕ್ತನು. ॥೨೦॥

ನನ್ನ ಹೊರತು ಯಾವ ವಸ್ತುವೂ ಇಲ್ಲ, ಜ್ಞಾನಮೂರ್ತಿಯಾದ ನಾನೊರ್ವನೇ ಇರುವೆನು, ನನಗೆ ನಾಶವಿಲ್ಲವು-ಎಂದು ತಿಳಿಯುವವನು ವಿದೇಹಮುಕ್ತನು.

ಜ್ಞಾನಮೂರ್ತಿಯಾದ ಪರಮಾತ್ಮನು ನಾನು, ಕೇವಲ ಸತ್ಯಸ್ವರೂಪನು ನಾನು-ಎಂದು ತಿಳಿದಿರುವವನು ವಿದೇಹಮುಕ್ತನು. ॥೨೨॥

ಜೀವೇಶ್ವರೇತಿ ಚೈತ್ಯೇತಿ ವೇದಶಾಸ್ತ್ರೇತ್ವಹಂ ತ್ವಿತಿ ।
ಬ್ರಹ್ಮೈವೇತಿ ನ ಯಸ್ಯಾಂತೋ ವಿದೇಹಾನ್ಮುಕ್ತ ಏವ ಸಃ ॥೨೩॥

ಬ್ರಹ್ಮೈವ ಸರ್ವಮೇವಾಹಂ ನಾನ್ಯತ್ಕಿಂಚಿಜ್ಜಗದ್ಭವೇತ್ ।
ಇತ್ಯೇವ ನಿಶ್ಚಯಾಭಾವೋ ವಿದೇಹಾನ್ಮುಕ್ತ ಏವ ಸಃ ॥೨೪॥

ಇದಂ ಚೈತನ್ಯಮೇವೇತಿ ಅಹಂ ಚೈತನ್ಯಮೇವ ಹಿ ।
ಇತಿ ನಿಶ್ಚಯಶೂನ್ಯೋ ಯೋ ವಿದೇಹಾನ್ಮುಕ್ತ ಏವ ಸಃ ॥೨೫॥

ಚೈತನ್ಯಮಾತ್ರಃ ಸಂಸಿದ್ಧಃ ಸ್ವಾತ್ಮಾರಾಮಃ ಸುಖಾಸನಃ ।
ಸುಖಮಾತ್ರಾಂತರಂಗೋ ಯೋ ವಿದೇಹಾನ್ಮುಕ್ತ ಏವ ಸಃ ॥೨೬॥

ಅಪರಿಚ್ಛಿನ್ನರೂಪಾತ್ಮಾ ಅಣೋರಣುರ್ವಿನಿರ್ಮಲಃ ।
ತುರ್ಯಾತೀತಃ ಪರಾನಂದೋ ವಿದೇಹೋ ಮುಕ್ತ ಏವ ಸಃ ॥೨೭॥

---

ಜೀವ, ಈಶ್ವರ, ಚೈತನ್ಯ (ಬುದ್ಧಿ) ವೇದ, ಶಾಸ್ತ್ರ, ಬ್ರಹ್ಮನೇ ನಾನು-ಎಂದು ಮೊದಲಾದ ವಸ್ತುಭೇದವು ವಿವರಣಭೇದ ಸ್ವರೂಪಭೇದವು ಯಾವನಿಗಿಲ್ಲವೋ ಅವನೇ ವಿದೇಹಮುಕ್ತನು. ॥೨೩॥

ನಾನೇ ಬ್ರಹ್ಮನು, ಎಲ್ಲವೂ ನಾನು, ನನ್ನ ಹೊರತು ಯಾವ ಜಗತ್ತೂ ಇಲ್ಲ ಎಂದು ನಿಶ್ಚಯವುಳ್ಳವನು ವಿದೇಹಮುಕ್ತನು. ॥೨೪॥

ಇದೆಲ್ಲವೂ ಚೈತನ್ಯವಸ್ತುವು, ನಾನೂ ಚೈತನ್ಯವಸ್ತುವೇ ಎಂದು ನಿಶ್ಚಯವಿಲ್ಲದವನು ವಿದೇಹಮುಕ್ತನು, ಅಂದರೆ ಇಂತಹ ವಿದೇಹಮುಕ್ತನು ಬ್ರಹ್ಮನೇ ಆದುದರಿಂದ ವಸ್ತುತಃ ಈ ನಿಶ್ಚಯವು ಅವನಲ್ಲಿರುವುದಿಲ್ಲ. ॥೨೫॥

ಚೈತನ್ಯಸ್ವರೂಪನು ಮಾತ್ರನಾಗಿ ಆತ್ಮನಲ್ಲಿಯೇ ವಿಹರಿಸುವವನಾಗಿ ಸುಖಸ್ವರೂಪನಾಗಿ ಯಾವನಿರುವನೋ ಅವನೇ ವಿದೇಹಮುಕ್ತನು. ॥೨೬॥

ಖಂಡವಿಲ್ಲದ ಪರಿಪೂರ್ಣರೂಪನಾಗಿ ಅಣುವಿಗಿಂತ ಸೂಕ್ಷ್ಮ (ಇಂದ್ರಿಯಾಗೋಚರ) ನಾಗಿ ನಾಲ್ಕನೆಯವನು ಎಂಬ ಭೇದವು ಇಲ್ಲದವನಾಗಿ ಆತ್ಮಾನಂದವನ್ನನುಭವಿಸುವವನು ವಿದೇಹಮುಕ್ತನು. ॥೨೭॥

ನಾಮಾಪಿ ನಾಸ್ತಿ ಸರ್ವಾತ್ಮಾ ನರೂಪೋ ನ ಚ ನಾಸ್ತ್ಯಕಃ ।
ಪರಬ್ರಹ್ಮಸ್ವರೂಪಾತ್ಮಾ ವಿದೇಹೋ ಮುಕ್ತ ಏವ ಸಃ ॥೨೮॥

ತುರ್ಯಾತೀತಸ್ತತೋಽತೀತಃ ಅತೋಽತೀತಸ್ಸ ಸನ್ಮಯಃ ।
ಅಶುಭಾಶುಭಶಾಂತಾತ್ಮಾ ವಿದೇಹೋ ಮುಕ್ತ ಏವ ಸಃ ॥೨೯॥

ಬಂಧಮುಕ್ತಿಪ್ರಶಾಂತಾತ್ಮಾ ಸರ್ವಾತ್ಮಾ ಚಾಂತರಾತ್ಮಕಃ ।
ಪ್ರಪಂಚಾತ್ಮಾ ಪರೋಽಹ್ಯಾತ್ಮಾ ವಿದೇಹೋ ಮುಕ್ತ ಏವ ಸಃ ॥೩೦॥

ಸರ್ವತ್ರ ಪರಿಪೂರ್ಣಾತ್ಮಾ ಸರ್ವದಾ ಚ ಪರಾತ್ಪರಃ ।
ಅಂತರಾತ್ಮಾ ಹ್ಯನಂತಾತ್ಮಾ ವಿದೇಹೋ ಮುಕ್ತ ಏವ ಸಃ ॥೩೧॥

ಅಬೋಧಬೋಧಹೀನಾತ್ಮಾ ಅಜಡಾ ಜಡವರ್ಜಿತಃ ।
ಅತತ್ವತತ್ವಸರ್ವಾತ್ಮಾ ವಿದೇಹೋ ಮುಕ್ತ ಏವ ಸಃ ॥೩೨॥

---

ಎಲ್ಲರ ಆತ್ಮನಾದರೂ ನನಗೆ ಯಾವ ಹೆಸರುಗಳೂ ಇಲ್ಲ, ರೂಪವೂ ಇಲ್ಲ, ಇಲ್ಲದವನು ನಾನಲ್ಲ. ಪರಬ್ರಹ್ಮನು ನಾನು ಎಂದು ತಿಳಿಯುವವನು ವಿದೇಹ ಮುಕ್ತನು. ॥೨೮॥

ನಾಲ್ಕನೆಯವ (ಪರಮೇಶ್ವರ) ನೆಂಬುದನ್ನೂ ಮೀರಿದವನು ನಾನು. ಅದರಿಂದಲೂ ಇದರಿಂದಲೂ ಮೀರಿದವನು ನಾನು. ಸತ್ಯನಾದ ನನಗೆ ಶುಭಾಶುಭಗಳೆಂಬ ಭೇದವು ಇಲ್ಲ ಎಂದು ತಿಳಿಯುವವನೇ ಜೀವನ್ಮುಕ್ತನು. ॥೨೯॥

ಬಂಧಮೋಕ್ಷಗಳಿಲ್ಲದ ಶಾಂತನು ನಾನು. ಎಲರ ಹೃದಯದಲ್ಲಿ ನೆಲಸಿರುವ ಅಂತರಾತ್ಮನು ನಾನು. ಜಗನ್ಮಯನಾದ ಪರಮಾತ್ಮನು ನಾನು. ॥೩೦॥

ಎಲ್ಲೆಲ್ಲಿಯೂ ತುಂಬಿರುವವನು ನಾನು, ಯಾವಾಗಲೂ ನಾನು ಪರಮಾತ್ಮನು. ಅಂತರ್ಯಾಮಿಯು ನಾನು, ನಾಶವಿಲ್ಲದವನು ನಾನು ಎಂದು ತಿಳಿವವನು ಜೀವನ್ಮುಕ್ತನು. ॥೩೧॥

ಜ್ಞಾನ-ಅಜ್ಞಾನಗಳು ನನಗಿಲ್ಲ. ಜಡತೆ-ಅಜಡತೆಗಳೂ ನನಗಿಲ್ಲವು. ತತ್ವ-ಅತತ್ವಗಳೂ ನನಗಿಲ್ಲವು ಎಂದು ತಿಳಿಯುವವನೇ ವಿದೇಹಮುಕ್ತನು. ॥೩೨॥

ಅಸಮಾಧಿಸಮಾಧ್ಯಂತರ್ಲಕ್ಷ್ಯಾ ಲಕ್ಷ್ಯವಿವರ್ಜಿತಃ ।
ಅಭೂತೋ ಭೂತಏವಾತ್ಮಾ ವಿದೇಹೋ ಮುಕ್ತ ಏವ ಸಃ ॥೩೩॥

ಚಿನ್ಮಯಾತ್ಮಾ ಚಿದಾಕಾಶಃ ಚಿದಾನಂದಶ್ಚಿದಂಬರಃ ।
ಚಿನ್ಮಾತ್ರರೂಪ ಏವಾತ್ಮಾ ವಿದೇಹೋ ಮುಕ್ತ ಏವ ಸಃ ॥೩೪॥

ಸಚ್ಚಿದಾನಂದರೂಪಾತ್ಮಾ ಸಚ್ಚಿದಾನಂದವಿಗ್ರಹಃ ।
ಸಚ್ಚಿದಾನಂದಪೂರ್ಣಾತ್ಮಾ ವಿದೇಹೋ ಮುಕ್ತ ಏವ ಸಃ ॥೩೫॥

ಸದಾ ಬ್ರಹ್ಮಮಯೋ ನಿತ್ಯಂ ಸದಾ ಸ್ವಾತ್ಮನಿ ನಿಷ್ಠಿತಃ ।
ಸದಾಽಖಂಡೈಕರೂಪಾತ್ಮಾ ವಿದೇಹೋ ಮುಕ್ತ ಏವ ಸಃ ॥೩೬॥

ಪ್ರಜ್ಞಾನಘನ ಏವಾತ್ಮಾ ಪ್ರಜ್ಞಾನಘನವಿಗ್ರಹಃ ।
ನಿತ್ಯಜ್ಞಾನಪರಾನಂದೋ ವಿದೇಹೋ ಮುಕ್ತ ಏವ ಸಃ ॥೩೭॥

---

ಸಮಾಧಿಯಲ್ಲಿ ಪ್ರತ್ಯಕ್ಷನಾಗುವೆನು. ಅಸಮಾಧಿಯಲ್ಲಿ ಪ್ರತ್ಯಕ್ಷನಾಗುವುದಿಲ್ಲ ಎಂಬುದು ನನಗಿಲ್ಲ. ಕಳೆದುದು-ಕಳೆಯದುದು ಎಂಬುದು ನನಗಿಲ್ಲ. ॥೩೩॥

ಜ್ಞಾನಮಯನು ನಾನು, ವ್ಯಾಪಕನು ನಾನು, ಜ್ಞಾನಾನಂದನು ನಾನು, ಜ್ಞಾನವೇ ನನ್ನ ಸ್ವರೂಪವು ಎಂದು ತಿಳಿಯುವವನು ವಿದೇಹಮುಕ್ತನು. ॥೩೪॥

ಸತ್ಯ, ಜ್ಞಾನ ಆನಂದಗಳೇ ನನ್ನ ಸ್ವರೂಪವು. ಅವುಗಳೇ ನನ್ನ ಶರೀರವು. ಅವೇ ನನ್ನಲ್ಲಿ ತುಂಬಿಕೊಂಡಿವೆ. ಆದರೆ ನನ್ನ ಹೊರತಾಗಿಲ್ಲ ಎಂದು ತಿಳಿಯುವವನು ಮುಕ್ತನು. ॥೩೫॥

ಸದಾ ನಾನು ಬ್ರಹ್ಮನು, ಯಾವಾಗಲೂ ನನ್ನಲ್ಲಿಯೇ ಇರುವೆನು, ಯಾವಾಗಲೂ ಪರಿಪೂರ್ಣವಾದ ಸ್ವರೂಪನು ನಾನು ಎಂದು ತಿಳಿಯುವವನು ವಿದೇಹಮುಕ್ತನು. ॥೩೬॥

ಜ್ಞಾನಪೂರ್ಣನು ನಾನು. ಪೂರ್ಣಜ್ಞಾನವೇ ನನ್ನ ಶರೀರವು. ನಿತ್ಯವಾದ ಜ್ಞಾನ ಆನಂದಸ್ವರೂಪನು ನಾನು ಎಂದು ತಿಳಿಯುವವನು ವಿದೇಹಮುಕ್ತನು. ॥೩೭॥

ಯಸ್ಯ ದೇಹಃ ಕ್ವಚಿನ್ನಾಸ್ತಿ ಯಸ್ಯ ಕಿಂಚಿತ್ ಸ್ಮೃತಿರ್ವಜಃ ।
ಸದಾತ್ಮಾ ಹ್ಯಾತ್ಮನಿ ಸ್ವಸ್ಥೋ ವಿದೇಹೋ ಮುಕ್ತ ಏವ ಸಃ ॥೩೮॥

ಯಸ್ಯ ನಿರ್ವಾಸನಂ ಚಿತ್ತಂ ಯೋ ವಾ ಬ್ರಹ್ಮಾತ್ಮನಾ ಸ್ಥಿತಃ ।
ಯೋಗಾತ್ಮಾ ಯೋಗಯುಕ್ತಾತ್ಮಾ ವಿದೇಹೋ ಮುಕ್ತ ಏವ ಸಃ ॥೩೯॥

ಚೈತನ್ಯಮಾತ್ರ ಏವೇತಿ ತ್ಯಕ್ತಸರ್ವಮತಿರ್ನ ಹಿ ।
ಗುಣಾಗುಣವಿಕಾರಾಂತೋ ವಿದೇಹೋ ಮುಕ್ತ ಏವ ಸಃ ॥೪೦॥

ಕಾಲದೇಶಾದಿ ನಾಸ್ತ್ಯಂತೋ ನ ಗ್ರಾಹ್ಯಾ ನ ಸ್ಮೃತಿಃ ಪರಃ ।
ನಿಶ್ಚಯಂ ಚ ಪರಂ ತ್ಯಕ್ತ್ವೋ ವಿದೇಹೋ ಮುಕ್ತ ಏವ ಸಃ ॥೪೧॥

ಭೂಮಾನಂದಃ ಪರಾನಂದೋ ಭೋಗಾನಂದವಿವರ್ಜಿತಃ ।
ಸಾಕ್ಷೀ ಚ ಸಾಕ್ಷಿಹೀನಶ್ಚ ವಿದೇಹೋ ಮುಕ್ತ ಏವ ಸಃ ॥೪೨॥

---

ಯಾವನಿಗೆ ಎಲ್ಲಿಯೂ ದೇಹವಿಲ್ಲವೋ, ಯಾವನಿಗೆ ಮಾತಾಗಲೀ ಸ್ಮರಣವಾಗಲಿ ಇಲ್ಲವೋ, ಯಾವನು ಯಾವಾಗಲೂ ತನ್ನಲ್ಲಿ ಸುಖವಾಗಿರುವನೋ ಅಂತಹವನೇ ದೇಹಾಭಿಮಾನವಿಲ್ಲದ ನಿಜವಾದ ವಿದೇಹಮುಕ್ತನು. ॥೩೮॥

ಯಾವನ ಮನಸ್ಸಿನಲ್ಲಿ ಯಾವ ಸಂಸ್ಕಾರಗಳೂ ಇಲ್ಲವೋ, ಯಾವನು ಬ್ರಹ್ಮನಾಗಿರುವನೋ, ಯೋಗಸ್ವರೂಪನಾಗಿಯೂ, ಯೋಗಿಸ್ವರೂಪನಾಗಿಯೂ ಯಾವನಿರುವನೋ ಅವನೇ ವಿದೇಹಮುಕ್ತನು. ॥೩೯॥

ಚೈತನ್ಯವೊಂದೇ ಇರುವುದೆಂದು ತಿಳಿದು ಮಿಕ್ಕ ಯಾವುದರಲ್ಲಿಯೂ ಅಭಿಮಾನವಿಲ್ಲದವನೂ, ಸುಗುಣದುರ್ಗುಣವಿಕಾರಗಳಿಲ್ಲದವನೂ ವಿದೇಹಮುಕ್ತನು. ॥೪೦॥

ಕಾಲದೇಶಾದಿಗಳಿಲ್ಲದವನೂ, ಸ್ಮರಣಾದಿಗಳಿಲ್ಲದವನೂ, ನಿಶ್ಚಯವಿಲ್ಲದವನೂ ಆಗಿ ಪರಮಾತ್ಮನ ಸ್ವರೂಪನಾಗಿರುವವನು ವಿದೇಹಮುಕ್ತನು. ॥೪೧॥

ಸರ್ವೋತ್ತಮವಾದ ಬ್ರಹ್ಮಾನಂದಸ್ವರೂಪನೂ, ವಿಷಯಭೋಗದ ಆನಂದಗಳಿಲ್ಲದವನೂ, ಸಾಕ್ಷಿಯೂ ವಸ್ತುತಃ ಸಾಕ್ಷಿಯಲ್ಲದವನೂ ಆಗಿರುವವನು ಮುಕ್ತನು. ॥೪೨॥

ಸೋಪಿ ಕೋಪಿ ನ ಸೋಕೋಪಿ ಕಿಂಚಿತ್ಕಿಂಚನ ಕಿಂಚನ ।
ಆತ್ಮಾನಾತ್ಮಚಿದಾತ್ಮಾ ಚ ಚಿದಚಿದಹಮೇವ ಚ ॥೪೩॥

ಯಸ್ಯ ಪ್ರಪಂಚಭಾನಾತ್ಮಾ ಬ್ರಹ್ಮಾಕಾರಮಪೀಹ ನ ।
ಸ್ವಸ್ವರೂಪಃ ಸ್ವಯಂ ಜ್ಯೋತಿರ್ವಿದೇಹೋ ಮುಕ್ತ ಏವ ಸಃ ॥೪೪॥

ವಾಚಾಮಗೋಚರಾನಂದಃ ಸರ್ವೇಂದ್ರಿಯವಿವರ್ಜಿತಃ ।
ಅತೀತಾತೀತ ಭಾನೋ ಯೋ ವಿದೇಹೋ ಮುಕ್ತ ಏವ ಸಃ ॥೪೫॥

ಚಿತ್ತವೃತ್ತೇರತೀತೋ ಯೋ ಚಿತ್ತವೃತ್ತ್ಯವಭಾಸಕಃ ।
ಸರ್ವವೃತ್ತಿವಿಹೀನೋ ಯೋ ವಿದೇಹೋ ಮುಕ್ತ ಏವ ಸಃ ॥೪೬॥

ಕಸ್ಮಿನ್ ಕಾಲೇ ವಿದೇಹೋ ಯೋ ದೇಹಸ್ಮರಣವರ್ಜಿತಃ ।
ನ ಸ್ಥೂಲೋ ನ ಕೃಶೋ ವಾಪಿ ವಿದೇಹೋ ಮುಕ್ತ ಏವ ಸಃ ॥೪೭॥

---

ಅವನೋ, ಯಾವನೋ ಎಂಬ ಭಾವನೆಗಳ ವಿಷಯನೂ, ಅವನು ಯಾವನು ಎಂಬ ಭಾವನಾಭೇದಗಳಿಲ್ಲದ ಆತ್ಮನೂ, ಅನಾತ್ಮವಲ್ಲದ ಜ್ಞಾನಾತ್ಮನೂ, ಜ್ಞಾನಾಜ್ಞಾನಸ್ವರೂಪನೂ ಆಗಿರುವವನು ವಿದೇಹಮುಕ್ತನು. ॥೪೩॥

ಪ್ರಪಂಚಪ್ರಕಾಶವು ಯಾವನಲ್ಲಿ ಮಿಥ್ಯೆಯಾಗಿ ತೋರುವುದೋ "ಬ್ರಹ್ಮ" ವಿಷಯಕವಾಗಿಯೂ ಯಾವನ ಜ್ಞಾನವು ಇಲ್ಲವೋ, ಕೇವಲ ಜ್ಞಾನಸ್ವರೂಪನೋ ಸ್ವಯಂಪ್ರಕಾಶನೋ ಅಂತಹವನು ಜೀವನ್ಮುಕ್ತನು. ॥೪೪॥

ಮಾತುಗಳಿಗೆ ವಿಷಯವಲ್ಲದ ಆನಂದವುಳ್ಳವನೂ, ಯಾವ ಇಂದ್ರಿಯಗಳೂ ಇಲ್ಲದವನೂ, ಕಳೆದ ಕಳೆಯದಿರುವ ಜ್ಞಾನ ಪ್ರಕಾಶಸ್ವರೂಪನೂ ಆದವನು ವಿದೇಹ ಮುಕ್ತನು. ॥೪೫॥

ಮನಸ್ಸಿನ ವೃತ್ತಿಗೆ ವಿಷಯನಲ್ಲದವನೂ, ಮನೋವೃತ್ತಿಗಳನ್ನು ಪ್ರಕಾಶ ಪಡಿಸುವವನೂ, ಯಾವ ವೃತ್ತಿಗಳೂ ಇಲ್ಲದವನೂ ಆದವನು ವಿದೇಹಮುಕ್ತನು. ॥೪೬॥

ಯಾವಾಗ ಮಾನವನು "ತಾನು ಕೃಶ" "ತಾನು ಸ್ಥೂಲ" ಎಂಬ ಭಾವನೆ ಯಿಲ್ಲದವನಾಗಿ ದೇಹಾಭಿಮಾನವನ್ನು ತೊರೆಯುವನೋ, ಆಗಲೇ ಅವನು ವಿದೇಹ ಮುಕ್ತನಾಗುವನು. ॥೪೭॥

ಈಷನ್ಮಾತ್ರಸ್ಥಿತೋ ಯೋ ನೈ ಸದಾ ಸರ್ವವಿವರ್ಜಿತಃ ।
ಬ್ರಹ್ಮಮಾತ್ರೇಣ ಯಸ್ತಿಷ್ಠೇದ್ವಿದೇಹೋ ಮುಕ್ತ ಏವ ಸಃ ॥೪೮॥

ಪರಂ ಬ್ರಹ್ಮ ಪರಾನಂದೋ ಪರಮಾತ್ಮಾ ಪರಾತ್ಪರಃ ।
ಪರೈರದೃಷ್ಟೋ ಬಾಹ್ಯಾಂತರೋ ವಿದೇಹೋ ಮುಕ್ತ ಏವ ಸಃ ॥೪೯॥

ಶುದ್ಧವೇದಾಂತಸಾರೋ ಯೋ ಶುದ್ಧಸತ್ವಾತ್ಮನಿ ಸ್ಥಿತಃ ।
ತದ್ಭೇದಮಪಿ ಯಸ್ತ್ಯಕ್ತೋ ವಿದೇಹೋ ಮುಕ್ತ ಏವ ಸಃ ॥೫೦॥

ಬ್ರಹ್ಮಾಮೃತರಸಾಸ್ವಾದೋ ಬ್ರಹ್ಮಾಮೃತರಸಾಯನಂ ।
ಬ್ರಹ್ಮಾಮೃತರಸೇ ಮಗ್ನೋ ವಿದೇಹೋ ಮುಕ್ತ ಏವ ಸಃ ॥೫೧॥

ಬ್ರಹ್ಮಾಮೃತರಸಾಧಾರೋ ಬ್ರಹ್ಮಾಮೃತರಸಃ ಸ್ವಯಂ ।
ಬ್ರಹ್ಮಾಮೃತರಸೇ ತೃಪ್ತೋ ವಿದೇಹೋ ಮುಕ್ತ ಏವ ಸಃ ॥೫೨॥

ಬ್ರಹ್ಮಾನಂದಪರಾನಂದೋ ಬ್ರಹ್ಮಾಮೃತರಸಪ್ರಭಃ ।
ಬ್ರಹ್ಮಾನಂದಪರಂಜ್ಯೋತಿರ್ವಿದೇಹೋ ಮುಕ್ತ ಏವ ಸಃ ॥೫೩॥

---

ಎಲ್ಲವನ್ನೂ ತೊರೆದು ದೇಹಮಾತ್ರವುಳ್ಳವನಾಗಿ ಸದಾ ತಾನು ಬ್ರಹ್ಮನೆಂದು ಯಾವನು ಚಿಂತಿಸುವನೋ ಅವನೇ ವಿದೇಹಮುಕ್ತನು. ॥೪೮॥

ಪರರ ಕಣ್ಣಿಗೆ ಕಾಣಿಸದ, ಸರ್ವೋತ್ತಮವಾದ, ಆನಂದಮಯವಾದ, ಪರಮಾತ್ಮನು ತಾನೆಂದು ಯಾವನು ತಿಳಿಯುವನೋ ಅವನು ವಿದೇಹಮುಕ್ತನು. ॥೪೯॥

ವೇದಾಂತದ ಪರಮತಾತ್ಪರ್ಯವಾದ ಅದ್ವಿತೀಯಬ್ರಹ್ಮನಾಗಿ ಶುದ್ಧವಾದ ತನ್ನ ಆತ್ಮನಲ್ಲಿ ವಿಹರಿಸುತ್ತಾ ತನಗೂ ಬ್ರಹ್ಮನಿಗೂ ಭೇಧವಿಲ್ಲವೆಂದು ಯಾವನು ಅನುಭವದಿಂದ ಭಾವಿಸುವನೋ ಅವನು ವಿದೇಹಮುಕ್ತನು. ॥೫೦॥

ಬ್ರಹ್ಮನೆಂಬ ಅಮೃತರಸವವನ್ನನುಭವಿಸುತ್ತಾ ಅದರಲ್ಲೇ ಮುಳುಗಿ, ಆ ಬಹ್ಮಾಮೃತರಸವೇ ಆದವನು ವಿದೇಹಮುಕ್ತನು. ॥೫೧॥

ಬ್ರಹ್ಮನೆಂಬ ಅಮೃತರಸವೇ ಆಧಾರವುಳ್ಳವನಾಗಿ ಆ ರಸದಿಂದಲೇ ತೃಪ್ತನಾಗಿ ಆ ಬ್ರಹ್ಮಾಮೃತರಸವೇ ಆದವನು ವಿದೇಹಮುಕ್ತನು. ॥೫೨॥

ಬ್ರಹ್ಮಾನಂದವೆಂಬ ಉತ್ತಮವಾದ ಆನಂದವುಳ್ಳವನಾಗಿ, ಬ್ರಹ್ಮಾನಂದವೆಂಬ

ಬ್ರಹ್ಮಾಮೃತರಸಾನಂದೋ ಬ್ರಹ್ಮಾಮೃತನಿರಂತರಂ ।
ಪ್ರಿಯಾನಂದಸ್ಸದಾನಂದೋ ವಿದೇಹೋ ಮುಕ್ತ ಏವ ಸಃ ॥೫೪॥

ಬ್ರಹ್ಮಾನಂದಾನುಭಾವೋ ಯೋ ಬ್ರಹ್ಮಾಮೃತಶಿವಾರ್ಚನಂ ।
ಬ್ರಹ್ಮಾನಂದರಸಪ್ರೀತೋ ವಿದೇಹೋ ಮುಕ್ತ ಏವ ಸಃ ॥೫೫॥

ಬ್ರಹ್ಮಾನಂದರಸೋದ್ವಾಹೋ ಬ್ರಹ್ಮಾಮೃತಕುಟುಂಬಕಃ ।
ಬ್ರಹ್ಮಾನಂದಜನೈರ್ಯುಕ್ತೋ ವಿದೇಹೋ ಮುಕ್ತ ಏವ ಸಃ ॥೫೬॥

ಬ್ರಹ್ಮಾಮೃತವರೇ ವಾಸೋ ಬ್ರಹ್ಮಾನಂದಾಲಯೇ ಸ್ಥಿತಃ ।
ಬ್ರಹ್ಮಾಮೃತಜಪೋ ಯಸ್ಯ ವಿದೇಹೋ ಮುಕ್ತ ಏವ ಸಃ ॥೫೭॥

ಬ್ರಹ್ಮಾನಂದಶರೀರಾಂತೋ ಬ್ರಹ್ಮಾನಂದೇಂದ್ರಿಯಃ ಕ್ವಚಿತ್ ।
ಬ್ರಹ್ಮಾಮೃತಮಯಾ ವಿದ್ಯಾ ವಿದೇಹೋ ಮುಕ್ತ ಏವ ಸಃ ॥೫೮॥

---

ಜ್ಯೋತಿಯಿಂದ ಬೆಳಗುತ್ತಾ ಆ ಬ್ರಹ್ಮಾನಂದರಸವನ್ನನುಭವಿಸುವನು ಮುಕ್ತನು. ॥೫೩॥

ಬ್ರಹ್ಮವೆಂಬ ಅಮೃತರಸದ ಆನಂದವನ್ನನುಭವಿಸುತ್ತಾ ಆ ಅಮೃತರಸಮಯನೇ ಆಗಿ ಸದಾ ಆನಂದಮಯನಾಗಿರುವವನು ವಿದೇಹಮುಕ್ತನು. ॥೫೪॥

ಬ್ರಹ್ಮಾನಂದವೆಂಬ ಶಿವಾರ್ಚನೆಯನ್ನು ಮಾಡುತ್ತಾ ಬ್ರಹ್ಮಾನಂದವನ್ನನುಭವಿಸುತ್ತಾ ಬ್ರಹ್ಮಾನಂದವೇ ಆಗಿರುವವನು ವಿದೇಹಮುಕ್ತನು. ॥೫೫॥

ಬ್ರಹ್ಮಾನಂದರಸವನ್ನೇ ಮದುವೆಯಾಗಿ, ಬ್ರಹ್ಮಾನಂದರಸವೆಂಬ ಕುಟುಂಬವುಳ್ಳವನಾಗಿ ಬ್ರಹ್ಮಾನಂದವೆಂಬ ಜನಗಳಿಂದ ಕೂಡಿ ಯಾವನು ವಿಹರಿಸುವನೋ ಅವನೇ ವಿದೇಹಮುಕ್ತನು. ॥೫೬॥

ಬ್ರಹ್ಮಾನಂದವೆಂಬ ಮನೆಯಲ್ಲಿ ಇರುತ್ತಾ, ಬ್ರಹ್ಮಾನಂದವೆಂಬ ದೇವರೆದುರಿನಲ್ಲಿ ಬ್ರಹ್ಮಾನಂದಜಪವನ್ನು ಮಾಡುವವನು ವಿದೇಹಮುಕ್ತನು. ॥೫೭॥

ಬ್ರಹ್ಮಾನಂದವೆಂಬ ಇಂದ್ರಿಯಗಳುಳ್ಳವನೂ, ಬ್ರಹ್ಮಾನಂದವೆಂಬ ಶರೀರವುಳ್ಳವನೂ, ಬ್ರಹ್ಮಾನಂದವೆಂಬ ವಿದ್ಯೆಯುಳ್ಳವನೂ ಆದವನು ವಿದೇಹಮುಕ್ತನು. ॥೫೮॥

ಬ್ರಹ್ಮಾನಂದಮದೋನ್ಮತ್ತೋ ಬ್ರಹ್ಮಾಮೃತರಸಂಭರಃ ।
ಬ್ರಹ್ಮಾತ್ಮನಿ ಸದಾ ಸ್ವಸ್ಥೋ ವಿದೇಹೋ ಮುಕ್ತ ಏವ ಸಃ ॥೪೯॥

ದೇಹಮುಕ್ತಿಪ್ರಕರಣಂ ಸರ್ವವೇದೇಷು ದುರ್ಲಭಂ ।
ಮಯೋಕ್ತಂ ತೇ ಮಹಾಯೋಗಿನ್ ವಿದೇಹಃ ಶ್ರವಣಾದ್ಭವೇತ್॥೬೦

ಅನಾಥನಾಥ ತೇ ಪದಂ ಭಜಾಮ್ಯುಮಾಸನಾಥಸ-
ನ್ನಿಶೀಥನಾಥಮೌಳಿಸುಸ್ಫುಟಲ್ಲಲಾಟಸಂಗಜ ।
ಸ್ಫುಲಿಂಗದಗ್ಧಮನ್ಮಥ ಪ್ರಮಥನಾಥ ಪಾಹಿ ಮಾಂ ॥೬೧॥

ವಿಭೂತಿಭೂಷಗಾತ್ರ ತೇ ತ್ರಿನೇತ್ರಮಿತ್ರತಾಮಿಯಾತ್
ಮನಸ್ಸರೋರುಹಂ ಕ್ಷಣಂ ತವೇಕ್ಷಣೇನ ಮೇ ಸದಾ ।
ಪ್ರಬುದ್ಧಸಂಸೃತಿಭ್ರಮಭ್ರಮಜ್ಜನೌಘಸಂತತೌ
ನ ವೇದ ವೇದಮೌಳಿರಪ್ಯಪಾಸ್ತದುಃಖಸಂತತಿಂ ॥೬೨॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ದ್ವಾದಶೋಽಧ್ಯಾಯಃ

---

ಬ್ರಹ್ಮಾಮೃತರಸವನ್ನು ಕುಡಿದು ಬ್ರಹ್ಮಾನಂದವೆಂಬ ಮದದಿಂದ ಉನ್ಮತ್ತನಾಗಿ, ಬ್ರಹ್ಮನಾದ ತನ್ನಲ್ಲಿ ಸ್ವಸ್ಥವಾಗಿರುವವನು ವಿದೇಹಮುಕ್ತನು. ॥೪೯॥

ಮಹಾಯೋಗಿಯಾದ ಎಲೈ ನಿದಾಘಮುನಿ! ವೇದಗಳಲ್ಲೂ ದುರ್ಲಭವಾದ ದೇಹಮುಕ್ತಿಪ್ರಕರಣವನ್ನು ಹೀಗೆ ನಿನಗೆ ಹೇಳಿರುವೆನು. ಇದನ್ನು ಕೇಳಿದರೆ ವಿದೇಹಮುಕ್ತಿಯು ಲಭಿಸುವುದು. ॥೬೦॥

ಸ್ಕಂದನು ಹೇಳಿದನು— ದೀನರನ್ನು ರಕ್ಷಿಸುವ ಓ ಪಾರ್ವತೀಕಾಂತ, ಶೀತ ಕಿರಣನನ್ನು ಜಡೆಯಲ್ಲಿ ಧರಿಸಿರುವ ಓ ಗಂಗಾಧರ, ಮನ್ಮಥನನ್ನು ದಹಿಸಿದ ಉರಿ ಗಣ್ಣುಳ್ಳ ಓ ತ್ರಿಲೋಚನ, ಓ ಪರಮೇಶ್ವರ ಭೂತಪತಿಯಾದ ನಿನ್ನನ್ನು ಭಕ್ತಿ ಯಿಂದ ಭಜಿಸುವೆನು, ನನ್ನನ್ನು ಕರುಣೆಯಿಂದ ರಕ್ಷಿಸು. ॥೬೧॥

ಭಸ್ಮಧಾರಿಯಾದ ಓ ಪರಶಿವ, ನನ್ನ ಮನಸ್ಸೆಂಬ ಕಮಲವು ನೀನೆಂಬ ಸೂರ್ಯನ ಉದಯದಿಂದ ಅರಳಲಿ, ಸಂಸಾರಚಕ್ರದಲ್ಲಿ ಸಿಲುಕಿ ಭ್ರಾಂತಿಯಿಂದ

ಭ್ರಮಿಸುತ್ತಲಿರುವವರ ದುಃಖವನ್ನು ನೀನು ಹೊರತು ಇನ್ನಾರೂ ಪರಿಹರಿಸಲಾರರು, ಇಂತಹ ನಿನ್ನ ಅಪಾರಮಹಿಮೆಯನ್ನು ವೇದವೂ ಬಣ್ಣಿಸಲಾರದು. ॥೬೨॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತ್ರಯೋದಶೋಽಧ್ಯಾಯಃ

॥ ಋಭುರುವಾಚ ॥

ಶೃಣುಷ್ವ ದುರ್ಲಭಂ ಲೋಕೇ ಸಾರಾತ್ಸಾರತರಂ ಪರಂ ।
ಆತ್ಮರೂಪಮಿದಂ ಸರ್ವಮಾತ್ಮನೋಽನ್ಯಂ ನ ಕಿಂಚನ ॥೧॥

ಸರ್ವಮಾತ್ಮಾಹಂ ಬ್ರಹ್ಮಾಸ್ಮಿ ಪರಮಾತ್ಮಾ ಪರಾತ್ಮಕಃ ।
ನಿತ್ಯಾನಂದಸ್ವರೂಪಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨॥

ಪೂರ್ಣರೂಪೋ ಮಹಾನಾತ್ಮಾ ಪೂತಾತ್ಮಾ ಶಾಶ್ವತಾತ್ಮಕಃ ।
ನಿರ್ವಿಕಾರಸ್ವರೂಪಾತ್ಮಾ ನಿರ್ಮಲಾತ್ಮಾ ನಿರಾತ್ಮಕಃ ॥೩॥

---

## ಹದಿಮೂರನೆಯ ಅಧ್ಯಾಯ

ಎಲೈ ನಿದಾಘಮುನಿ, ಅತಿ ದುರ್ಲಭವಾದ ಆತಿ ಮಹತ್ವವುಳ್ಳ ವಿಷಯ ವನ್ನು ಹೇಳುವೆನು ಕೇಳು, ಈ ಜಗತ್ತೆಲ್ಲವೂ ಆತ್ಮಸ್ವರೂಪವಾದುದು, ಆತ್ಮನ ಹೊರತಾಗಿ ಯಾವುದೂ ಇಲ್ಲವು. ॥೧॥

ಎಲ್ಲವೂ ಆತ್ಮನೇ, ನಾನೂ ಆತ್ಮನಾದ ಬ್ರಹ್ಮನು, ಪರಮಾತ್ಮನು ನಾನು, ಎಲ್ಲ ಪ್ರಾಣಿಗಳ ಆತ್ಮನೂ ನಾನೇ, ನಿತ್ಯಾನಂದಸ್ವರೂಪನು ನಾನು, ಆತ್ಮನ ಹೊರತಾಗಿ ಏನೂ ಇಲ್ಲವು. ॥೨॥

ನಾನು ಪೂರ್ಣನು, ಮಹಾತ್ಮನು, ಪವಿತ್ರನು, ಸ್ಥಿರನು, ಜನನನಮರಣಾದಿ ವಿಕಾರಗಳಿಲ್ಲದವನು, ನಿರ್ಮಲನು, ನನ್ನ ಹೊರತು ಬೇರೆಯಾಗಿ ಆತ್ಮನಿಲ್ಲದ ಅದ್ವಿತೀಯಾತ್ಮನು ನಾನು. ॥೩॥

ಶಾಂತಾಶಾಂತಸ್ವರೂಪಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ।
ಜೀವಾತ್ಮಾ ಪರಮಾತ್ಮಾ ಹಿ ಚಿದಚಿದಾತ್ಮಚಿನ್ಮಯಃ ॥೪॥

ಏಕಾತ್ಮಾ ಏಕರೂಪಾತ್ಮಾ ನೈಕಾತ್ಮಾ ನಾತ್ಮವರ್ಜಿತಃ ।
ಮುಕ್ತಾಮುಕ್ತಸ್ವರೂಪಾತ್ಮಾ ಮುಕ್ತಾಮುಕ್ತವಿವರ್ಜಿತಃ ॥೫॥

ಮೋಕ್ಷರೂಪಸ್ವರೂಪಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ
ದ್ವೈತಾದ್ವೈತಸ್ವರೂಪಾತ್ಮಾ ದ್ವೈತಾದ್ವೈತವಿವರ್ಜಿತಃ ।
ಸರ್ವವರ್ಜಿತಸರ್ವಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೬॥

ಮುದಾಮುದಸ್ವರೂಪಾತ್ಮಾ ಮೋಕ್ಷಾತ್ಮಾ ದೇವತಾತ್ಮಕಃ ।
ಸಂಕಲ್ಪಹೀನಸಾರಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೭॥

ಸಂತ್ಯಕ್ತಸರ್ವಜೀವಾತ್ಮಾ ಸಂತ್ಯಕ್ತಪರಮಾತ್ಮಕಃ ।
ಆನಂದಾತ್ಮಾ ಹ್ಯಜಾತ್ಮಾ ಚ ಹ್ಯಾತ್ಮನೋಽನ್ಯನ್ನ ಕಿಂಚನ ॥೮॥

---

ಶಾಂತನು ನಾನು, ಅಶಾಂತಜಗತ್ತು ನಾನು, ಜಡ ಚೇತನವಸ್ತುಗಳು ನಾನು, ಜ್ಞಾನಮೂರ್ತಿಯು ನಾನು, ಜೀವಾತ್ಮನೂ ಪರಮಾತ್ಮನೂ ನಾನು, ನನಗಿಂತ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೪॥

ಅದ್ವಿತೀಯಾತ್ಮನು ನಾನು, ಒಂದೇ ರೂಪವುಳ್ಳವನು ನಾನು, ಅನೇಕ ಆತ್ಮ ಅನಾತ್ಮಗಳಿಲ್ಲದವನು ನಾನು, ಮುಕ್ತಾತ್ಮನೂ, ಮುಕ್ತನಲ್ಲದ ಜೀವಾತ್ಮನೂ ನಾನು, ಮುಕ್ತಿಬಂಧನಗಳು ವಸ್ತುತಃ ನನಗಿಲ್ಲ. ಮುಕ್ತಿಯೆಂದರೆ ಬೇರೆಯಲ್ಲ, ನನ್ನ ಸ್ವರೂಪವೇ ಆದುದರಿಂದ ನನ್ನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೫॥

ನನ್ನ ಸ್ವರೂಪವು ಮಾಯೆಯಿಂದ ಬೇರೆಬೇರೆಯಾಗಿ ಕಾಣಿಸುವುದು, ವಸ್ತುತಃ ಭೇದವು ನನಗಿಲ್ಲ, ಭೇದಾಭೇದಗಳು ನನಗಿಲ್ಲ; ಯಾವ ಅವಸ್ಥೆ-ಮುಂತಾದುವುಗಳೂ ನನಗಿಲ್ಲ, ನನ್ನ ಹೊರತಾಗಿ ಯಾವ ವಸ್ತುವೂ ಇರುವುದಿಲ್ಲ. ॥೬॥

ಸಂತೋಷ ದುಃಖಗಳೂ ನಾನೇ, ಮೋಕ್ಷವೂ ನಾನೇ, ದೇವತೆಗಳೂ ನಾನು, ಜ್ಞಾನಜ್ಯೋತಿಸ್ವರೂಪನಾದ ಅದ್ವಿತೀಯನಾದ ನಿತ್ಯತೃಪ್ತನಾದ ನನಗೆ ಯಾವ ಸಂಕಲ್ಪಗಳೂ ಇಲ್ಲವು, ನನ್ನ ಹೊರತಾಗಿ ಯಾವ ವಸ್ತುಗಳೂ ಇಲ್ಲ. ॥೭॥

ಜೀವಭೇದಗಳು ನನಗಿಲ್ಲವು, ಪರಮಾತ್ಮಭೇದವು ನನಗಿಲ್ಲ, ಆನಂದಸ್ವರೂಪನು ನಾನು, ಜನನವು ನನಗಿಲ್ಲ, ನನ್ನ ಹೊರತು ಯಾವ ವಸ್ತುವೂ ಇಲ್ಲ. ॥೮॥

ನಿಷ್ಕಲಾತ್ಮಾ ನಿರ್ಮಲಾತ್ಮಾ ಬುಧ್ಯಾತ್ಮಾ ಪುರುಷಾತ್ಮಕಃ ।
ಸಂತ್ಯಕ್ತಭೋಗಭೋಗ್ಯಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೯॥

ಅಗಣ್ಯಾತ್ಮಾ ಚ ಗಣ್ಯಾತ್ಮಾ ಅಮೃತಾತ್ಮಾಮೃತಾಂತರಃ ।
ಭೂತಭವ್ಯಭವಿಷ್ಯಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೦॥

ಅಖಿಲಾತ್ಮಾನುಮಾನಾತ್ಮಾ ಮಾನಾತ್ಮಾ ಮಾನಭಾವನಃ ।
ತುರ್ಯರೂಪಃ ಪ್ರಸನ್ನಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೧॥

ನಿತ್ಯಪ್ರತ್ಯಕ್ಷರೂಪಾತ್ಮಾ ನಿತ್ಯಪ್ರತ್ಯಕ್ಷನಿರ್ಣಯಃ ।
ಅಹನ್ಯಹೀನಶುದ್ಧಾತ್ಮಾ ಮಾನಾಮಾನವಿಹೀನಕಃ ॥೧೨॥

ನಿತ್ಯಾನಿತ್ಯವಿಹೀನಾತ್ಮಾ ಇಹಾಮುತ್ರಫಲಾಂತರಃ ।
ಶಮಾದಿಷಟ್ಕಶೂನ್ಯಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೩॥

---

ಯಾವ ಪಾಪಗಳೂ ಇಲ್ಲದ ನಿರ್ಮಲನು ನಾನು, ಪ್ರಕೃತಿಪುರುಷರೂಪನು ನಾನ., ಸುಖವಸ್ತು—ಸುಖ ಎರಡೂ ನನ್ನ ಹೊರತಾಗಿಲ್ಲವು. ॥೯॥

ಗಣನೆಗೆ ಸಿಕ್ಕದವನು ನಾನು, ಗಣಿಸುವ ವಸ್ತುಸ್ವರೂಪನು ನಾನು, ಅಮೃತ ಸ್ವರೂಪನು ನಾನು, ಅಮೃತರಸನು ನಾನು, ಭೂತಭವಿಷ್ಯದ್ವರ್ತಮಾನರೂಪನು ನಾನು, ನನ್ನ ಹೊರತು ಯಾವುದೂ ಇಲ್ಲವು. ॥೧೦॥

ಎಲ್ಲರ ಆತ್ಮನು ನಾನು, ಅನುಮಾನಸ್ವರೂಪನು, ಪ್ರಮಾಣಿಸುವವನು ನಾನು, ಪ್ರಮಾಣಸ್ವರೂಪನು ನಾನು, ದೇಹ ಮನಸ್ಸು ಇಂದ್ರಿಯಗಳಿಗಿಂತ ಭಿನ್ನ ನಾದ ನಾಲ್ಕನೆಯವನಾದ ಆತ್ಮನು ನಾನು, ನನ್ನ ಹೊರತು ಯಾವವಸ್ತುವೂ ಇಲ್ಲವು. ॥೧೧॥

ಸದಾ ನಾನು ಪ್ರತ್ಯಕ್ಷನು, ಪ್ರತ್ಯಕ್ಷಸ್ವರೂಪನು ನಾನು, ಯಾವಾಗಲೂ ನಾನು ಶುದ್ಧನು, ಪ್ರಮಾಣ ದುಷ್ಪ್ರಮಾಣಗಳು ನನಗಿಲ್ಲವು. ॥೧೨॥

ನಿತ್ಯತ್ವ-ಅನಿತ್ಯತ್ವಗಳು ನನಗಿಲ್ಲವು, ಇಹಪರಲೋಕಗಳಲ್ಲಿ ಫಲವನ್ನನುಭವಿಸುವ ಜೀವನು ನಾನು, ಶಮ ದಮಾದಿ ಆರು ಸಾಧನಗಳಿಲ್ಲದವನು ನಾನು. ॥೧೩॥

ಅಸದ್ಧೀನಸ್ಸ್ವಭಾವಾತ್ಮಾ ಅನ್ಯಹೀನಃ ಸ್ವಯಂಪ್ರಭುಃ ।
ವಿದ್ಯಾವಿದ್ಯಾಸ್ಯಶುದ್ಧಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೪॥

ಮುಮುಕ್ಷುತ್ವಂ ಚ ಹೀನಾತ್ಮಾ ಶಮಾತ್ಮಾ ದಮನಾತ್ಮಕಃ ।
ನಿತ್ಯೋಪರತರೂಪಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೫॥

ಸರ್ವಕಾಲಂ ತಿತಿಕ್ಷಾತ್ಮಾ ಸಮಾಧಾನಾತ್ಮನಿ ಸ್ಥಿತಃ ।
ಶುದ್ಧಾತ್ಮಾ ಸ್ವಾತ್ಮನಿ ಸ್ವಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೬॥

ಅನ್ನಕೋಶವಿಹೀನಾತ್ಮಾ ಪ್ರಾಣಕೋಶವಿವರ್ಜಿತಃ ।
ಮನಃಕೋಶವಿಹೀನಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೭॥

ವಿಜ್ಞಾನಕೋಶಹೀನಾತ್ಮಾಽಽನಂದಕೋಶವಿವರ್ಜಿತಃ ।
ಕಾರಣಾದಿ ವಿಹೀನಾತ್ಮಾ ಸೂಕ್ಷ್ಮದೇಹವಿವರ್ಜಿತಃ ॥೧೮॥

ದೃಶ್ಯಾನುವಿದ್ಧಶೂನ್ಯಾತ್ಮಾ ಹ್ಯಾದಿಮಧ್ಯಾಂತವರ್ಜಿತಃ ।
ಶಾಂತಾ ಸಮಾಧಿಶೂನ್ಯಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೧೯॥

---

ಅಸತ್ಯವೆಂಬುದು ನನಗಿಲ್ಲವು, ನನಗಿಂತ ಬೇರೆಯಾಗಿ ಯಾವನೂ ಇಲ್ಲವು, ಸರ್ವಸ್ವತಂತ್ರನು ನಾನು, ವಿದ್ಯೆ ಅವಿದ್ಯೆಗಳು ನನಗಿಲ್ಲವು. ॥೧೪॥

ಮೋಕ್ಷಾಪೇಕ್ಷೆಯೂ ನನಗಿಲ್ಲ, ಶಮದಮಗಳನ್ನಾಚರಿಸುವವನು ನಾನು, ನಿತ್ಯವೂ ಶಾಂತನೂ ನಿವೃತ್ತನೂ ನಾನಾಗಿರುವೆನು. ॥೧೫॥

ಸರ್ವದಾ ನಾನು ಸಹನೆಯುಳ್ಳವನು, ಶಾಂತಾತ್ಮನಲ್ಲಿ ನೆಲಸಿರುವೆನು, ನನ್ನಲ್ಲಿಯೇ ನಾನಿರುವೆನು, ನನ್ನ ಹೊರತಾಗಿ ಯಾವ ವಸ್ತುವೂ ಇರುವುದಿಲ್ಲ. ॥೧೬॥

ಅನ್ನಮಯಕೋಶ, ಪ್ರಾಣಮಯಕೋಶ, ಮನೋಮಯಕೋಶಗಳು ನನಗಿಲ್ಲ. ॥೧೭॥

ವಿಜ್ಞಾನಮಯ ಆನಂದಮಯಕೋಶಗಳು ನನಗಿಲ್ಲ, ಸ್ಥೂಲಶರೀರ ಸೂಕ್ಷ್ಮಶರೀರ ಕಾರಣಶರೀರಗಳು ನನಗಿಲ್ಲ. ॥೧೮॥

ಕಣ್ಣಿಗೆ ಕಾಣಿಸುವ ದೃಶ್ಯವಸ್ತುವು ನಾನಲ್ಲ, ಆದಿ ಮಧ್ಯ ಅಂತ್ಯಗಳು ನನಗಿಲ್ಲ, ಸಮಾಧಿಯು ನನಗಿಲ್ಲ, ನನ್ನ ಹೊರತು ಯಾವ ವಸ್ತುವೂ ಇಲ್ಲವು. ॥೧೯॥

ಪ್ರಜ್ಞಾನವಾಕ್ಯಹೀನಾತ್ಮಾ ಅಹಂ ಬ್ರಹ್ಮಾಸ್ಮಿವರ್ಜಿತಃ ।
ತತ್ತ್ವಮಸ್ಯಾದಿವಾಕ್ಯಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೦॥

ಅಯಮಾತ್ಮೇತ್ಯಭಾವಾತ್ಮಾ ಸರ್ವಾತ್ಮವಾಕ್ಯವರ್ಜಿತಃ ।
ಓಂಕಾರಾತ್ಮಾಗುಣಾತ್ಮಾ ಚ ಹ್ಯಾತ್ಮನೋಽನ್ಯನ್ನ ಕಿಂಚನ ॥೨೧॥

ಜಾಗ್ರದ್ಧೀನಸ್ವರೂಪಾತ್ಮಾ ಸ್ವಪ್ನಾವಸ್ಥಾ ವಿವರ್ಜಿತಃ ।
ಆನಂದರೂಪಪೂರ್ಣಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೨॥

ಭೂತಾತ್ಮಾ ಚ ಭವಿಷ್ಯಾತ್ಮಾ ಹ್ಯಕ್ಷರಾತ್ಮಾ ಚಿದಾತ್ಮಕಃ ।
ಅನಾದಿಮಧ್ಯರೂಪಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೩॥

ಸರ್ವಸಂಕಲ್ಪಹೀನಾತ್ಮಾ ಸ್ವಚ್ಛಚಿನ್ಮಾತ್ರಮಕ್ಷಯಃ ।
ಜ್ಞಾತೃಜ್ಞೇಯಾದಿಹೀನಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೪॥

---

"ಪ್ರಜ್ಞಾನಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಮುಂತಾದ ವಾಕ್ಯಗಳು ನನ್ನ ಹೊರತಾಗಿ ಇಲ್ಲ. ಅಂದರೆ ಆ ಮಹಾವಾಕ್ಯಾರ್ಥಗಳ ಸ್ವರೂಪವು ನಾನು. ॥೨೦॥

"ಅಯಮಾತ್ಮಾ ಸರ್ವಾಂತರಃ" "ಇದಂ ಸರ್ವಂ ಯದಯಮಾತ್ಮಾ" ಎಂದು ಮೊದಲಾದ ವೇದಾಂತವಾಕ್ಯಗಳೂ ನನ್ನ ಹೊರತಾಗಿಲ್ಲ. ನಿರ್ಗುಣನಾದ ಓಂಕಾರಸ್ವರೂಪನಾದ ನನ್ನ ಸ್ವರೂಪವೇ ಆಗಿರುವುವು. ॥೨೧॥

ಜಾಗ್ರದವಸ್ಥೆ, ಸ್ವಪ್ನಾವಸ್ಥೆ, ಸುಷುಪ್ತ್ಯವಸ್ಥೆಗಳು ನನಗಿಲ್ಲವು. ಕೇವಲ ಆನಂದಮಯನು ನಾನು. ನನ್ನ ಹೊರತು ಯಾವ ವಸ್ತುವೂ ವಸ್ತುತಃ ಇರುವುದಿಲ್ಲ. ॥೨೨॥

ಭೂತಕಾಲದಲ್ಲೂ ನಾನಿದ್ದೆನು, ಈಗಲೂ ಇದ್ದೇನೆ, ಮುಂದೂ ಇರುವೆನು. ನನಗೆ ನಾಶವಿಲ್ಲ. ಜ್ಞಾನಮೂರ್ತಿಯು ನಾನು. ಅನಾದಿಪುರುಷನು ನಾನು. ॥೨೩॥

ಯಾವ ಸಂಕಲ್ಪಗಳೂ ನನಗಿಲ್ಲವು. ಪರಿಶುದ್ಧ ಜ್ಞಾನಮೂರ್ತಿಯು ನಾನು. ತಿಳಿಯುವವನು, ತಿಳಿಯುವುದು ಮೊದಲಾದ ಭೇದವು ನನಗಿಲ್ಲವು. ॥೨೪॥

ತುರ್ಯಾತ್ಮಾ ನಿತ್ಯಮಾತ್ಮಾ ಚ ಯತ್ಕಿಂಚಿದಿದಮಾತ್ಮಕಃ ।
ಭಾವಾತ್ಮಾ ಭಾವಹೀನಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೫॥

ವಾಚಾವಧಿರನೇಕಾತ್ಮಾ ವಾಚ್ಯಾನಂದಾತ್ಮನಂದಕಃ ।
ಸರ್ವಹೀನಾತ್ಮಾ ಸರ್ವಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೬॥

ಏಕಾತ್ಮಾ ಏಕಹೀನಾತ್ಮಾ ದ್ವೈತಾತ್ಮಾ ದ್ವೈತವರ್ಜಿತಃ ।
ಸ್ವಯಮಾತ್ಮಸ್ವಭಾವಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೨೭॥

ಆತ್ಮಾನಮೇವ ವೀಕ್ಷಸ್ವ ಆತ್ಮಾನಂ ಭಾವಯ ಸ್ವಕಂ ।
ಸ್ವಸ್ವಾತ್ಮಾನಂ ಸ್ವಯಂ ಭುಂಕ್ಷ್ವ ಹ್ಯಾತ್ಮನೋಽನ್ಯನ್ನ ಕಿಂಚನ ॥೨೮॥

ಸ್ವಸ್ವಾತ್ಮಾನಂ ಚ ಸಂತುಷ್ಟ ಸ್ವಾತ್ಮಾನಂ ಸ್ವಯಮೇವ ಹಿ ।
ಸ್ವಮಾತ್ಮಾನಂ ಸ್ವಯಂ ಪಶ್ಯೇತ್ಸ್ವಮಾತ್ಮಾನಂ ಸ್ವಯಂಶ್ರುತಂ ॥೨೯॥

---

ಮೂರು ದೇಹಗಳೂ ಇಲ್ಲದ ನಿತ್ಯಾತ್ಮನು ನಾನು. ಈ ಜಗತ್ತಿನಲ್ಲಿ ಕಾಣಿಸುವ ವಸ್ತುವೆಲ್ಲವೂ ನಾನೇ. ಭಾವಸ್ವರೂಪನೂ ಅಭಾವಸ್ವರೂಪನೂ ನಾನು. ॥೨೫॥

ವಾಕ್ಯಗಳಿಗೆ ಆತ್ಮನೇ ಕೊನೆಯು. ಅಂದರೆ ಆತ್ಮನನ್ನು ಮೀರಿ, ವಾಕ್ಯ ವ್ಯಾಪಿಸಲಾರದು. ವಾಕ್ಯದ ಅರ್ಥವಾದ ಆನಂದವೂ ಆತ್ಮನೇ, ಆತ್ಮನ ಹೊರತು ಯಾವ ವಸ್ತುವೂ ವಸ್ತುತಃ ಇಲ್ಲ. ॥೨೬॥

ಆತ್ಮನು ಓರ್ವನೇ ಆದರೂ ಒಂದು ಎಂಬ ಸಂಖ್ಯಾವ್ಯವಹಾರವು ಅವನಿಗಿಲ್ಲ. ಭೇದಸ್ವರೂಪಿಯಾದರೂ ಭೇದವಿಲ್ಲದವನು. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೨೭॥

ನಿನ್ನ ಆತ್ಮನನ್ನೇ ನೋಡಿಕೊ, ನಿನ್ನ ಆತ್ಮನನ್ನೇ ಭಾವಿಸು, ಧ್ಯಾನಿಸು, ನಿನ್ನ ಆತ್ಮನನ್ನೇ ಅನುಭವಿಸು, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೨೮॥

ನಮ್ಮ ಆತ್ಮನನ್ನೇ ನಾವು ಸಂತೋಷಪಡಿಸಬೇಕು. ನಮ್ಮಾತ್ಮನನ್ನೇ ನಾವು ಕೇಳಿ, ನಮ್ಮಲ್ಲಿ ನಮ್ಮನ್ನು ನಾವು ನೋಡಿಕೊಳ್ಳಬೇಕು. ॥೨೯॥

ಸ್ವಮಾತ್ಮನಿ ಸ್ವಯಂ ತೃಪ್ತಃ ಸ್ವಮಾತ್ಮಾನಂ ಸ್ವಯಂ ಭರಃ ।
ಸ್ವಮಾತ್ಮಾನಂ ಸ್ವಯಂ ಭಾಸ್ಯಾ ಹ್ಯಾತ್ಮನೋಽನ್ಯನ್ನ ಕಿಂಚನ ॥೩೦॥

ಸ್ವಮಾತ್ಮಾನಂ ಸ್ವಯಂ ವೋದಂ ಸ್ವಮಾತ್ಮಾನಂ ಸ್ವಯಂ ಪ್ರಿಯಂ।
ಸ್ವಮಾತ್ಮಾನಮೇವ ಮಂತವ್ಯಂ ಹ್ಯಾತ್ಮನೋಽನ್ಯನ್ನ ಕಿಂಚನ ॥೩೧॥

ಆತ್ಮಾನಮೇವ ಶ್ರೋತವ್ಯಮಾತ್ಮಾನಂ ಶ್ರವಣಂ ಭವ ।
ಆತ್ಮಾನಂ ಕಾಮಯೇ ನಿತ್ಯಮಾತ್ಮಾನಂ ನಿತ್ಯಮರ್ಚಯ ॥೩೨॥

ಆತ್ಮಾನಂ ಶ್ಲಾಘಯೇನ್ನಿತ್ಯಮಾತ್ಮಾನಂ ಪರಿಪಾಲಯ ।
ಆತ್ಮಾನಂ ಕಾಮಯೇನ್ನಿತ್ಯಂ ಹ್ಯಾತ್ಮನೋಽನ್ಯನ್ನ ಕಿಂಚನ ॥೩೩॥

ಆತ್ಮಾನಮೇವಮಾತ್ಮಾನಮಾತ್ಮೈವೇದಮಿದಂ ಜಲಂ ।
ಆತ್ಮೈವೇದಯಮಿಯಂ ಭೂಮಿರ್ಹ್ಯಾತ್ಮನೋಽನ್ಯನ್ನ ಕಿಂಚನ ॥೩೪॥

---

ನಮ್ಮಾತ್ಮನನ್ನೇ ನಾವು ಪೋಷಿಸಿ ಅದರಲ್ಲೇ ನಾವು ತೃಪ್ತರಾಗಬೇಕು. ಅಂದರೆ ಆತ್ಮಾನುಭವದಿಂದಲೇ ತೃಪ್ತರಾಗಿ ಎಲ್ಲ ಆಸೆಗಳನ್ನೂ ತೊರೆಯಬೇಕು. ॥೩೦॥

ಸಂತಸಮಯನಾದ (ಆನಂದಮಯನಾದ) ಎಲ್ಲರಿಗೂ "ನಾನು ನಾನು" ಎಂದು ಅತ್ಯಂತಪ್ರಿಯನಾಗಿರುವ ಆತ್ಮನನ್ನು ನಮ್ಮಲ್ಲಿಯೇ ಮನನಮಾಡಬೇಕು. ॥೩೧॥

ಆತ್ಮನನ್ನೇ ಶ್ರವಣಮಾಡ (ಕೇಳ) ಬೇಕು, ಕೇಳಿ ಆ ಆತ್ಮನೇ ತಾನೆಂದು ತನ್ನ ಸ್ವರೂಪವನ್ನು ತಿಳಿದುಕೊಳ್ಳಬೇಕು. ಆತ್ಮನನ್ನೇ ನಾನು ನಿತ್ಯವೂ ಕಾಮಿಸುವೆನು, ಆತ್ಮನನ್ನು ನಿತ್ಯವೂ ಅರ್ಚಿಸಬೇಕು. ॥೩೨॥

ನಿತ್ಯವೂ ಆತ್ಮನನ್ನು ಶ್ಲಾಘಿಸಬೇಕು. ಅಂದರೆ ದೇಹವೇ ಆತ್ಮವೆಂದು ತಿಳಿದು ಆತ್ಮನಿಗೆ ದೇಹದ ಸೀಚತನವನ್ನು ಕಲ್ಪಿಸಬಾರದು, ತಾನು ನಿರ್ಗುಣವಾದ ಪರಮಾತ್ಮನೆಂದು ಪರಿಗಣಿಸಬೇಕು, ಆತ್ಮನೊರ್ಬನೇ ಜಗತ್ತಿನಲ್ಲಿ ಸತ್ಯವಾಗಿರುವವನು, ಆತ್ಮನ ಹೊರತು ಮತ್ತಾವುದೂ ಸತ್ಯವಾದುದಲ್ಲ. ॥೩೩॥

ಜೀವಾತ್ಮನೇ ಪರಮಾತ್ಮನು, ಈ ಜಲವೂ, ಈ ಭೂಮಿಯೂ, ಈ ವಾಯುವೂ

ಆತ್ಮೈವಾಯಮಯಂ ವಾಯುರಾತ್ಮೈವೇದಮಿದಂ ವಿಯತ್ ।
ಆತ್ಮೈವೇದಮಿದಂ ಜ್ಯೋತಿರಾತ್ಮನೋಽನ್ಯನ್ನ ಕಿಂಚನ ॥೩೫॥

ಆತ್ಮೈವೇದಮಿದಂ ಚಿತ್ತಮಾತ್ಮೈವೇದಮಿದಂ ಮನಃ ।
ಆತ್ಮೈವಾಯಮಹಂಕಾರ ಆತ್ಮನೋಽನ್ಯನ್ನ ಕಿಂಚನ ॥೩೬॥

ಆತ್ಮೈವೇಯಮಿಯಂ ಬುದ್ಧಿರಾತ್ಮೈವಾಯಮಯಂ ಗುಣಃ ।
ಆತ್ಮೈವೇದಮಿದಂ ದೇಹಮಾತ್ಮನೋಽನ್ಯನ್ನ ಕಿಂಚನ ॥೩೭॥

ಆತ್ಮೈವೇದಮಿದಂ ತತ್ವಮಾತ್ಮೈವಾಯಮಯಂ ಜಪಃ ।
ಆತ್ಮೈವಾಯಮಯಂ ಮಂತ್ರೋ ಹ್ಯಾತ್ಮನೋಽನ್ಯನ್ನ ಕಿಂಚನ ॥೩೮॥

ಆತ್ಮೈವಾಯಮಯಂ ಶಬ್ದ ಆತ್ಮೈವಾಯಮಯಂ ರಸಃ ।
ಆತ್ಮೈವಾಯಮಯಂ ಲೋಕಃ ಹ್ಯಾತ್ಮನೋಽನ್ಯನ್ನ ಕಿಂಚನ ॥೩೯॥

ಆತ್ಮೈವಾಯಮಯಂ ಸ್ಪರ್ಶ ಆತ್ಮೈವಾಯಮಯಂ ಶಮಃ ।
ಆತ್ಮೈವಾಯಮಯಂ ಗಂಧೋ ಹ್ಯಾತ್ಮನೋಽನ್ಯನ್ನ ಕಿಂಚನ ॥೪೦॥

---

ಈ ತೇಜಸ್ಸೂ ಈ ಆಕಾಶವೂ ಸಹ ಆತ್ಮನೇ. ಆತ್ಮನ ಹೊರತಾಗಿ ಈ ಜಗತ್ತಿನಲ್ಲಿ ಯಾವುದೂ ಇಲ್ಲವು. ॥೩೪-೩೫॥

ಈ ಚಿತ್ತವೂ ಆತ್ಮನೇ, ಈ ಮನವೂ ಆತ್ಮನೇ, ಈ ಅಹಂಕಾರವೂ ಆತ್ಮನೇ, ಆತ್ಮನು ಹೊರತಾಗಿ ಏನೂ ಇಲ್ಲವು. ॥೩೬॥

ಈ ಬುದ್ಧಿಯೂ ಈ ಗುಣಗಳೂ ಈ ದೇಹವೂ ಆತ್ಮನೇ, ಆತ್ಮನ ಹೊರತಾಗಿ ಏನೂ ಇಲ್ಲ. ॥೩೭॥

ಈ ತತ್ವಗಳೆಲ್ಲವೂ ಆತ್ಮನೇ, ಮಂತ್ರಗಳೆಲ್ಲವೂ ಆತ್ಮನೇ, ಮಂತ್ರಜಪವೂ ಆತ್ಮನೇ, ಆತ್ಮನು ಹೊರತಾಗಿ ಯಾವ ವಸ್ತುವೂ ಇಲ್ಲವು. ॥೩೮॥

ಈ ಶಬ್ದವೆಲ್ಲವೂ ಆತ್ಮನೇ, ಈ ರಸವೆಲ್ಲವೂ ಆತ್ಮನೇ, ಈ ಲೋಕಗಳೆಲ್ಲವೂ ಆತ್ಮನೇ. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೩೯॥

ಈ ಸ್ಪರ್ಶವೆಲ್ಲವೂ ಆತ್ಮನೇ, ಇಂದ್ರಿಯನಿಗ್ರಹವೂ ಆತ್ಮನೇ, ಈ ಗಂಧವೆಲ್ಲವೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೪೦॥

ಆತ್ಮೈವಾಯಮಯಂ ದುಃಖಂ ಆತ್ಮೈವೇದಮಿದಂ ಸುಖಂ ।
ಆತ್ಮೈವಾಯಮಯಂ ಸರ್ವಮಾತ್ಮನೋಽನ್ಯನ್ನ ಕಿಂಚನ ॥೪೧॥

ಆತ್ಮೀಯಮೇವೇದಂ ಜಾಗ್ರತ್ ಆತ್ಮೀಯಃ ಸ್ವಪ್ನ ಏವ ಹಿ ।
ಸುಷುಪ್ತಂ ಚಾಪ್ಯಥಾತ್ಮೀಯಮಾತ್ಮನೋಽನ್ಯನ್ನ ಕಿಂಚನ ॥೪೨॥

ಆತ್ಮೈವ ಕಾರ್ಯಮಾತ್ಮೈವ ಪ್ರಾಯೋಹ್ಯಾತ್ಮೈವಮುಪ್ಪಯಂ ।
ಆತ್ಮೀಯಮೇವಾಯಂ ಜಪ ಹ್ಯಾತ್ಮನೋಽನ್ಯನ್ನ ಕಿಂಚನ ॥೪೩॥

ಆತ್ಮೀಯಮೇವಮದ್ವೈತಮಾತ್ಮೈವೇದಮಿದಂ ಕ್ವಚಿತ್ ।
ಆತ್ಮೀಯಮೇವಾಯಂ ಕೋಽಪಿ ಹ್ಯಾತ್ಮನೋಽನ್ಯನ್ನ ಕಿಂಚನ ॥೪೪॥

ಆತ್ಮೈವಾಯಮಯಂ ಲೋಕ ಆತ್ಮೈವಾಯಮಯಂ ಜನಃ ।
ಆತ್ಮೀಯಮೇವೇದಂ ದೃಶ್ಯಮಾತ್ಮನೋಽನ್ಯನ್ನ ಕಿಂಚನ ॥೪೫॥

---

ಈ ದುಃಖವೆಲ್ಲವೂ ಆತ್ಮನೇ, ಈ ಸುಖವೆಲ್ಲವೂ ಆತ್ಮನೇ, ಕಣ್ಣಿಗೆ ಕಾಣಿಸುವುದೆಲ್ಲವೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೪೧॥

ಈ ಜಾಗ್ರದವಸ್ಥೆಯೆಲ್ಲವೂ ಆತ್ಮನೇ, ಈ ಸ್ವಪ್ನವೂ ಆತ್ಮನೇ, ಈ ಸುಷುಪ್ತಿಯೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೪೨॥

ಕಾರ್ಯವೆಲ್ಲವೂ ಆತ್ಮನೇ, ವಯಸ್ಸು ಎಂಬುದೂ ಆತ್ಮನೇ, ಜಪವೂ ಆತ್ಮನೇ, ಆತ್ಮನ ಹೊರತು ವಸ್ತುತಃ ಯಾವ ವಸ್ತುವೂ ಇಲ್ಲ. ॥೪೩॥

"ಇದೆಲ್ಲವೂ ಆತ್ಮವೇ, ಆತ್ಮನ ಹೊರತು ಬೇರೆ ಯಾವ ವಸ್ತುವೂ ಇಲ್ಲ" ಎಂದು ಹೇಳುವ ಅದ್ವೈತವೂ ಸಹ ಆತ್ಮನೇ. (ಅಂದರೆ ಆತ್ಮನ ಹೊರತಾಗಿ ಅದ್ವೈತವೆಂದೊಂದು ಬೇರೆಯಿಲ್ಲ. ಅದ್ವೈತವೆಂದರೆ ಅದ್ವಿತೀಯನಾದ ಆತ್ಮನೇ ಎಂದು ಅಭಿಪ್ರಾಯವು). ॥೪೪॥

ಈ ಲೋಕವೆಲ್ಲವೂ ಆತ್ಮನೇ, ಈ ಜನಗಳೆಲ್ಲವೂ ಆತ್ಮನೇ, ಕಣ್ಣಿಗೆ ಕಾಣಿಸುವ ವಸ್ತುವೆಲ್ಲವೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ ॥೪೫॥

ಆತ್ಮೈವಾಯಮಯಂ ಶಂಭುರಾತ್ಮೈವೇದಮಿದಂ ಜಗತ್ ।
ಆತ್ಮೈವಾಯಮಯಂ ಬ್ರಹ್ಮಾಹ್ಯಾತ್ಮನೋಽನ್ಯನ್ನ ಕಿಂಚನ ॥೪೬॥

ಆತ್ಮೈವಾಯಮಯಂ ಸೂರ್ಯ ಆತ್ಮೈವಾಯಮಿದಂ ಜಡಂ ।
ಆತ್ಮೈವಾಯಮಯಂ ಸೋಮ ಹ್ಯಾತ್ಮನೋಽನ್ಯನ್ನ ಕಿಂಚನ ॥೪೭॥

ಆತ್ಮೈವಾಯಮಿದಂ ಧ್ಯಾನಮಾತ್ಮೈವಾಯಮಿದಂ ಫಲಂ ।
ಆತ್ಮೈವಾಯಮಯಂ ಯೋಗಸ್ಸರ್ವಮಾತ್ಮಮಯಂ ಜಗತ್ ॥೪೮॥

ಸರ್ವಮಾತ್ಮಮಯಂ ಭೂತಂ ಭವಿಷ್ಯಂ ಚಾತ್ಮಮೇವ ಹಿ ।
ಸರ್ವಮಾತ್ಮಮಯಂ ಭಾವಿ ಹ್ಯಾತ್ಮನೋಽನ್ಯನ್ನ ಕಿಂಚನ ॥೪೯॥

ಸರ್ವಮಾತ್ಮಮಯಂ ಕಾಲಃ ಸರ್ವಮಾತ್ಮಮಯೋ ಗುರುಃ ।
ಸರ್ವಮಾತ್ಮಮಯಂ ಶಿಷ್ಯೋ ಹ್ಯಾತ್ಮನೋಽನ್ಯನ್ನ ಕಿಂಚನ ॥೫೦॥

ಸರ್ವಮಾತ್ಮಮಯಂ ವೇದಂ ಸರ್ವಮಾತ್ಮಮಯಂ ಫಲಂ ।
ಸರ್ವಮಾತ್ಮಮಯಂ ಲಕ್ಷ್ಯಂ ಹ್ಯಾತ್ಮನೋಽನ್ಯನ್ನ ಕಿಂಚನ ॥೫೧॥

---

ಶಂಕರನೂ ಆತ್ಮನೇ, ಬ್ರಹ್ಮನೂ ಆತ್ಮನೇ, ಬ್ರಹ್ಮನೂ ಆತ್ಮನೇ, ಅವರು ಸೃಷ್ಟಿಸಿ ಸಂಹರಿಸುವ ಈ ಜಗತ್ತೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೪೬॥

ಜಡವಸ್ತುವೆಲ್ಲವೂ ಆತ್ಮನೇ, ಈ ಸೂರ್ಯಚಂದ್ರರೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೪೭॥

ಆತ್ಮಧ್ಯಾನವೂ, ಅದರಫಲವೂ ಆತ್ಮನೇ. ಯೋಗವೂ, ಯೋಗಫಲವೂ ಆತ್ಮನೇ. ಜಗತ್ತೆಲ್ಲವೂ ಆತ್ಮಮಯವೇ ಆಗಿದೆ. ॥೪೮॥

ಭೂತವಸ್ತುಗಳೆಲ್ಲವೂ, ಭವಿಷ್ಯದ್ವಸ್ತುಗಳೆಲ್ಲವೂ, ವರ್ತಮಾನವಸ್ತುಗಳೆಲ್ಲವೂ ಆ ಕಾಲಗಳೂ ಸಹ ಆತ್ಮನೇ, ಯಾವುದೂ ಆತ್ಮನ ಹೊರತಾಗಿಲ್ಲವು. ॥೪೯॥

ನಾವೆಲ್ಲವೂ ಆತ್ಮಮಯವೇ, ಗುರು, ಶಿಷ್ಯರೂ ಆತ್ಮಮಯರೇ. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೫೦॥

ವೇದಗಳೆಲ್ಲವೂ ಆತ್ಮಸ್ವರೂಪವೇ. ಫಲವೆಲ್ಲವೂ ಆತ್ಮಸ್ವರೂಪವೇ, ಧ್ಯೇಯ ವಸ್ತುಗಳೆಲ್ಲವೂ ಆತ್ಮಸ್ವರೂಪವೇ. ಆತ್ಮನು ಹೊರತು ಯಾವುದೂ ಇಲ್ಲವು. ॥೫೧॥

ಸರ್ವಮಾತ್ಮಮಯಂ ತೀರ್ಥಂ ಸರ್ವಮಾತ್ಮಮಯಂ ಸ್ವಯಂ ।
ಸರ್ವಮಾತ್ಮಮಯಂ ಮೋಕ್ಷಂ ಹ್ಯಾತ್ಮನೋಽನ್ಯನ್ನ ಕಿಂಚನ ॥೫೨॥

ಸರ್ವಮಾತ್ಮಮಯಂ ಕಾಮಂ ಸರ್ವಮಾತ್ಮಮಯಂ ಕ್ರಿಯಾ ।
ಸರ್ವಮಾತ್ಮಮಯಂ ಕ್ರೋಧಮಾತ್ಮನೋಽನ್ಯನ್ನ ಕಿಂಚನ ॥೫೩॥

ಸರ್ವಮಾತ್ಮಮಯಂ ವಿದ್ಯಾ ಸರ್ವಮಾತ್ಮಮಯಂ ದಿಶಃ ।
ಸರ್ವಮಾತ್ಮಮಯಂ ಲೋಭಮಾತ್ಮನೋಽನ್ಯನ್ನ ಕಿಂಚನ ॥೫೪॥

ಸರ್ವಮಾತ್ಮಮಯಂ ಮೋಹಂ ಸರ್ವಮಾತ್ಮಮಯಂ ಭಯಂ ।
ಸರ್ವಮಾತ್ಮಮಯಂ ಚಿಂತಾ ಹ್ಯಾತ್ಮನೋಽನ್ಯನ್ನ ಕಿಂಚನ ॥೫೫॥

ಸರ್ವಮಾತ್ಮಮಯಂ ಧೈರ್ಯಂ ಸರ್ವಮಾತ್ಮಮಯಂ ಧ್ರುವಂ ।
ಸರ್ವಮಾತ್ಮಮಯಂ ಸತ್ವಮಾತ್ಮನೋಽನ್ಯನ್ನ ಕಿಂಚನ ॥೫೬॥

ಸರ್ವಮಾತ್ಮಮಯಂ ಶುದ್ಧಂ ಸತ್ಯಮಾತ್ಮಾ ಸದಾತ್ಮಕಃ ।
ಸರ್ವಮಾತ್ಮಸುಖಂ ಚಾತ್ಮಾ ಹ್ಯಾತ್ಮನೋಽನ್ಯನ್ನ ಕಿಂಚನ ॥೫೭॥

---

ಪವಿತ್ರವಸ್ತುವೆಲ್ಲವೂ ಆತ್ಮವಸ್ತುವೇ, ತಾನು ಎಂಬುದೆಲ್ಲವೂ ಆತ್ಮಸ್ವರೂಪವೇ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯಗಳೆಂಬ ನಾಲ್ಕುಬಗೆಯ ಮೋಕ್ಷಗಳೂ ಆತ್ಮಸ್ವರೂಪವೇ. ಆತ್ಮನ ಹೊರತು ಯಾವ ವಸ್ತುವೂ ಪ್ರಪಂಚದಲ್ಲಿ ಇಲ್ಲವು. ॥೫೨॥

ಸುಖಭೋಗವೆಲ್ಲವೂ ಆತ್ಮಸ್ವರೂಪವೇ, ಕಾರ್ಯಗಳೆಲ್ಲವೂ ಆತ್ಮಸ್ವರೂಪವೇ, ಕ್ರೋಧವೆಲ್ಲವೂ ಆತ್ಮಸ್ವರೂಪವೇ, ಆತ್ಮನ ಹೊರತು ಯಾವ ವಸ್ತುವೂ ಇಲ್ಲ. ॥೫೩॥

ವಿದ್ಯೆಗಳೆಲ್ಲವೂ ಆತ್ಮಸ್ವರೂಪವೇ, ದಿಕ್ಕುದಾರಿಗಳೆಲ್ಲವೂ ಆತ್ಮಸ್ವರೂಪವೇ, ಆಸೆಯೆಲ್ಲವೂ ಆತ್ಮಸ್ವರೂಪವೇ, ಆತ್ಮನ ಹೊರತು ಯಾವುದೂ ಇಲ್ಲವು. ॥೫೪॥

ಅಜ್ಞಾನವೆಲ್ಲವೂ ಆತ್ಮಸ್ವರೂಪವೇ, ಭಯವೆಲ್ಲವೂ ಆತ್ಮಸ್ವರೂಪವೇ, ಚಿಂತೆಯೆಲ್ಲವೂ ಆತ್ಮಸ್ವರೂಪವೇ, ಆತ್ಮನ ಹೊರತು ಯಾವ ವಸ್ತುವೂ ಇಲ್ಲವು. ॥೫೫॥

ಧೈರ್ಯವೆಲ್ಲವೂ ಆತ್ಮಸ್ವರೂಪವೇ, ನಿಶ್ಚಯವೆಂಬುದೆಲ್ಲವೂ ಆತ್ಮಸ್ವರೂಪವೇ. ಸತ್ಯವೆಲ್ಲವೂ ಆತ್ಮಸ್ವರೂಪವೇ. ಆತ್ಮನ ಹೊರತು ಯಾವುದೂ ಇಲ್ಲ. ॥೫೬॥

ಶುದ್ಧವಾದುದೆನ್ನುವುದೆಲ್ಲವೂ ಆತ್ಮಸ್ವರೂಪವೇ. ಎಲ್ಲ ವಸ್ತುಗಳ ಅಸ್ತಿತ್ವ

ಪೂರ್ಣಮಾತ್ಮಾ ಕ್ಷಯಂ ಚಾತ್ಮಾ ಪರಮಾತ್ಮಾ ಪರಾತ್ಪರಃ ।
ಇತೋಽಪ್ಯಾತ್ಮಾ ತತೋಽಪ್ಯಾತ್ಮಾ ಹ್ಯಾತ್ಮೈನಾತ್ಮಾ ತತಸ್ತತಃ ॥೫೮॥

ಸರ್ವಮಾತ್ಮಸ್ವರೂಪಂ ಹಿ ದೃಶ್ಯಾದೃಶ್ಯಂ ಚರಾಚರಂ ।
ಸರ್ವಮಾತ್ಮಮಯಂ ಶ್ರುತ್ವಾ ಮುಕ್ತಿಮಾಪ್ನೋತಿ ಮಾನವಃ ॥೫೯॥

ಸ್ವತಂತ್ರಶಕ್ತಿರ್ಭಗವಾನುಮಾಧವಃ
ವಿಚಿತ್ರಕಾರ್ಯಾತ್ಮಕಜಾಗ್ರತಸ್ಯ ।
ಸುಕಾರಣಂ ಕಾರ್ಯಪರಂಪರಾಭಿಃ
ಸ ಏವ ಮಾಯಾವಿತತೋಽವ್ಯಯಾತ್ಮಾ ॥೬೦॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ
ತ್ರಯೋದಶೋಽಧ್ಯಾಯಃ

---

ಸ್ವರೂಪನು ಆತ್ಮನು, ಆತ್ಮಸುಖವೂ ಆತ್ಮನೇ, ಆತ್ಮನ ಹೊರತು ಯಾವುದೂ ಇಲ್ಲವು. ॥೫೭॥

ತುಂಬಿರುವುದೂ ಆತ್ಮನೇ, ಕ್ಷಯಿಸುವುದೂ ಆತ್ಮನೇ, ಆತ್ಮನೂ ಆತ್ಮನೇ, ಇಲ್ಲಿಯೂ ಆತ್ಮನೇ, ಅಲ್ಲಿಯೂ ಆತ್ಮನೇ, ಆತ್ಮನ ಹೊರತು ಲೋಕದಲ್ಲಿ ಯಾವುದೂ ಇಲ್ಲವು. ॥೫೮॥

ಕಣ್ಣಿಗೆ ಕಾಣಿಸುವ ಮತ್ತು ಕಾಣಿಸದಿರುವ, ಚಲಿಸುವ ಮತ್ತು ಚಲಿಸದಿರುವಂತಹ ಜಗತ್ತೆಲ್ಲವೂ ಆತ್ಮಸ್ವರೂಪವೇ. ಎಲ್ಲವೂ ಆತ್ಮವೆಂದು ಪ್ರತಿಪಾದಿಸುವ ಈ ಪ್ರಕರಣವನ್ನು ಕೇಳಿದವನು ಮುಕ್ತಿಯನ್ನೈದುವನು. ॥೫೯॥

ಭಗವಂತನಾದ ಪರಮೇಶ್ವರನು ಸರ್ವಸ್ವತಂತ್ರನು, ಸರ್ವಸಮರ್ಥನು. ವಿಚಿತ್ರವಾದ ಈ ಜಗತ್ತಿಗೆ ಆತನೇ ಕಾರಣನು. ಮಾಯೆಯಿಂದ ಈ ಜಗತ್ತನ್ನು ನಾನಾರೀತಿ ತೋರಿಸುತ್ತಾ ಅನೇಕ ಕಾರ್ಯಗಳನ್ನು ಮಾಡಿಸುವನು. ॥೬೦॥

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಅಂಶದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಶಂಕರಾಖ್ಯೇ

ಷಷ್ಠಾಂಶೇ

## ಚತುರ್ದಶೋಽಧ್ಯಾಯಃ

॥ ಋಭುರುವಾಚ ॥

ಶೃಣುಷ್ವ ಸರ್ವಂ ಬ್ರಹ್ಮೈವ ಸತ್ಯಂ ಸತ್ಯಂ ಶಿವಂ ಶಪೇ ।
ನಿಶ್ಚಯಂ ಆತ್ಮಯೋಗೀಂದ್ರ ಅನ್ಯತ್ಕಿಂಚ ನ ಕಿಂಚನ ॥೧॥

ಸರ್ವಮಾತ್ಮೈವ ಶುದ್ಧಾತ್ಮಾ ಸರ್ವಂ ಚಿನ್ಮಾತ್ರಮದ್ವಯಂ ।
ನಿತ್ಯನಿರ್ಮಲಶುದ್ಧಾತ್ಮಾ ಅನ್ಯತ್ಕಿಂಚನ ಕಿಂಚನ ॥೨॥

ಅಣುಮಾತ್ರಂ ಸ್ವರೂಪಂ ಚ ಅಣುಮಾತ್ರಮಿದಂ ಧ್ರುವಂ ।
ಅಣುಮಾತ್ರಶರೀರಂ ಚ ಅನ್ಯತ್ಕಿಂಚ ನ ಕಿಂಚನ ॥೩॥

---

## ಹದಿನಾಲ್ಕನೆಯ ಅಧ್ಯಾಯ

ಆತ್ಮಯೋಗಿಗಳಲ್ಲಿ ಉತ್ತಮನಾದ ಎಲೈ ನಿದಾಘಮುನಿಯೇ ಕೇಳು, ಜಗತ್ತೆಲ್ಲವೂ ಬ್ರಹ್ಮವಸ್ತುವೇ. ಇದು ನಿಶ್ಚಯವು. ಇದು ಸತ್ಯವು. ಶಿವನ ಆಣೆಯಾಗಿಯೂ ಹೇಳುತ್ತೇನೆ. ಬ್ರಹ್ಮನ ಹೊರತು ಯಾವ ವಸ್ತುವೂ ಜಗತ್ತಿನಲ್ಲಿ ಇಲ್ಲ. ॥೧॥

ಎಲ್ಲವೂ ಶುದ್ಧವಾದ ಆತ್ಮಸ್ವರೂಪವು. ಎಲ್ಲವೂ ಜ್ಞಾನಮೂರ್ತಿಯಾದ ಅದ್ವಿತೀಯನಾದ ಆತ್ಮನೇ. ನಿತ್ಯನೂ ನಿರ್ಮಲನೂ ಆದ ಆತ್ಮನಿಗಿಂತಲೂ ಹೊರತಾಗಿ ಯಾವ ವಸ್ತುವೂ ಲೋಕದಲ್ಲಿ ಇಲ್ಲ. ॥೨॥

ಅತಿ ಚಿಕ್ಕದಾದಂತಹ ವಸ್ತುವೂ ಆತ್ಮನೇ. ಅತಿ ಚಿಕ್ಕ ಶರೀರವೂ (ಮನಸ್ಸೂ) ಆತ್ಮನೇ. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೩॥

ಅಣುಮಾತ್ರಮಚಿಂತ್ಯಾತ್ಮಾ ಸರ್ವಬಾಹ್ಯಾಣುಮಾತ್ರಕಂ ।
ಅಣುಮಾತ್ರಮಸತ್ಕಲ್ಪೋ ಅನ್ಯತ್ಕಿಂಚನ ಕಿಂಚನ ॥೪॥

ಚೈತನ್ಯಮಾತ್ರಂ ಸಂಕಲ್ಪಂ ಚೈತನ್ಯಂ ಪರಮಂ ಪದಂ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೫॥

ಚೈತನ್ಯಮಾತ್ರಂ ಸಂಕಲ್ಪಂ ಚೈತನ್ಯಂ ಸಕಲಂ ಸ್ವಯಂ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೬॥

ಆನಂದಶ್ಚಾಹಮೇವಾಸ್ಮಿ ಅಹಮೇವ ಚಿದವ್ಯಯಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೭॥

ಅಹಮೇವ ಹಿ ಗುಪ್ತಾತ್ಮಾ ಅಹಮೇವ ನಿರಂತರಂ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೮॥

---

ಅತಿ ಚಿಕ್ಕದಾದ ವಸ್ತುವೆಲ್ಲವೂ ಅಚಿಂತ್ಯನಾದ ಆತ್ಮನೇ. ಆತ್ಮನ ಹೊರತಾಗಿ ಅತಿ ಚಿಕ್ಕದು ಎಂಬಾವ ವಸ್ತುವೂ ಇಲ್ಲ. ॥೪॥

ಸಂಕಲ್ಪವೆಲ್ಲವೂ ಚೈತನ್ಯ (ಆತ್ಮ) ರೂಪವಾದುದು. ಚೈತನ್ಯವೇ ಪರಮ ಪದವು. ಚೈತನ್ಯವೇ ಪರಮಾನಂದವು. ಅದು ಹೊರತಾಗಿ ಯಾವ ದೃಶ್ಯವಸ್ತುವೂ ಇಲ್ಲ. ॥೫॥

ಸಂಕಲ್ಪವೆಲ್ಲವೂ ಚೈತನ್ಯವು. ಜಗತ್ತೆಲ್ಲವೂ ಚೈತನ್ಯರೂಪವಾದುದು. ಚೈತನ್ಯವೇ ಪರಮಪ್ರಮಾಣವು, ಪರಮಾನಂದವು. ॥೬॥

ಆ ಆನಂದವೇ ನಾನು. ಜ್ಞಾನಮೂರ್ತಿಯಾದ ಮತ್ತು ಅವಿನಾಶಿಯಾದ ಆತ್ಮನು ನಾನು. ಆತ್ಮನೇ ಆನಂದರೂಪನು. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೭॥

ಇಂದ್ರಿಯಗಳಿಗೆ ಅಗೋಚರನಾದ ಆತ್ಮನು ನಾನು. ಯಾವಾಗಲೂ ಇರುವವನು ನಾನು. ಪರಮಾನಂದರೂಪನು ನಾನು. ನನ್ನ ಹೊರತು ಬೇರಾವ ವಸ್ತುವೂ ಇಲ್ಲ. ॥೮॥

ಅಹಮೇವ ಪರಂಬ್ರಹ್ಮ ಅಹಮೇವ ಗುರೋರ್ಗುರುಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೯॥

ಅಹಮೇವಾಖಿಲಾಧಾರೋ ಅಹಮೇವ ಸುಖಾತ್ಸುಖಂ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೦॥

ಅಹಮೇವ ಹಿ ಪೂರ್ಣಾತ್ಮಾ ಅಹಮೇವ ಪುರಾತನಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೧॥

ಅಹಮೇವ ಹಿ ಶಾಂತಾತ್ಮಾ ಅಹಮೇವ ಹಿ ಶಾಶ್ವತಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೨॥

ಅಹಮೇವ ಹಿ ಸರ್ವತ್ರ ಅಹಮೇವ ಹಿ ಸುಸ್ಥಿರಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೩॥

ಅಹಮೇವ ಹಿ ಜೀವಾತ್ಮಾ ಅಹಮೇವ ಪರಾತ್ಪರಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೪॥

---

ನಾನೇ ಪರಬ್ರಹ್ಮನು, ನಾನು ಗುರುಗಳಿಗೂ ಗುರುವಾದ ಪರಮಾತ್ಮನು. ಅತಿಶಯವಾದ ಆನಂದರೂಪನು ನಾನು. ನನ್ನ ಹೊರತು ಬೇರಾವ ವಸ್ತುವೂ ಇಲ್ಲ. ॥೯॥.

ನಾನು ಎಲ್ಲಕ್ಕೂ ಆಧಾರನು. ಅತ್ಯಂತ ಸುಖರೂಪನು ನಾನು. ಆನಂದ ಮಯನು ನಾನು. ನನ್ನ ಹೊರತು ಯಾವ ವಸ್ತುವೂ ಇಲ್ಲ. ॥೧೧॥

ಪರಿಪೂರ್ಣನಾದ ಆತ್ಮನು ನಾನು. ಅನಾದಿಪುರುಷನು ನಾನು. ನಾನು ಆನಂದರೂಪನು. ನನ್ನ ಹೊರತಾಗಿ ಬೇರಾವ ದೃಶ್ಯವಸ್ತುವೂ ಇಲ್ಲ. ॥೧೧॥

ಶಾಂತಮೂರ್ತಿಯು ನಾನು, ಶಾಶ್ವತವಾಗಿರುವವನು ನಾನು, ಆನಂದ ರೂಪನು ನಾನು, ನನ್ನ ಹೊರತಾಗಿ ಬೇರಾವ ದೃಶ್ಯವಸ್ತುವೂ ಇಲ್ಲ. ॥೧೨॥

ನಾನು ಎಲ್ಲೆಡೆಯಲ್ಲೂ ಇರುವೆನು. ಸ್ಥಿರವಾಗಿರುವವನು ನಾನೇ, ಪರಮಾನಂದರೂಪನು ನಾನು, ನನ್ನ ಹೊರತು ಬೇರಾವ ವಸ್ತುವೂ ಇಲ್ಲವು. ॥೧೨॥

ಜೀವಾತ್ಮನು ನಾನೇ, ನಾನೇ ಪರಮಾತ್ಮನು, ಆನಂದಸ್ವರೂಪನು, ಎಲ್ಲಕ್ಕೂ ಪ್ರಮಾಣವು ನಾನು, ನನ್ನ ಹೊರತಾಗಿ ಬೇರಾವ ವಸ್ತುವೂ ಇಲ್ಲವು. ॥೧೪॥

ಅಹಮೇವ ಹಿ ವಾಕ್ಯಾರ್ಥೋ ಅಹಮೇವ ಹಿ ಶಂಕರಃ ।
ಆನಂದಂ ಪರಮಂ ಮಾನಂ ಇದಂ ದೃಶ್ಯಂ ನ ಕಿಂಚನ ॥೧೫॥

ಅಹಮೇವ ಹಿ ದುರ್ಲಕ್ಷ್ಯಂ ಅಹಮೇವ ಪ್ರಕಾಶಕಃ ।
ಅಹಮೇವಾಹಮೇವಾಹಂ ಅಹಮೇವ ಸ್ವಯಂ ಸ್ವಯಂ ॥೧೬॥

ಅಹಮೇವ ಪರಾನಂದೋ ಅಹಮೇವ ಹಿ ಚಿನ್ಮಯಃ ।
ಅಹಮೇವ ಹಿ ಶುದ್ಧಾತ್ಮಾ ಅಹಮೇವ ಹಿ ಸನ್ಮಯಃ ॥೧೭॥

ಅಹಮೇವ ಹಿ ಶೂನ್ಯಾತ್ಮಾ ಅಹಮೇವ ಹಿ ಸರ್ವಗಃ ।
ಅಹಮೇವ ಹಿ ವೇದಾಂತ ಅಹಮೇವ ಹಿ ಚಿತ್ಪರಃ ॥೧೮॥

ಅಹಮೇವ ಹಿ ಚಿನ್ಮಾತ್ರಮಹಮೇವ ಹಿ ಚಿದ್ಘನಃ ।
ಅನ್ಯನ್ನ ಕಿಂಚಿಚ್ಚಿದ್ರೂಪಮಹಂ ಬಾಹ್ಯವಿವರ್ಜಿತಃ ॥೧೯॥

---

ವಾಕ್ಯಾರ್ಥವು ನಾನೇ, ಶಂಕರನು ನಾನೇ, ಸುಖಕರನು ನಾನು, ಆನಂದ ಸ್ವರೂಪನು ನಾನು, ನನ್ನ ಹೊರತಾಗಿ ಬೇರಾವ ದೃಶ್ಯವಸ್ತುವೂ ಇಲ್ಲವು. ॥೧೫॥

ಅಜ್ಞಾನಿಗಳಿಗೆ ಗೋಚರನಲ್ಲದವನು ನಾನು, ಸ್ವಯಂಪ್ರಕಾಶಸ್ವರೂಪನು ನಾನು. ನಾನು ನಾನೇ, "ನಾನು" ಎನ್ನುವ ಪದಾರ್ಥವೂ ನಾನೇ, "ಸ್ವಯಂ" ಎನ್ನುವವನೂ ನಾನೇ. ॥೧೬॥

ಆನಂದಮೂರ್ತಿಯು ನಾನೇ, ಜ್ಞಾನಮೂರ್ತಿಯೂ ನಾನೇ, ನಿರ್ಗುಣನೂ ನಾನೇ, ಸತ್ಯಸ್ವರೂಪನೂ ನಾನೇ. ॥೧೭॥

ಯಾವ ಗುಣಗಳೂ ಇಲ್ಲದ, ಯಾವ ವಿಕಾರವೂ ಇಲ್ಲದ ಶುದ್ಧಸ್ವರೂಪನು ನಾನು. ನಾನೇ ಎಲ್ಲ ಕಡೆಯಲ್ಲಿಯೂ ಇರುವವನು, ವೇದಾಂತವೂ ನಾನೇ, ಪರಮಾತ್ಮನೂ ನಾನು. ॥೧೮॥

ಜ್ಞಾನಮೂರ್ತಿಯು ನಾನು, ಕೇವಲ ಜ್ಞಾನಸ್ವರೂಪನು ನಾನು, ನನ್ನ ಹೊರತಾಗಿ ಯಾವ ವಸ್ತುವೂ ಜ್ಞಾನಸ್ವರೂಪವಲ್ಲವು. ನನಗೆ ಹೊರಗು ಎಂಬದು ಇರುವುದಿಲ್ಲ. ॥೧೯॥

ಅಹಂ ನ ಕಿಂಚಿದ್ಬ್ರಹ್ಮಾತ್ಮಾ ಅಹಂ ನಾಸ್ಯದಹಂ ಪರಂ।
ನಿತ್ಯಃ ಶುದ್ಧೋ ವಿಮುಕ್ತೋಽಹಂ ನಿತ್ಯತೃಪ್ತೋ ನಿರಂಜನಃ ॥೨೦॥

ಆನಂದಂ ಪರಮಾನಂದಂ ಅನ್ಯತ್ಕಿಂಚನ ಕಿಂಚ ನ।
ನಾಸ್ತಿ ಕಿಂಚಿನ್ನಾಸ್ತಿ ಕಿಂಚಿನ್ನಾಸ್ತಿ ಕಿಂಚಿತ್ಪರಾತ್ಪರಾತ್ ॥೨೧॥

ಆತ್ಮೈವೇದಂ ಜಗತ್ಸರ್ವಮಾತ್ಮೈವೇಽಹಂ ಮನೋಭ್ರಮಂ।
ಆತ್ಮೈವೇದಂ ಸುಖಂ ಸರ್ವಮಾತ್ಮೈವೇದಮಿದಂ ಜಗತ್ ॥೨೨॥

ಬ್ರಹ್ಮೈವ ಸರ್ವಂ ಚಿನ್ಮಾತ್ರಮಹಂ ಬ್ರಹ್ಮೈವ ಕೇವಲಂ।
ಆನಂದಂ ಪರಮಾನಂದಮನ್ಯತ್ಕಿಂಚನ ಕಿಂಚ ನ ॥೨೩॥

ದೃಶ್ಯಂ ಸರ್ವಂ ಪರಂ ಬ್ರಹ್ಮ ದೃಶ್ಯಂ ನಾಸ್ತ್ಯೇವ ಸರ್ವದಾ।
ಬ್ರಹ್ಮೈವ ಸರ್ವಂ ಸಂಕಲ್ಪೋ ಬ್ರಹ್ಮೈವ ನ ಪರಂ ಕ್ವಚಿತ್ ॥೨೪॥

---

ನಾನು ಸ್ವಲ್ಪ ಮಾತ್ರ ಬ್ರಹ್ಮಸ್ವರೂಪನೆಂದಲ್ಲ, ಅಂದರೆ ಬ್ರಹ್ಮನ ಅಂಶವೆಂದಲ್ಲ, ನಾನೇ ಸರ್ವಾತ್ಮನಾದ ಬ್ರಹ್ಮನು. ಬೇರೆಯವನು ನಾನಲ್ಲ, ನಿತ್ಯನು ನಾನು, ಶುದ್ಧನು ನಾನು, ಮುಕ್ತನು ನಾನು, ಸದಾ ತೃಪ್ತನು ನಾನು, ನಿರ್ಮಲನು ನಾನು. ॥೨೦॥

ಆನಂದಮಯನಾದ ಪರಮಾತ್ಮನನ್ನು ಹೊರತು ಬೇರಾವ ದೃಶ್ಯವಸ್ತುವೂ ಇಲ್ಲ, ಆ ಪರವಸ್ತುವೊಂದೇ ಇರುವುದು. ॥೨೧॥

ಈ ಜಗತ್ತೆಲ್ಲವೂ ಆತ್ಮನೇ, ಮನಸ್ಸಿನ ಈ ಭ್ರಾಂತಿಯೆಲ್ಲವೂ ಆತ್ಮನೇ, ಎಲ್ಲ ಸುಖಗಳೂ ಆತ್ಮನೇ, ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೨೨॥

ಜ್ಞಾನಸ್ವರೂಪನಾದ ಬ್ರಹ್ಮನೊಬ್ಬನೇ ಇರುವವನು. ಮಿಕ್ಕೆಲ್ಲವೂ ಆ ಆನಂದರೂಪನಾದ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ.॥೨೩॥

ಕಣ್ಣಿಗೆ ಕಾಣಿಸುವ ವಸ್ತುವೆಲ್ಲವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವ ದೃಶ್ಯವಸ್ತುವೂ ಇಲ್ಲವು, ಎಲ್ಲ ಸಂಕಲ್ಪಗಳೂ ಬ್ರಹ್ಮನೇ. ॥೨೪॥

ಬ್ರಹ್ಮೈವ ಬ್ರಹ್ಮ ಚಿದ್ರೂಪಂ ಚಿದೇವ ಚಿನ್ಮಯಂ ಜಗತ್ ।
ಆನಂದಂ ಪರಮಾನಂದಂ ಅನ್ಯತ್ಕಿಂಚನ ಕಿಂಚನ ॥೨೫॥

ಅಸದೇವ ಜಗತ್ಸರ್ವಂ ಅಸದೇವ ಪ್ರಪಂಚಕಂ ।
ಅಸದೇವಾಹಮೇವಾಸ್ಮಿ ಅಸದೇವ ತ್ವಮೇವ ಹಿ ॥೨೬॥

ಅಸದೇವ ಮನೋವೃತ್ತಿರಸದೇವ ಗುಣಾಗುಣಾಃ ।
ಅಸದೇವ ಮಹೀ ಸರ್ವಾ ಅಸದೇವ ಜಲಂ ಸದಾ ॥೨೭॥

ಅಸದೇವ ಜಗತ್ಖಾನಿ ಅಸದೇವ ಚ ತೇಜಕಂ ।
ಅಸದೇವ ಸದಾವಾಯುರಸದೇವೇದಮಿತ್ಯಪಿ ॥೨೮॥

ಅಹಂಕಾರಮಸದ್ಬುದ್ಧಿಃ ಬ್ರಹ್ಮೈವ ಜಗತಾಂ ಗಣಃ ।
ಅಸದೇವ ಸದಾ ಚಿತ್ತಮಾತ್ಮೈವೇದಂ ನ ಸಂಶಯಃ ॥೨೯॥

ಅಸದೇವ ಸುರಾಸ್ಸರ್ವೇ ಅಸದೇವೇಶ್ವರಾಕೃತಿಃ ।
ಅಸದೇವ ಸದಾ ವಿಶ್ವಮಸದೇವ ಸದಾ ಹರಿಃ ॥೩೦॥

---

ಆ ಜ್ಞಾನರೂಪನಾದ ಆತ್ಮನು ಬ್ರಹ್ಮನೇ, ಜ್ಞಾನವೂ ಬ್ರಹ್ಮನೇ, ಜಗತ್ತೂ ಬ್ರಹ್ಮನೇ, ಆನಂದಮೂರ್ತಿಯಾದ ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೨೫॥

ಜಗತ್ತೆಲ್ಲವೂ ಅಸತ್ಯವು, ಪ್ರಪಂಚವೆಲ್ಲವೂ ಅಸತ್ಯ, ನಾನು ಎಂಬುದೂ ಅಸತ್ಯ, ನೀನು ಎಂಬದೂ ಅಸತ್ಯ, ಬ್ರಹ್ಮನೋರ್ವನೇ ಸತ್ಯ. ॥೨೬॥

ಮನಸ್ಸಿನ ಭಾವನೆಗಳೆಲ್ಲವೂ ಅಸತ್ಯವು. ಗುಣ ಅವಗುಣಗಳೂ ಅಸತ್ಯ, ಭೂಮಿಯೆಲ್ಲವೂ ಅಸತ್ಯ, ಜಲವೆಲ್ಲವೂ ಅಸತ್ಯ. ॥೨೭॥

ತೇಜಸ್ಸೆಲ್ಲವೂ ಅಸತ್ಯ, ವಾಯುವು ಅಸತ್ಯ, ಆಕಾಶವೂ ಅಸತ್ಯ, ಇದು ಎನ್ನುವುದೆಲ್ಲವೂ ಅಸತ್ಯ, ಬ್ರಹ್ಮನೋರ್ವನೇ ಸತ್ಯ. ॥೨೮॥

ಅಹಂಕಾರವೂ ಅಸತ್ಯ, ಬುದ್ಧಿಯೂ ಅಸತ್ಯ, ಮನಸ್ಸೂ ಅಸತ್ಯ, ಬ್ರಹ್ಮನೋರ್ವನೇ ಸತ್ಯ, ಈ ಜಗತ್ತೆಲ್ಲವೂ ಆತ್ಮನೇ. ॥೨೯॥

ದೇವತೆಗಳೆನ್ನುವವರೂ ಅಸತ್ಯ, ಈಶ್ವರನೆನ್ನುವುದೂ ಅಸತ್ಯ, ಜಗತ್ತೆಲ್ಲವೂ ಅಸತ್ಯ, ನಾರಾಯಣನೂ ಅಸತ್ಯ. ಇವರಾರೂ ಸ್ಥಿರರಲ್ಲ. ॥೩೦॥

ಅಸದೇವ ಸದಾ ಬ್ರಹ್ಮಾ ತತ್ಸೃಷ್ಟಿರಸದೇವ ಹಿ ।
ಅಸದೇವ ಮಹಾದೇವ ಅಸದೇವ ಗಣೇಶ್ವರಃ ॥೩೧॥

ಅಸದೇವ ಸದಾ ಚೋಮಾ ಅಸತ್ಸ್ಕಂದೋ ಗಣೇಶ್ವರಾಃ ।
ಅಸದೇವ ಸದಾ ಜೀವ ಅಸದೇವ ಹಿ ದೇಹಕಂ ॥೩೨॥

ಅಸದೇವ ಸದಾ ವೇದಾ ಅಸದ್ವೇದಾಂತಮೇವ ಹಿ ।
ಧರ್ಮಶಾಸ್ತ್ರಂ ಪುರಾಣಂ ಚ ಅಸತ್ಯೇ ಸತ್ಯವಿಭ್ರಮಃ ॥೩೩॥

ಅಸದೇವ ಹಿ ಸರ್ವಂ ಚ ಅಸದೇವ ಪರಂಪರಾ ।
ಅಸದೇವೇದಮಾದ್ಯಂತಮಸದೇವ ಮುನೀಶ್ವರಾಃ ॥೩೪॥

ಅಸದೇವ ಸದಾ ಲೋಕಾ ಲೋಕ್ಯಾ ಅಪ್ಯಸದೇವ ಹಿ ।
ಅಸದೇವ ಹಿ ಸುಖಂ ದುಃಖಮುಸದೇವ ಜಯಾಜಯೌ ॥೩೫॥

ಅಸದೇವ ಪರಂ ಬಂಧಮಸನ್ಮುಕ್ತಿರಪಿ ಧ್ರುವಂ ।
ಅಸದೇವ ಮೃತಿರ್ಜನ್ಮ ಅಸದೇವ ಜಡಾಜಡಂ ॥೩೬॥

---

ಬ್ರಹ್ಮದೇವನೂ ಅಸತ್ಯ, ಅವನ ಸೃಷ್ಟಿಯೂ ಅಸತ್ಯ, ಮಹಾದೇವನೂ ಅಸತ್ಯ, ವಿನಾಯಕನೂ ಅಸತ್ಯ. ॥೩೧॥

ಪಾರ್ವತಿಯೂ ಅಸತ್ಯ, ಸ್ಕಂದನೂ ಅಸತ್ಯ, ಪ್ರಮಥಗಣಗಳೂ ಅಸತ್ಯರು, ಜೀವನೂ ಅಸತ್ಯ, ದೇಹವೂ ಅಸತ್ಯ. ॥೩೨॥

ವೇದಗಳೂ ಅಸತ್ಯ, ವೇದಾಂತವೂ ಅಸತ್ಯ, ಧರ್ಮಶಾಸ್ತ್ರಗಳೂ ಪುರಾಣಗಳೂ ಅಸತ್ಯವು, ನಾವು ಅಸತ್ಯವಾದುದನ್ನು ಸತ್ಯವೆಂದು ಭ್ರಮಿಸಿ ಕೆಡುತ್ತಿದ್ದೇವೆ. ಬ್ರಹ್ಮನ ಹೊರತು ಯಾವುದೂ ಸತ್ಯವಲ್ಲ. ॥೩೩॥

ಎಲ್ಲವೂ ಅಸತ್ಯ, ಪರಂಪರೆಯೆನ್ನುವುದೂ ಅಸತ್ಯ, ಮೊದಲು ಕೊನೆಯೆನ್ನುವುದೂ ಅಸತ್ಯ, ಮುನೀಶ್ವರರೂ ಅಸತ್ಯ. ॥೩೪॥

ಲೋಕಗಳೂ ಲೋಕವಾಸಿಗಳೂ ಅಸತ್ಯ. ಸುಖದುಃಖಗಳೂ ಅಸತ್ಯ, ಜಯ ಅಪಜಯಗಳೂ ಅಸತ್ಯ, ಆತ್ಮನೊಬ್ಬನೇ ಸತ್ಯ. ॥೩೫॥

ಬಂಧನವೂ ಅಸತ್ಯ, ಮುಕ್ತಿಯೂ ಅಸತ್ಯ, ಮರಣವೂ ಅಸತ್ಯ, ಜನನವೂ ಅಸತ್ಯ, ಜಡಚೇತನಗಳೆನ್ನುವುದೂ ಅಸತ್ಯಗಳೇ. ॥೩೬॥

ಅಸದೇವ ಜಗತ್ಸರ್ವಮಸದೇವಾತ್ಮಭಾವನಾ ।
ಅಸದೇವ ಚ ರೂಪಾಣಿ ಅಸದೇವ ಪದಂ ಶುಭಂ ॥೩೭॥

ಅಸದೇವ ಸದಾಚಾಹಂ ಅಸದೇವ ತ್ವಮೇವ ಹಿ ।
ಅಸದೇವ ಹಿ ಸರ್ವತ್ರ ಅಸದೇವ ಚಲಾಚಲಂ ॥೩೮॥

ಅಸಚ್ಚ ಸಕಲಂ ಭೂತಮಸತ್ಯಂ ಸಕಲಂ ಫಲಂ ।
ಅಸತ್ಯಮಖಿಲಂ ವಿಶ್ವಮಸತ್ಯಮಖಿಲಂ ಗುಣಂ ॥೩೯॥

ಅಸತ್ಯಮಖಿಲಂ ಶೇಷಮಸತ್ಯಮಖಿಲಂ ದ್ವಯಂ ।
ಅಸತ್ಯಮಖಿಲಂ ಪ್ರಾಪ್ತಂ ಅಸತ್ಯಂ ಶ್ರವಣಂತ್ರಯಂ ॥೪೦॥

ಅಸತ್ಯಂ ಚ ಸಜಾತೀಯಂ ವಿಜಾತೀಯಮಸತ್ಸದಾ ।
ಅಸತ್ಯಮಧಿಕಾರಶ್ಚ ಅಸತ್ಯಾ ವಿಷಯಾಸ್ಸದಾ ॥೪೧॥

---

ಆತ್ಮನನ್ನು ತಿಳಿಯುತ್ತೇನೆ, ಧ್ಯಾನಿಸುತ್ತೇನೆ — ಎಂದು ಮೊದಲಾದ ಆತ್ಮ ಭಾವನೆಗಳೆಲ್ಲವೂ ಅಸತ್ಯ. ರೂಪಗಳು ಅಸತ್ಯ, ಶುಭಪದವಿಯೆನ್ನುವುದೂ ಅಸತ್ಯವೇ. ॥೩೭॥

ನಾನು ಎಂಬುದೂ ಅಸತ್ಯ, ನೀನೂ ಎಂಬುದೂ ಅಸತ್ಯ, ಎಲ್ಲೆಲ್ಲಿಯೂ ಎನ್ನುವುದೂ ಅಸತ್ಯ, ಚಲಿಸುವುದು, ಚಲಿಸದಿರುವುದು ಎನ್ನುವುದೂ ಅಸತ್ಯವೇ. ॥೩೮॥

ಭೂತಗಳೆಲ್ಲವೂ ಅಸತ್ಯ, ಫಲವೆಲ್ಲವೂ ಅಸತ್ಯ, ಪ್ರಪಂಚವೆಲ್ಲವೂ ಅಸತ್ಯ, ಗುಣಗಳೆಲ್ಲವೂ ಅಸತ್ಯ. ॥೩೯॥

ಉಳಿದುದು ಎನ್ನುವುದೆಲ್ಲವೂ ಅಸತ್ಯ, ಎರಡು-ಮೂರು ಎನ್ನುವುದೆಲ್ಲವೂ ಅಸತ್ಯ, ಪಡೆದೆನು ಎನ್ನುವುದೆಲ್ಲವೂ ಅಸತ್ಯ, ಕೇಳುವುದು ಎನ್ನುವುದೆಲ್ಲವೂ ಅಸತ್ಯ. ॥೪೦॥

ಒಂದೇ ಜಾತಿಯವು ಎನ್ನುವುದು ಅಸತ್ಯ, ಬೇರೆ ಜಾತಿಯದು ಎನ್ನುವುದು ಅಸತ್ಯ, ಅಧಿಕಾರವೆಲ್ಲವೂ ಅಸತ್ಯ, ವಿಷಯಗಳೆಲ್ಲವೂ ಅಸತ್ಯ. ॥೪೧॥

ಅಸದೇವ ಹಿ ದೇವಾದ್ಯಾ ಅಸದೇವ ಪ್ರಯೋಜನಂ ।
ಅಸದೇವ ಶಮಂ ನಿತ್ಯಮಸದೇವ ದಮೋಽನಿಶಂ ॥೪೨॥

ಅಸದೇವ ಸಸಂದೇಹಮಸದ್ಯುದ್ಧಂ ಸುರಾಸುರಂ ।
ಅಸದೇವೇಶಭಾವಂ ಚಾಸದೇವೋಪಾಸ್ಯಮೇವ ಹಿ ॥೪೩॥

ಅಸಚ್ಚ ಕಾಲದೇಶಾದಿ ಅಸತ್ಕ್ಷೇತ್ರಾದಿಭಾವನಂ ।
ತಜ್ಜನ್ಯಧರ್ಮಾಧರ್ಮೌ ಚ ಅಸದೇವ ವಿನಿರ್ಣಯಃ ॥೪೪॥

ಅಸತ್ಯಂ ಲಿಂಗದೇಹಂ ಚ ಸತ್ಯಂ ಸತ್ಯಂ ಶಿವಂ ಶಪೇ ।
ಅಸತ್ಯಂ ಸ್ವರ್ಗನರಕೌ ಅಸತ್ಯಂ ತತ್ಸುಖಂ ಭಯಂ ॥೪೫॥

ಅಸತ್ಯಂ ಸರ್ವಕರ್ಮಾಣಿ ಅಸತ್ಯಂ ಸ್ವಪ್ನವಿಭ್ರಮಾ ।
ಅಸತ್ಯಂ ಚಿತ್ತಸದ್ಭಾವಮಸತ್ಯಂ ಸ್ಥೂಲದೇಹಕಂ ॥೪೬॥

---

ದೇವತೆಗಳು ಮೊದಲಾದವರು ಅಸತ್ಯರು, ಪ್ರಯೋಜನವೆಲ್ಲವೂ ಅಸತ್ಯ, ಅಂತರಿಂದ್ರಿಯನಿಗ್ರಹವು ಅಸತ್ಯ, ಬಹಿರಿಂದ್ರಿಯ ನಿಗ್ರಹವೂ ಅಸತ್ಯ. ॥೪೨॥

ಸಂದೇಹವು ಅಸತ್ಯ, ದೇವಾಸುರರ ಯುದ್ಧವೆನ್ನುವುದೂ ಅಸತ್ಯ, ಈಶ್ವರತ್ವವೂ ಅಸತ್ಯ, ಉಪಾಸ್ಯವಸ್ತುವೆನ್ನುವುದೂ ಅಸತ್ಯ. ॥೪೩॥

ಕಾಲ ದೇಶ ಮೊದಲಾದುವುಗಳು ಅಸತ್ಯ, ತೀರ್ಥಕ್ಷೇತ್ರಾದಿ ಭಾವನೆಯೂ ಅಸತ್ಯ, ಆದರಿಂದುಂಟಾಗುವವೆನ್ನುವ ಧರ್ಮ ಮತ್ತು ಅಧರ್ಮಗಳೂ ಅಸತ್ಯವು. ॥೪೪॥

ಕಾರಣಶರೀರವೆನ್ನುವುದೂ ಅಸತ್ಯ, ಸ್ವರ್ಗ-ನರಕಗಳೂ ಅಸತ್ಯ, ಅವುಗಳ ಸುಖದುಃಖಗಳೂ ಅಸತ್ಯ, ಇದು ಸತ್ಯವಾದ ಮಾತು. ಶಿವನಾಣೆಯಾಗಿಯೂ ನಿಶ್ಚಯವನ್ನೇ ನಾನು ಹೇಳುತ್ತಿದ್ದೇನೆ. ॥೪೫॥

ಎಲ್ಲ ಕರ್ಮಗಳೂ ಅಸತ್ಯವು, ಸ್ವಪ್ನ ಭ್ರಮೆಯೆಲ್ಲವೂ ಅಸತ್ಯ, ಸೂಕ್ಷ್ಮದೇಹವೆನ್ನುವುದು ಅಸತ್ಯ, ಸ್ಥೂಲದೇಹವೆಂಬುವುದೂ ಅಸತ್ಯವು. ॥೪೬॥

ಅಸತ್ಯಂ ಗ್ರಾಹಕಂ ಸರ್ವಮಸತ್ಯಂ ಗ್ರಾಹ್ಯರೂಪಕಂ ।
ಅಸತ್ಯಂ ಸತ್ಯವದ್ಭಾತಂ ಅಸತ್ಯಂ ತೇ ಶಿವಂ ಶಪೇ ॥೪೭॥

ಅಸತ್ಯಂ ವರ್ತಮಾನಾಖ್ಯಮಸತ್ಯಂ ಭೂತರೂಪಕಂ ।
ಅಸತ್ಯಂ ತದ್ಭವಿಷ್ಯಾಖ್ಯಂ ಸತ್ಯಂ ಸತ್ಯಂ ಶಿವಂ ಶಪೇ ॥೪೮॥

ಅಸತ್ಪೂರ್ವಮಸನ್ಮಧ್ಯಮಸದಂತಮಿದಂ ಜಗತ್ ।
ಅಸತ್ಯಂ ತತ್ಸದಾಪ್ರಾಯಮಸತ್ಯಂ ತನ್ನ ಸಂಶಯಃ ॥೪೯॥

ಅಸತ್ಯಂ ತು ಸದಾ ಜ್ಞಾನಮಜ್ಞಾನಂ ಜ್ಞೇಯಮೇವ ಚ ।
ಅಸತ್ಯಂ ಸರ್ವದಾ ವಿಶ್ವಮಸತ್ಯಂ ಸರ್ವದಾ ಜಡಂ ॥೫೦॥

ಅಸತ್ಯಂ ಸರ್ವದಾ ದೃಶ್ಯಂ ಭಾತಿ ಶೌರಂಗಶೃಂಗವತ್ ।
ಅಸತ್ಯಂ ಸರ್ವದಾ ಭಾವಮಸತ್ಯಂ ಕೋಶಸಂಭವಂ ॥೫೧॥

---

ಗ್ರಹಿಸು (ತಿಳಿದುನೋಡು) ವಂತಹುದೆಲ್ಲ (ಇಂದ್ರಿಯ)ವೂ ಅಸತ್ಯವು, ಅವುಗಳಿಂದ ತಿಳಿಯಲ್ಪಡುವವೆನ್ನುವ ವಸ್ತುಗಳೆಲ್ಲವೂ ಅಸತ್ಯ, ಅಂದರೆ ಅಸತ್ಯವಾದ ವಸ್ತುವು ಸತ್ಯವಾಗಿರುವಂತೆ ನಮಗೆ ಕಾಣಿಸುವುದು. ॥೪೭॥

ವರ್ತಮಾನವೆನ್ನುವುದು ಅಸತ್ಯವು, ಭೂತವೆನ್ನುವುದೂ ಅಸತ್ಯವು, ಭವಿಷ್ಯತ್ ಎನ್ನುವಂತಹುದೂ ಅಸತ್ಯವು, ಶಿವನಾಣೆಯಾಗಿ ಇದು ನಿಜವಾದ ಮಾತು. ॥೪೮॥

ಮೊದಲು ಎನ್ನುವುದೂ ಅಸತ್ಯವು, ನಡುವೆ ಎನ್ನುವುದೂ ಅಸತ್ಯ, ಕೊನೆಯೆನ್ನುವುದೂ ಅಸತ್ಯವು, ಸತ್ಯದಂತೆ ಕಾಣಿಸುವುದೆಲ್ಲವೂ ಅಸತ್ಯವು. ॥೪೯॥

ಜ್ಞಾನವು ಅಸತ್ಯ, ಅಜ್ಞಾನವು ಅಸತ್ಯ, ಅವುಗಳ ವಿಷಯವೂ ಅಸತ್ಯವು, ಜಡ-ಚೇತನಗಳೆನ್ನುವವೆಲ್ಲವೂ ಅಸತ್ಯ, ಇದು ನಿಶ್ಚಯವಾದ ಮಾತು. ॥೫೦॥

ಕುದುರೆಯ ಕೊಂಬಿನಂತೆ ಈ ಕಣ್ಣಿಗೆ ಕಾಣಿಸುವ ದೃಶ್ಯವಸ್ತುಗಳೆಲ್ಲವೂ ಅಸತ್ಯ, ಭಾವಗಳೆಲ್ಲವೂ ಅಸತ್ಯ, ಕೋಶಗಳೆಲ್ಲವೂ ಅಸತ್ಯ. ॥೫೧॥

ಅಸತ್ಯಂ ಸಕಲಂ ಮಂತ್ರಂ ಸತ್ಯಂ ಸತ್ಯಂ ನ ಸಂಶಯಃ ।
ಆತ್ಮನೋಽನ್ಯಜ್ಜಗನ್ನಾಸ್ತಿ ನಾಸ್ತ್ಯನಾತ್ಮಮಿದಂ ಸದಾ ॥೫೨॥

ಆತ್ಮನೋಽನ್ಯಸ್ತ್ಯ್ವಪೈವೇದಂ ಸತ್ಯಂ ಸತ್ಯಂ ನ ಸಂಶಯಃ ।
ಆತ್ಮನೋಽನ್ಯತ್ಸುಖಂ ನಾಸ್ತಿ ಆತ್ಮನೋಽನ್ಯನ್ನ ಕಿಂಚನ ॥೫೩॥

ಆತ್ಮನೋಽನ್ಯದ್ಗತಿರ್ನಾಸ್ತಿ ಸ್ಥಿತಮಾತ್ಮನಿ ಸರ್ವದಾ ।
ಆತ್ಮನೋಽನ್ಯನ್ನಹಿ ಕ್ವಾಪಿ ಆತ್ಮನೋಽನ್ಯತ್ತೃಣಂ ನಹಿ ॥೫೪॥

ಆತ್ಮನೋಽನ್ಯನ್ನ ವೈ ಕಿಂಚಿತ್ ಕ್ವಚಿದಪ್ಯಾತ್ಮನೋ ನಹಿ ।
ಆತ್ಮಾನಂದಪ್ರಕರಣಮೇತತ್ತೇಽಭಿಹಿತಂ ಮಯಾ ॥೫೫॥

ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ।
ಸ ಕೃಚ್ಛ್ರವಣಮಾತ್ರೇಣ ಸದ್ಯೋ ಬೋಧಂ ವಿಮುಕ್ತಿದಂ ॥೫೬॥

---

ಮಂತ್ರಗಳೆಲ್ಲವೂ ಅಸತ್ಯವು. ಆತ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ಅನಾತ್ಮವೆನ್ನುವ ಯಾವ ವಸ್ತುವೂ ಇಲ್ಲ, ಆತ್ಮನೇ ಅನಾತ್ಮವಾಗಿ ತೋರುವನು. ॥೫೨॥

ಆತ್ಮನ ಹೊರತಾಗಿ ಕಾಣುವುದೆಲ್ಲವೂ ಸುಳ್ಳು, ಆತ್ಮನ ಹೊರತಾಗಿ ಸುಖವೂ ಇಲ್ಲ, ಯಾವುದೂ ಇಲ್ಲ, ಇದು ನಿಶ್ಚಯವಾದ ಮಾತು. ॥೫೩॥

ಆತ್ಮನ ಹೊರತಾಗಿ ಯಾವ ಗತಿಯೂ ಇಲ್ಲವು, ಆತ್ಮನಲ್ಲಿಯೇ ಎಲ್ಲವೂ ಅಡಗಿರುವುದು, ಆತ್ಮನ ಹೊರತಾಗಿ ಎಲ್ಲಿಯೂ ಯಾವುದೊಂದು ಹುಲ್ಲುಕಡ್ಡಿಯೂ ಕಾಣುವುದಿಲ್ಲವು. ॥೫೪॥

ಸಾರಾಂಶವೇನೆಂದರೆ ಆತ್ಮನ ಹೊರತಾಗಿ ಪ್ರಪಂಚದಲ್ಲಿ ಎಲ್ಲಿಯೂ ಯಾವ ವಸ್ತುವೂ ಇಲ್ಲವು. ಹೀಗೆ ನಿನಗೆ ಆತ್ಮಾನಂದಪ್ರಕರಣವನ್ನು ಹೇಳಿರುವೆನು. ॥೫೫॥

ವಿದ್ವಾಂಸನು ಈ ಪ್ರಕರಣವನ್ನೊಂದು ಬಾರಿ ಕೇಳಿದರೂ ಅವನು ಬ್ರಹ್ಮನೇ ಆಗುವನು. ಅಜ್ಞಾನಿಯು ಒಂದು ಬಾರಿಯಾದರೂ ಇದನ್ನು ಕೇಳಿದರೆ ಮುಕ್ತಿ ಜ್ಞಾನವನ್ನು ಪಡೆಯುವನು. ॥೫೬॥

ಏತದ್ಗ್ರಂಥಾರ್ಥತನ್ಮಾತ್ರಂ ಗೃಣನ್ಪಾಪೈರ್ವಿಮುಚ್ಯತೇ ।
ಸಕೃಚ್ಛ್ರವಣಮಾತ್ರೇಣ ಸದ್ಯೋ ಬೋಧಂ ವಿಮುಕ್ತಿದಂ ॥೫೭॥

॥ ಸೂತ ಉವಾಚ ॥

ಪೂರ್ಣಂ ಸತ್ಯಂ ಮಹೇಶಂ ಭಜ ನಿಯತಹೃದಾ ಯೋಂತರಾಯೈರ್ವಿಹೀನಃ
ಸೋ ನಿತ್ಯಂ ನಿರ್ವಿಕಲ್ಪೋ ಭವತಿ ಭುವಿ ಸದಾ ಬ್ರಹ್ಮಭೂತೋಯತಾತ್ಮಾ।
ವಿಚ್ಛಿನ್ನಗ್ರಂಥಿರೀಶೋ ಶಿವವಿಮಲಪದೇ ವಿದ್ಯತೇ ಭಾಸತೇಂತಃ
ಆರಾನ್ನೋಂತರ್ಭವತಿ ನಿಯತಂ ವಿಶ್ವಭೂತೋ ಮೃತಶ್ಚ ॥೫೮॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಚತುರ್ದಶೋಽಧ್ಯಾಯಃ

---

ಈ ಪ್ರಕರಣದ ಅರ್ಥವನ್ನು ತಿಳಿದರೂ ಸಾಕು, ಅಂತಹವನು ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುವನು. ॥೫೭॥

ಯಾವನು ಪೂರ್ಣನೂ ಸತ್ಯನೂ ಆದ ಶಂಕರನನ್ನು ಶುದ್ಧಮನಸ್ಸಿನಿಂದ ನಿತ್ಯವೂ ಭಜಿಸುವನೋ, ಅವನ ಅಜ್ಞಾನಗ್ರಂಥಿಯು ಕತ್ತರಿಸಿ ಅವನು ಜೀವನ್ಮುಕ್ತನಾಗುವನು. ಮುಂದೆ ಮೃತನಾದ ಮೇಲೆ ಆತನು ವಿದೇಹಕೈವಲ್ಯವನ್ನು ಪಡೆದು ಸಾಕ್ಷಾತ್ ಬ್ರಹ್ಮನೇ ಆಗುವನು. ಅಲ್ಲಿಂದ ಮುಂದೆ ಅವನಿಗೆ ಜನನಮರಣಾದಿ ರೂಪವಾದ ಯಾವ ಸಾಂಸಾರಿಕ ದುಃಖವೂ ತೋರಿಬರಲಾರದು. ಇದೇ ಬ್ರಹ್ಮಜ್ಞಾನ ಎಂದು ಸೂತಮಹರ್ಷಿಗಳು ಶೌನಕಾದಿ ಋಷಿಜನರಿಗೆ ಆತ್ಮಜ್ಞಾನಸ್ವರೂಪವನ್ನು ಬೋಧಿಸಿದರು. ॥೫೮॥

ಇಲ್ಲಿಗೆ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚದಶೋಽಧ್ಯಾಯಃ

॥ ಋಭುರುವಾಚ ॥

ಮಹಾರಹಸ್ಯಂ ವಕ್ಷ್ಯಾಮಿ ಗುಹ್ಯಾದ್ಗುಹ್ಯತರಂ ಪುನಃ ।
ಅತ್ಯಂತಂ ದುರ್ಲಭಂ ಲೋಕೇ ಸರ್ವಂ ಬ್ರಹ್ಮೈವ ಕೇವಲಂ ॥೧॥

ಬ್ರಹ್ಮಮಾತ್ರಮಿದಂ ಸರ್ವಂ ಬ್ರಹ್ಮಮಾತ್ರಮಸನ್ನಹಿ ।
ಬ್ರಹ್ಮಮಾತ್ರಶ್ರುತಂ ಸರ್ವಂ ಬ್ರಹ್ಮಮಾತ್ರಂ ಕ್ರಿಯಾಫಲಂ ॥೨॥

ಬ್ರಹ್ಮಮಾತ್ರಂ ಮಹಾಮಂತ್ರಂ ಸರ್ವಂ ಬ್ರಹ್ಮೈವ ಕೇವಲಂ ।
ಬ್ರಹ್ಮಮಾತ್ರಂ ಜಗತ್ಸರ್ವಂ ಸರ್ವಂ ಬ್ರಹ್ಮೈವ ಕೇವಲಂ ॥೩॥

---

## ಹದಿನೈದನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಅತಿರಹಸ್ಯವಾದ ಮತ್ತು ಅತಿದುರ್ಲಭವಾದ ವಿಷಯವನ್ನು ಈಗ ಹೇಳುವೆನು ಕೇಳು. ಏನೆಂದರೆ, ಎಲ್ಲವೂ ಅದ್ವಿತೀಯಬ್ರಹ್ಮಸ್ವರೂಪವೇ. ಎಂದು ಋಭುಮುನಿಯು ಬ್ರಹ್ಮಜ್ಞಾನಸ್ವರೂಪವನ್ನು ವಿವರಿಸಲು ಆರಂಭಿಸಿದನು. ॥೧॥

ಈ ಜಗತ್ತೆಲ್ಲವೂ ಬ್ರಹ್ಮನು ಮಾತ್ರವೇ. ಬ್ರಹ್ಮನು ಅಸತ್ಯನಲ್ಲ. ಕೇಳುವುದೆಲ್ಲವೂ ಬ್ರಹ್ಮನೇ. ಎಲ್ಲ ಕರ್ಮಗಳ ಫಲವೂ ಬ್ರಹ್ಮನೇ. ॥೨॥

ಮಹಾಮಂತ್ರಗಳೆಲ್ಲವೂ ಬ್ರಹ್ಮನೇ, ಮಹಾಮಂತ್ರಗಳ ಅರ್ಥವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಬೇರೆ ಯಾವ ವಸ್ತುವೂ ಇಲ್ಲ. ॥೩॥

ಬ್ರಹ್ಮಮಾತ್ರಂ ಶ್ರುತಂ ಸರ್ವಂ ಬ್ರಹ್ಮಮಾತ್ರಂ ಕ್ರಿಯಾಫಲಂ ।
ಬ್ರಹ್ಮಮಾತ್ರಂ ಮಹಾವಾಕ್ಯಂ ಸರ್ವಂ ಬ್ರಹ್ಮೈವ ಕೇವಲಂ ॥೪॥

ಬ್ರಹ್ಮಮಾತ್ರಂ ಜಗತ್ಸರ್ವಂ ಬ್ರಹ್ಮಮಾತ್ರಂ ಜಡಾಜಡಂ ।
ಬ್ರಹ್ಮಮಾತ್ರಂ ಪರಂ ದೇಹಂ ಸರ್ವಂ ಬ್ರಹ್ಮೈವ ಕೇವಲಂ ॥೫॥

ಬ್ರಹ್ಮಮಾತ್ರಂ ಗುಣಂ ಪ್ರೋಕ್ತಂ ಬ್ರಹ್ಮಮಾತ್ರಮಹಂ ಮಹತ್ ।
ಬ್ರಹ್ಮಮಾತ್ರಂ ಪರಂ ಬ್ರಹ್ಮ ಸರ್ವಂ ಬ್ರಹ್ಮೈವ ಕೇವಲಂ ॥೬॥

ಬ್ರಹ್ಮಮಾತ್ರಮಿದಂ ವಸ್ತು ಬ್ರಹ್ಮಮಾತ್ರಮಯಂ ಪುಮಾನ್ ।
ಬ್ರಹ್ಮೈವ ಸರ್ವಂ ಯತ್ಕಿಂಚಿತ್ಸರ್ವಂ ಬ್ರಹ್ಮೈವ ಕೇವಲಂ ॥೭॥

ಬ್ರಹ್ಮಮಾತ್ರಮನಂತಾತ್ಮಾ ಬ್ರಹ್ಮಮಾತ್ರಂ ಪರಂ ಸುಖಂ ।
ಬ್ರಹ್ಮಮಾತ್ರಂ ಪರಂ ಜ್ಞಾನಂ ಸರ್ವಂ ಬ್ರಹ್ಮೈವ ಕೇವಲಂ ॥೮॥

---

ವೇದಾಂತಮಹಾವಾಕ್ಯಗಳೆಲ್ಲವೂ ಬ್ರಹ್ಮನೇ, ಅಂದರೆ ಬ್ರಹ್ಮಪರವಾದುವುಗಳು. ಅವೆಲ್ಲವುಗಳ ಅರ್ಥವೂ ಬ್ರಹ್ಮನೇ, ಎಲ್ಲವೂ ಬ್ರಹ್ಮನೇ. ॥೪॥

ಜಗತ್ತೆಲ್ಲವೂ ಬ್ರಹ್ಮನೇ, ಜಡ–ಚೇತನಗಳೆನ್ನುವವೆಲ್ಲವೂ ಬ್ರಹ್ಮನೇ, ದೇಹವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವುದೂ ಇಲ್ಲ. ॥೫॥

ಗುಣಗಳೆಲ್ಲವೂ ಬ್ರಹ್ಮನೇ, ಅಹಂಕಾರಮಹತ್ತತ್ವಗಳೂ ಬ್ರಹ್ಮನೇ, ಪರಬ್ರಹ್ಮನೆನ್ನುವವನೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೬॥

ಇದು ಎನ್ನುವ ವಸ್ತುವೆಲ್ಲವೂ ಬ್ರಹ್ಮನೇ, ಇವನು ಎನ್ನುವವನೆಲ್ಲವೂ ಬ್ರಹ್ಮನೇ, ಅತಿ ಚಿಕ್ಕದಾದಂತಹ ವಸ್ತುವೆಲ್ಲವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಏನೂ ಇಲ್ಲ. ॥೭॥

ಅನೇಕವಾಗಿ ತೋರುವ ಆತ್ಮಗಳೆಲ್ಲವೂ ಬ್ರಹ್ಮನೇ, ಸುಖವೆಲ್ಲವೂ ಬ್ರಹ್ಮನೇ, ಜ್ಞಾನವೆಲ್ಲವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಏನೂ ಇಲ್ಲವು. ॥೮॥

ಬ್ರಹ್ಮಮಾತ್ರಂ ಪರಂ ಸಾರಂ ಬ್ರಹ್ಮಮಾತ್ರಂ ಪುರತ್ರಯಂ ।
ಬ್ರಹ್ಮಮಾತ್ರಮನೇಕತ್ವಂ ಸರ್ವಂ ಬ್ರಹ್ಮೈವ ಕೇವಲಂ ॥೯॥

ಬ್ರಹ್ಮೈವ ಕೇವಲಂ ಗಂಧಂ ಬ್ರಹ್ಮೈವ ಪರಮಂ ಪದಂ ।
ಬ್ರಹ್ಮೈವ ಕೇವಲಂ ಘ್ರಾಣಂ ಸರ್ವಂ ಬ್ರಹ್ಮೈವ ಕೇವಲಂ ॥೧೦॥

ಬ್ರಹ್ಮೈವ ಕೇವಲಂ ಸ್ಪರ್ಶಂ ಶಬ್ದಂ ಬ್ರಹ್ಮೈವ ಕೇವಲಂ ।
ಬ್ರಹ್ಮೈವ ಕೇವಲಂ ರೂಪಂ ಸರ್ವಂ ಬ್ರಹ್ಮೈವ ಕೇವಲಂ ॥೧೧॥

ಬ್ರಹ್ಮೈವ ಕೇವಲಂ ಲೋಕಂ ರಸಂ ಬ್ರಹ್ಮೈವ ಕೇವಲಂ ।
ಬ್ರಹ್ಮೈವ ಕೇವಲಂ ಚಿತ್ತಂ ಸರ್ವಂ ಬ್ರಹ್ಮೈವ ಕೇವಲಂ ॥೧೨॥

ತತ್ಪದಂ ಚ ಸದಾ ಬ್ರಹ್ಮ ತ್ವಂ ಪದಂ ಬ್ರಹ್ಮ ಏವ ಹಿ ।
ಅಸೀತ್ಯೇವ ಪದಂ ಬ್ರಹ್ಮ ಸರ್ವಂ ಬ್ರಹ್ಮೈವ ಕೇವಲಂ ॥೧೩॥

---

ಕೊನೆಯ ಗತಿ ಅಥವಾ ದಡವೆನ್ನುವುದೂ ಬ್ರಹ್ಮನೇ, ವೈಕುಂಠ ಕೈಲಾಸ ಸತ್ಯಲೋಕಗಳೆನ್ನುವುದೂ ಬ್ರಹ್ಮನೇ, ಅನೇಕಭೇದವೂ ಬ್ರಹ್ಮನೇ. ॥೯॥

ಗಂಧವೆಲ್ಲವೂ ಬ್ರಹ್ಮನೇ, ಗಂಧವನ್ನು ಗ್ರಹಿಸುವ ಘ್ರಾಣೇಂದ್ರಿಯವೂ ಬ್ರಹ್ಮನೇ, ಉತ್ತಮಪದವಿಯೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಬೇರೆ ಏನೂ ಇಲ್ಲವು. ॥೧೦॥

ಸ್ಪರ್ಶವೆಲ್ಲವೂ ಬ್ರಹ್ಮನೇ, ಶಬ್ದವೆಲ್ಲವೂ ಬ್ರಹ್ಮನೇ, ರೂಪವೆಲ್ಲವೂ ಬ್ರಹ್ಮನೇ ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೧೧॥

ಲೋಕಗಳೆಲ್ಲವೂ ಬ್ರಹ್ಮನೇ, ರಸಗಳೆಲ್ಲವೂ ಬ್ರಹ್ಮನೇ, ಮನಸ್ಸು ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೧೨॥

ತತ್ (ಆ ಪರಮಾತ್ಮನು) ಎಂಬ ಪದವೂ ಬ್ರಹ್ಮನೇ, ತ್ವಂ (ನೀನು ಜೀವಾತ್ಮ) ಎಂಬ ಪದವೂ ಬ್ರಹ್ಮನೇ, ಅಂದರೆ ತತ್ತ್ವಮಸಿ-ಎಂಬ ವೇದಾಂತವಾಕ್ಯದಲ್ಲಿ ಹೇಳುವ ನೀನು ಆ ಬ್ರಹ್ಮನು ಆಗಿರುವೆ ಎಂಬ ವಾಕ್ಯಾರ್ಥವೂ ಬ್ರಹ್ಮನೆ, ಅಂದರೆ ಜೀವನೂ ಬ್ರಹ್ಮನೆ, ಜೀವಬ್ರಹ್ಮರಿಗೆ ಭೇದವಿಲ್ಲ. ॥೧೩॥

ಬ್ರಹ್ಮೈವ ಕೇವಲಂ ಗುಹ್ಯಂ ಬ್ರಹ್ಮೈಕ್ಯಂ ಕೇವಲಂ ಸದಾ ।
ಬ್ರಹ್ಮೈವ ತಜ್ಜಲಾನೀತಿ ಸರ್ವಂ ಬ್ರಹ್ಮೈವ ಕೇವಲಂ ॥೧೪॥

ಬ್ರಹ್ಮೈವ ಕೇವಲಂ ನಿತ್ಯಂ ಬ್ರಹ್ಮ ಬಾಹ್ಯಂ ಚ ಕೇವಲಂ ।
ಬ್ರಹ್ಮೈವ ಜಗದಾದ್ಯಂತಂ ಸರ್ವಂ ಬ್ರಹ್ಮೈವ ಕೇವಲಂ ॥೧೫॥

ಬ್ರಹ್ಮೈವ ಅಸ್ತಿ ನಾಸ್ತೀತಿ ಬ್ರಹ್ಮೈವಾಹಂ ನ ಸಂಶಯಃ ।
ಬ್ರಹ್ಮೈವ ಸರ್ವಂ ಯತ್ಕಿಂಚಿತ್ಸರ್ವಂ ಬ್ರಹ್ಮೈವ ಕೇವಲಂ ॥೧೬॥

ಬ್ರಹ್ಮೈವ ಜಾಗ್ರತ್ಸರ್ವಂ ಹಿ ಬ್ರಹ್ಮಮಾತ್ರಮಹಂ ಪರಂ ।
ಬ್ರಹ್ಮೈವ ಸತ್ಯಮಸ್ತಿತ್ವಂ ಬ್ರಹ್ಮೈವ ತುರ್ಯಮುಚ್ಯತೇ ॥೧೭॥

ಬ್ರಹ್ಮೈವ ಸತ್ತಾ ಬ್ರಹ್ಮೈವ ಬ್ರಹ್ಮೈವ ಗುರುಭಾವನಂ ।
ಬ್ರಹ್ಮೈವ ಶಿಷ್ಯಸದ್ಭಾವಂ ಮೋಕ್ಷಂ ಬ್ರಹ್ಮೈವ ಕೇವಲಂ ॥೧೮॥

---

ರಹಸ್ಯವೆನ್ನುವುದೆಲ್ಲವೂ ಬ್ರಹ್ಮನೇ, ಐಕ್ಯವೂ ಬ್ರಹ್ಮನೇ, "ತಜ್ಜಲಾನ್" ಎಂಬ ವೇದಾಂತ ವಾಕ್ಯಾರ್ಥವೂ ಬ್ರಹ್ಮನೇ. ಬ್ರಹ್ಮನ ಹೊರತಾಗಿ ಏನೂ ಇಲ್ಲವು. ॥೧೪॥

ನಿತ್ಯವಾದುದು ಬ್ರಹ್ಮವಸ್ತುವೊಂದೇ, ಹೊರಗು-ಎನ್ನುವುದೂ ಬ್ರಹ್ಮವೇ, ಜಗತ್ತಿನ ಆದಿ-ಅಂತ್ಯಗಳೂ ಬ್ರಹ್ಮನೇ. ॥೧೫॥

ಇದೆ-ಇಲ್ಲ ಎನ್ನುವುದೆಲ್ಲವೂ ಬ್ರಹ್ಮವಸ್ತುವೇ. ಬ್ರಹ್ಮನೇ ನಾನು, ಎಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮನ ಹೊರತಾಗಿ ಏನೂ ಇಲ್ಲ. ॥೧೬॥

ಜಾಗ್ರದವಸ್ಥೆಯುಳ್ಳ ವಸ್ತುವೆಲ್ಲವೂ ಬ್ರಹ್ಮವಸ್ತುವೇ. ನಾನು-ಇನ್ನೊಬ್ಬರು ಎನ್ನುವುದೆಲ್ಲವೂ ಬ್ರಹ್ಮನೇ, ಸತ್ಯವೂ ಬ್ರಹ್ಮನೇ, ಅಸ್ತಿತ್ವವು ಬ್ರಹ್ಮನೇ. ॥೧೭॥

ಇದೆ-ಎನ್ನುವ ವಸ್ತುವಿನ ಸತ್ತೆ (ಇರುವಿಕೆಯೆಲ್ಲವೂ) ಬ್ರಹ್ಮನೇ, ಗುರು-ಎನ್ನುವವನೂ ಬ್ರಹ್ಮನೇ, ಶಿಷ್ಯನೆನ್ನುವನೂ ಬ್ರಹ್ಮನೇ. ಕೇವಲ ಬ್ರಹ್ಮನೇ ಮೋಕ್ಷವು. ॥೧೮॥

ಪೂರ್ವಾಪರಂ ಚ ಬ್ರಹ್ಮೈವ ಪೂರ್ಣಂ ಬ್ರಹ್ಮ ಸನಾತನಂ ।
ಬ್ರಹ್ಮೈವ ಕೇವಲಂ ಸಾಕ್ಷಾತ್ಸರ್ವಂ ಬ್ರಹ್ಮೈವ ಕೇವಲಂ ॥೧೯॥

ಬ್ರಹ್ಮ ಸಚ್ಚಿತ್ಸುಖಂ ಬ್ರಹ್ಮ ಪೂರ್ಣಂ ಬ್ರಹ್ಮ ಸನಾತನಂ ।
ಬ್ರಹ್ಮೈವ ಕೇವಲಂ ಸಾಕ್ಷಾತ್ಸರ್ವಂ ಬ್ರಹ್ಮೈವ ಕೇವಲಂ ॥೨೦॥

ಬ್ರಹ್ಮೈವ ಕೇವಲಂ ಸಚ್ಚಿತ್ಸುಖಂ ಬ್ರಹ್ಮೈವ ಕೇವಲಂ ।
ಆನಂದಂ ಬ್ರಹ್ಮ ಸರ್ವತ್ರ ಪ್ರಿಯರೂಪಮಿವ ಸ್ಥಿತಂ ॥೨೧॥

ಶುಭವಾಸನಯಾ ಜೀವಃ ಶಿವವದ್ಭಾತಿ ಸರ್ವದಾ ।
ಪಾಪವಾಸನಯಾ ಜೀವಃ ನರಕಂ ಭೋಜ್ಯವತ್ಸ್ಥಿತಂ ॥೨೨॥

ಬ್ರಹ್ಮೈವೇಂದ್ರಿಯವದ್ಭಾನಂ ಬ್ರಹ್ಮೈವ ವಿಷಯಾದಿವತ್ ।
ಬ್ರಹ್ಮೈವ ವ್ಯವಹಾರಂ ಚ ಸರ್ವಂ ಬ್ರಹ್ಮೈವ ಕೇವಲಂ ॥೨೩॥

---

ಹಿಂದು-ಮುಂದು ಎನ್ನುವುದೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವು ಅನಾದಿ ಪೂರ್ಣವಸ್ತುವು. ಪ್ರತ್ಯಕ್ಷ-ವೆನ್ನುವುದೆಲ್ಲವೂ ಬ್ರಹ್ಮವೇ, ಎಲ್ಲವೂ ಕೇವಲ ಬ್ರಹ್ಮವಸ್ತುವೇ. ॥೧೯॥

ಬ್ರಹ್ಮವಸ್ತುವೇ ಸತ್ಯಸ್ವರೂಪವು, ಸುಖಸ್ವರೂಪವು, ಪೂರ್ಣವಸ್ತುವು, ಅನಾದಿ ವಸ್ತುವು ಬ್ರಹ್ಮವಸ್ತುವೇ ಪ್ರತ್ಯಕ್ಷವು. ಎಲ್ಲವೂ ಬ್ರಹ್ಮವಸ್ತುವೇ. ॥೨೦॥

ಬ್ರಹ್ಮವು ಅದ್ವಿತೀಯವಸ್ತುವು. ಸುಖಸ್ವರೂಪವು, ಆನಂದಸ್ವರೂಪವು, ಎಲ್ಲರಿಗೂ ಬಹುಪ್ರಿಯವಾದುದು, ಎಲ್ಲ ಕಡೆಯಲ್ಲೂ ವ್ಯಾಪಿಸಿರುವುದು. ॥೨೧॥

ಜೀವಸ್ವರೂಪವನ್ನೈದಿದ್ದರೂ ಬ್ರಹ್ಮವಸ್ತುವು. ಪುಣ್ಯಸಂಸ್ಕಾರದಿಂದ ಶಿವನಂತೆ ಪ್ರಕಾಶಿಸುವುದು, ಪಾಪಸಂಸ್ಕಾರದಿಂದ ನರಕಭಾಗಿಯಂತೆ ತೊಳಲುವುದು. ॥೨೨॥

ಬ್ರಹ್ಮವೇ ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮಗಳೆಂಬ ಇಂದ್ರಿಯಗಳಂತೆ ತೋರುವುದು. ರೂಪ. ಶಬ್ದ, ಗಂಧ, ರಸ, ಸ್ಪರ್ಶಗಳೆಂಬ ಇಂದ್ರಿಯವಿಷಯಗಳಂತೆಯೂ ಪ್ರಕಾಶಿಸುವುದು. ವ್ಯವಹಾರವೆಲ್ಲವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೨೩॥

ಬ್ರಹ್ಮೈವ ಸರ್ವಮಾನಂದಂ ಬ್ರಹ್ಮೈವ ಜ್ಞಾನವಿಗ್ರಹಂ।
ಬ್ರಹ್ಮೈವ ಮಾಯಾಕಾರ್ಯಾಖ್ಯಂ ಸರ್ವಂ ಬ್ರಹ್ಮೈವ ಕೇವಲಂ ॥೨೪॥

ಬ್ರಹ್ಮೈವ ಹೃದಯಾಂತಃಸ್ಥಂ ಬ್ರಹ್ಮೈವ ಯಜ್ಞಸಾಧನಂ।
ಬ್ರಹ್ಮೈವ ಮೋಕ್ಷಸಾರಾಖ್ಯಂ ಸರ್ವಂ ಬ್ರಹ್ಮೈವ ಕೇವಲಂ ॥೨೫॥

ಶುದ್ಧಾಶುದ್ಧಂ ಚ ಬ್ರಹ್ಮೈವ ಸರ್ವಂ ಬ್ರಹ್ಮೈವ ಕಾರಣಂ।
ಬ್ರಹ್ಮೈವ ಕಾರ್ಯಂ ಭೂಲೋಕಂ ಸರ್ವಂ ಬ್ರಹ್ಮೈವ ಕೇವಲಂ ॥೨೬॥

ಬ್ರಹ್ಮೈವ ನಿತ್ಯತೃಪ್ತಾತ್ಮಾ ಬ್ರಹ್ಮೈವ ಸಕಲಂ ದಿನಂ।
ಬ್ರಹ್ಮೈವ ತೂಷ್ಣೀಂಭೂತಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೨೭॥

ಬ್ರಹ್ಮೈವ ವೇದಸಾರಾರ್ಥಂ ಬ್ರಹ್ಮೈವ ಧ್ಯಾನಗೋಚರಂ।
ಬ್ರಹ್ಮೈವ ಯೋಗಯೋಗಾಖ್ಯಂ ಸರ್ವಂ ಬ್ರಹ್ಮೈವ ಕೇವಲಂ ॥೨೮॥

---

ಆನಂದವೆಲ್ಲವೂ ಬ್ರಹ್ಮವೇ, ಜ್ಞಾನರೂಪವು ಬ್ರಹ್ಮವು, ಮಾಯೆಯ ಕಾರ್ಯವೆನ್ನುವ ಜಗತ್ತೆಲ್ಲವೂ ಬ್ರಹ್ಮನೇ, ಬ್ರಹ್ಮನ ಹೊರತಾಗಿ ಏನೂ ಇಲ್ಲವು. ॥೨೪॥

ಹೃದಯದಲ್ಲಿರುವ ಜೀವನೂ ಬ್ರಹ್ಮನೇ, ಯಾಗಸಾಧನವೂ ಬ್ರಹ್ಮನೇ, ಮೋಕ್ಷಸಾಧನವು ಬ್ರಹ್ಮನೇ, ಬ್ರಹ್ಮನ ಹೊರತು ಯಾವ ವಸ್ತುವೂ ಇಲ್ಲವು. ॥೨೫॥

ಶುದ್ಧತೆಯೂ ಅಶುದ್ಧತೆಯೂ ಬ್ರಹ್ಮವಸ್ತುವೇ, ಎಲ್ಲ ಕಾರಣವೂ ಬ್ರಹ್ಮನೇ, ಕಾರಣದಿಂದ ಜನಿಸುವ ಕಾರ್ಯವೆಲ್ಲವೂ ಬ್ರಹ್ಮವಸ್ತುವೇ. ॥೨೬॥

ನಿತ್ಯತೃಪ್ತವಸ್ತುವೆನ್ನುವುದೆಲ್ಲವೂ ಬ್ರಹ್ಮವಸ್ತುವು. ದಿನಗಳೆಲ್ಲವೂ ಬ್ರಹ್ಮವಸ್ತುವೇ, ಸುಮ್ಮನೆ ಉದಾಸೀನನಾಗಿರುವವನು ಬ್ರಹ್ಮನೇ, ಎಲ್ಲವೂ ಬ್ರಹ್ಮನೇ. ॥೨೭॥

ವೇದಗಳ ಸಾರವೆಲ್ಲವೂ ಬ್ರಹ್ಮನೇ, ಧ್ಯಾನವಿಷಯವಾದ ವಸ್ತುವು ಬ್ರಹ್ಮನೇ. ಯೋಗವೂ ಯೋಗದಿಂದ ಸಾಧಿಸಲ್ಪಡುವ ವಸ್ತುವು ಬ್ರಹ್ಮನೇ. ॥೨೮॥

ನಾನಾರೂಪತ್ವತದ್ಬ್ರಹ್ಮ ಉಪಾಧಿತ್ವೇನ ದೃಶ್ಯತೇ ।
ಮಾಯಾಮಾತ್ರಮಿತಿ ಜ್ಞಾತ್ವಾ ವಸ್ತುತೋ ನಾಸ್ತಿ ತತ್ವತಃ ॥೨೯॥

ಬ್ರಹ್ಮೈವ ಲೋಕವದ್ಭಾತಿ ಬ್ರಹ್ಮೈವ ಜನವತ್ತಥಾ ।
ಬ್ರಹ್ಮೈವ ರೂಪವದ್ಭಾತಿ ವಸ್ತುತೋ ನಾಸ್ತಿ ಕಿಂಚನ ॥೩೦॥

ಬ್ರಹ್ಮೈವ ದೇವತಾಕಾರಂ ಬ್ರಹ್ಮೈವ ಮುನಿಮಂಡಲಂ ।
ಬ್ರಹ್ಮೈವ ಧ್ಯಾನರೂಪಂ ಚ ಸರ್ವಂ ಬ್ರಹ್ಮೈವ ಕೇವಲಂ ॥೩೧॥

ಬ್ರಹ್ಮೈವ ಜ್ಞಾನರೂಪಂ ಚ ಜ್ಞೇಯಂ ಚ ಬ್ರಹ್ಮ ಏವ ಚ ।
ಬ್ರಹ್ಮೈವ ಜ್ಞಾನವಿಜ್ಞಾನಂ ಸರ್ವಂ ಬ್ರಹ್ಮೈವ ಕೇವಲಂ ॥೩೨॥

ಬ್ರಹ್ಮೈವ ಶುದ್ಧಾಶುದ್ಧಾತ್ಮಾ ಬ್ರಹ್ಮೈವ ಪರಮೇಶ್ವರಃ ।
ಬ್ರಹ್ಮೈವ ಪರಮಾನಂದಂ ಸರ್ವಂ ಬ್ರಹ್ಮೈವ ಕೇವಲಂ ॥೩೩॥

---

ಬ್ರಹ್ಮವಸ್ತುವು ಮಾಯಾಕಲ್ಪಿತವಾದ ಸ್ಥಾನಭೇದಗಳಿಂದ ನಾನಾ ಬಗೆಯ ರೂಪಗಳುಳ್ಳದುದಾಗಿ ತೋರುತ್ತದೆ. ವಸ್ತುತಃ ರೂಪಭೇದವೇ ಇಲ್ಲವು. ॥೨೯॥

ಬ್ರಹ್ಮನೇ ಮಾಯೆಯಿಂದ ಲೋಕದಂತೆ ತೋರುವನು, ಲೋಕದ ಜನಗಳಾಗಿ ತೋರುವನು. ಅವನೇ ರೂಪವಾಗಿ ತೋರುವನು, ವಸ್ತುತಃ ಬ್ರಹ್ಮನಿಗಾವ ಭೇದವೂ ಇಲ್ಲ. ॥೩೦॥

ಬ್ರಹ್ಮನೇ ದೇವತೆಗಳಂತೆ ಪ್ರಕಾಶಿಸುವವನು. ಮುನಿಗಳಂತೆ ತೋರುವನು, ಧ್ಯಾನರೂಪವಾಗಿಯೂ ತೋರುವನು. ಎಲ್ಲವೂ ಕೇವಲ ಬ್ರಹ್ಮವಸ್ತುವೇ. ॥೩೧॥

ಜ್ಞಾನರೂಪವಾಗಿಯೂ ಬ್ರಹ್ಮನು ತೋರುವನು, ಜ್ಞಾನಕ್ಕೆ ವಿಷಯವಾಗಿಯೂ ಪ್ರಕಾಶಿಸುವನು, ವಿಜ್ಞಾನರೂಪದಿಂದಲೂ ತೋರುವನು. ॥೩೨॥

ಶುದ್ಧರ ಮತ್ತು ಅಶುದ್ಧರ ಆತ್ಮನೂ ಬ್ರಹ್ಮವೇ, ಬ್ರಹ್ಮವೇ ಪರಮೇಶ್ವರನು. ಪರಮಾನಂದವು ಬ್ರಹ್ಮನೇ, ಎಲ್ಲವೂ ಬ್ರಹ್ಮವೇ. ॥೩೩॥

ಬ್ರಹ್ಮೈವ ಪರಮಾರ್ಥಂ ಚ ಬ್ರಹ್ಮೈವ ವ್ಯಾಪಕಂ ಮಹತ್ ।
ಬ್ರಹ್ಮೈವ ಯಜ್ಞರೂಪಂ ಚ ಸರ್ವಂ ಬ್ರಹ್ಮೈವ ಕೇವಲಂ ॥೩೪॥

ಬ್ರಹ್ಮೈವ ಜೀವಭೂತಾತ್ಮಾ ಬ್ರಹ್ಮ ಹವ್ಯಂ ಚ ಕೇವಲಂ ।
ಬ್ರಹ್ಮೈವ ಸಕಲಂ ಲೋಕಂ ಸರ್ವಂ ಬ್ರಹ್ಮೈವ ಕೇವಲಂ ॥೩೫॥

ಬ್ರಹ್ಮೈವ ಸರ್ವಸಿದ್ಧಿಂ ಚ ಬ್ರಹ್ಮೈವ ಗುರುಶಿಷ್ಯಕಂ ।
ಬ್ರಹ್ಮೈವ ಸರ್ವಮಂತ್ರಂ ಚ ಸರ್ವಂ ಬ್ರಹ್ಮೈವ ಕೇವಲಂ ॥೩೬॥

ಬ್ರಹ್ಮೈವ ಸರ್ವಕಾರ್ಯಂ ಚ ಬ್ರಹ್ಮೈವ ಸಕಲಂ ಜಪಃ ।
ಬ್ರಹ್ಮೈವ ಸರ್ವಕೈವಲ್ಯಂ ಸರ್ವಂ ಬ್ರಹ್ಮೈವ ಕೇವಲಂ ॥೩೭॥

ಬ್ರಹ್ಮೈವ ಸರ್ವಶಾಂತತ್ವಂ ಬ್ರಹ್ಮೈವ ಹೃದಯಾಂತರಂ ।
ಬ್ರಹ್ಮೈವ ಬ್ರಹ್ಮರೂಪಂ ಚ ಸರ್ವಂ ಬ್ರಹ್ಮೈವ ಕೇವಲಂ ॥೩೮॥

---

ಬ್ರಹ್ಮವೇ ಪರಮಾರ್ಥವಸ್ತುವು. ಜಗತ್ತನ್ನು ವ್ಯಾಪಿಸಿರುವುದು ಬ್ರಹ್ಮವೇ, ಯಜ್ಞರೂಪವಾಗಿಯೂ ಬ್ರಹ್ಮವು ತೋರುವುದು. ಎಲ್ಲವೂ ಬ್ರಹ್ಮವೇ, ॥೩೪॥

ಬ್ರಹ್ಮವೇ ಜೀವಾತ್ಮನು, ಬ್ರಹ್ಮವೇ ಯಜ್ಞದ ಹವಿಸ್ಸು, ಬ್ರಹ್ಮನೇ ಎಲ್ಲ ಲೋಕಗಳು. ಹೀಗೆ ಜೀವಾತ್ಮ ಹವಿಸ್ಸು ಲೋಕಗಳೆಲ್ಲವೂ ಬ್ರಹ್ಮವೇ. ॥೩೫॥

ಎಲ್ಲ ಸಿದ್ಧಿಗಳೂ ಬ್ರಹ್ಮವೇ, ಗುರು-ಶಿಷ್ಯ ಎನ್ನುವುದೆಲ್ಲವೂ ಬ್ರಹ್ಮವೇ, ಮಂತ್ರಗಳೆಲ್ಲವೂ ಬ್ರಹ್ಮವೇ, ಬ್ರಹ್ಮವಸ್ತುವಿನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೩೬॥

ಕಾರ್ಯಗಳೆಲ್ಲವೂ ಬ್ರಹ್ಮವೇ, ಜಪಗಳೆಲ್ಲವೂ ಬ್ರಹ್ಮವೇ, ಸಾಲೋಕ್ಯ ಸಾಮೀಪ್ಯ ಸಾರೂಪ್ಯಗಳೆಂಬ ಮೋಕ್ಷಗಳೆಲ್ಲವೂ ಬ್ರಹ್ಮವೇ. ॥೩೭॥

ಶಾಂತಿಯೆಲ್ಲವೂ ಬ್ರಹ್ಮವೇ, ಹೃದಯಾಂತರಂಗವೆಲ್ಲವೂ ಬ್ರಹ್ಮವೇ, ಬ್ರಹ್ಮ ರೂಪವೂ ಬ್ರಹ್ಮವೇ, ಎಲ್ಲವೂ ಬ್ರಹ್ಮವಸ್ತುವೇ. ॥೩೮॥

ಬ್ರಹ್ಮೈವಾಕ್ಷರಭಾವಂ ಚ ಬ್ರಹ್ಮೈವಾಕ್ಷರಲಕ್ಷಣಂ ।
ಬ್ರಹ್ಮೈವಾಹಂ ಪದಾರ್ಥಂ ಚ ಸರ್ವಂ ಬ್ರಹ್ಮೈವ ಕೇವಲಂ ॥೩೯॥

ಬ್ರಹ್ಮೈವ ತ್ವಂ ಪದಾರ್ಥಂ ಚ ಬ್ರಹ್ಮೈವ ಪರಮೇಶ್ವರಃ ।
ಬ್ರಹ್ಮೈವ ಸರ್ಗರೂಪಂ ಚ ಸರ್ವಂ ಬ್ರಹ್ಮೈವ ಕೇವಲಂ ॥೪೦॥

ಬ್ರಹ್ಮೈವ ಸತ್ಯಭವನಂ ಬ್ರಹ್ಮೈವಾಹಂ ನ ಸಂಶಯಃ ।
ಬ್ರಹ್ಮೈವ ಗುಣದೋಷಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೪೧॥

ಬ್ರಹ್ಮೈವ ಯದ್ವತ್ಪರಮಂ ಬ್ರಹ್ಮೈವ ಪರಮೇಶ್ವರಃ ।
ಬ್ರಹ್ಮೈವ ಕಲನಾಭಾವಂ ಸರ್ವಂ ಬ್ರಹ್ಮೈವ ಕೇವಲಂ ॥೪೨॥

ಬ್ರಹ್ಮೈವ ಕೇವಲಂ ಸರ್ವಂ ಬ್ರಹ್ಮೈವ ತ್ವಂ ಸದಾಶಿವಃ ।
ಬ್ರಹ್ಮ ಸರ್ವಂ ನ ಸಂದೇಹೋ ಸರ್ವಂ ಬ್ರಹ್ಮೈವ ಕೇವಲಂ ॥೪೩॥

---

ಅಕ್ಷರಗಳ ಉತ್ಪತ್ತಿಯೆಲ್ಲವೂ ಬ್ರಹ್ಮವೇ, ಅಕ್ಷರಲಕ್ಷಣಗಳೆಲ್ಲವೂ ಬ್ರಹ್ಮವೇ, ನಾನು ಎಂಬ ಅಹಂಪದಾರ್ಥವೂ ಬ್ರಹ್ಮವೇ, ಬ್ರಹ್ಮನ ಹೊರತಾಗಿ ಏನೂ ಇಲ್ಲ. ॥೩೯॥

ನೀನು ಎಂಬ ತ್ವಂ ಪದಾರ್ಥವೂ ಬ್ರಹ್ಮವೇ, ತತ್ ಎಂಬ ತತ್ಪದಾರ್ಥವಾದ ಈಶ್ವರನೂ ಬ್ರಹ್ಮವೇ, ಸೃಷ್ಟಿಯೂ ಬ್ರಹ್ಮವೇ, ಬ್ರಹ್ಮನ ಹೊರತಾಗಿ ಏನೂ ಇಲ್ಲ. ॥೪೦॥

ಸತ್ಯದ ಉಗಮಸ್ಥಾನವೆಲ್ಲವೂ ಬ್ರಹ್ಮವಸ್ತುವೇ, ನಾನೇ ಬ್ರಹ್ಮವಸ್ತುವು, ಗುಣದೋಷಗಳ ಸ್ವರೂಪನೂ ಬ್ರಹ್ಮವಸ್ತುವೇ. ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೪೧॥

ಸರ್ವೋತ್ತಮವಾದುದೆಲ್ಲವೂ ಬ್ರಹ್ಮವಸ್ತುವೇ, ಪರಮೇಶ್ವರನೂ ಬ್ರಹ್ಮವೇ, ಎಲ್ಲವನ್ನೂ ಸಂಹರಿಸುವಂತಹುದೂ ಬ್ರಹ್ಮವಸ್ತುವೇ. ॥೪೨॥

ಎಲ್ಲವೂ ಅದ್ವಿತೀಯಬ್ರಹ್ಮರೂಪವು, ನೀನೂ ಬ್ರಹ್ಮವಸ್ತುವೇ, ಸದಾ ಮಂಗಳರೂಪವಾದುದು ಬ್ರಹ್ಮವಸ್ತುವು, ಅದರ ಹೊರತಾಗಿ ಬೇರೆ ಏನೂ ಇಲ್ಲ. ॥೪೩॥

ಬ್ರಹ್ಮೈವೇದಂ ಜಗತ್ಸರ್ವಂ ಬ್ರಹ್ಮೈವಾತ್ಮಾ ಜಗತ್ಸ್ವಯಂ ।
ಬ್ರಹ್ಮೈವ ಸುಖಮಾತ್ರಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೪೪॥

ಬ್ರಹ್ಮೈವ ಸರ್ವಸುಲಭಂ ಬ್ರಹ್ಮಣೋನ್ಯವದಾತ್ಸದಾ ।
ಬ್ರಹ್ಮೈವ ಬ್ರಹ್ಮಮಾತ್ರಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೪೫॥

ಬ್ರಹ್ಮೈವ ಸರ್ವವಾಕ್ಯಾರ್ಥಂ ಬ್ರಹ್ಮೈವ ಪರಮಂ ಪದಂ ।
ಬ್ರಹ್ಮೈವ ಸತ್ಯಾಸತ್ಯಂ ಚ ಸರ್ವಂ ಬ್ರಹ್ಮೈವ ಕೇವಲಂ ॥೪೬॥

ಬ್ರಹ್ಮೈವೇಕಮನಾದ್ಯಂತಂ ಬ್ರಹ್ಮೈವೇಕಂ ನ ಸಂಶಯಃ ।
ಬ್ರಹ್ಮೈವೇಕಂ ಚಿದಾನಂದಂ ಸರ್ವಂ ಬ್ರಹ್ಮೈವ ಕೇವಲಂ ॥೪೭॥

ಬ್ರಹ್ಮೈವೇಕಸುಖಂ ನಿತ್ಯಂ ಬ್ರಹ್ಮೈವೇಕಪರಾಯಣಂ ।
ಬ್ರಹ್ಮೈವೇಕಂ ಪರಂ ಬ್ರಹ್ಮ ಸರ್ವಂ ಬ್ರಹ್ಮೈವ ಕೇವಲಂ ॥೪೮॥

---

ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಆತ್ಮವೆಲ್ಲವೂ ಬ್ರಹ್ಮವಸ್ತುವು, ಸುಖವೆಲ್ಲವೂ ಬ್ರಹ್ಮಸ್ವರೂಪವೇ, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೪೪॥

ಬ್ರಹ್ಮವಸ್ತುವು ಎಲ್ಲರ ಆತ್ಮವಾಗಿ ಎಲ್ಲರಿಗೂ ಸುಲಭವಾಗಿರುವುದು. ಆದರೆ ಎಲ್ಲರೂ ಬೇರೆ ಬೇರೆಯಾಗಿ ತಿಳಿದು ಬ್ರಹ್ಮಜ್ಞಾನವಿಲ್ಲದವರಾಗಿರುವರು. ಬ್ರಹ್ಮವಸ್ತುವಿನ ಹೊರತಾಗಿ ಯಾವ ವಸ್ತುವೂ ಇಲ್ಲವು. ॥೪೫॥

ಎಲ್ಲ ವಾಕ್ಯಗಳ ಅರ್ಥವೂ ಬ್ರಹ್ಮವೇ, ಪಡೆಯಬಹುದಾದ ಪರಮಪದವಿಯೂ ಬ್ರಹ್ಮವೇ, ಸತ್ಯಾಸತ್ಯವೂ ಬ್ರಹ್ಮವೇ. ॥೪೬॥

ಬ್ರಹ್ಮವಸ್ತುವೊಂದೇ ತುದಿಮೊದಲಿಲ್ಲದ ವ್ಯಾಪಕವಸ್ತುವು. ಬ್ರಹ್ಮವೊಂದೇ ಈ ಪ್ರಪಂಚದಲ್ಲಿ ಸತ್ಯವಾದುದು, ಅದೊಂದೇ ಜ್ಞಾನಾನಂದಮೂರ್ತಿಯು. ॥೪೭॥

ಬ್ರಹ್ಮವೊಂದೇ ಸುಖಸ್ವರೂಪವಾದುದು, ಬ್ರಹ್ಮವೊಂದೇ ದುಃಖಿತರಿಗೆ ಗತಿಯು ಬ್ರಹ್ಮವಸ್ತುವೊಂದೇ ಸರ್ವೋತ್ಕೃಷ್ಟವಾದುದು. ॥೪೮॥

ಬ್ರಹ್ಮೈವ ಚಿತ್ಸ್ವಯಂ ಸ್ವಸ್ಥಂ ಬ್ರಹ್ಮೈವ ಗುಣವರ್ಜಿತಂ ।
ಬ್ರಹ್ಮೈವಾತ್ಯಂತಿಕಂ ಸರ್ವಂ ಸರ್ವಂ ಬ್ರಹ್ಮೈವ ಕೇವಲಂ ॥೪೯॥

ಬ್ರಹ್ಮೈವ ನಿರ್ಮಲಂ ಬ್ರಹ್ಮ ಬ್ರಹ್ಮೈವ ಸುಲಭಂ ಸದಾ ।
ಬ್ರಹ್ಮೈವ ಸತ್ಯಂ ಸತ್ಯಾನಾಂ ಸರ್ವಂ ಬ್ರಹ್ಮೈವ ಕೇವಲಂ ॥೫೦॥

ಬ್ರಹ್ಮೈವ ಸೌಖ್ಯಂ ಸೌಖ್ಯಾನಾಂ ಬ್ರಹ್ಮೈವೈಕಸುಖಾತ್ಮಕಂ ।
ಬ್ರಹ್ಮೈವ ಸರ್ವಂ ಯತ್ಪ್ರೋಕ್ತಂ ಸರ್ವಂ ಬ್ರಹ್ಮೈವ ಕೇವಲಂ ॥೫೧॥

ಬ್ರಹ್ಮೈವಮುಖಿಲಂ ಬ್ರಹ್ಮ ಬ್ರಹ್ಮೈಕಂ ಸರ್ವಸಾಕ್ಷಿಕಂ ।
ಬ್ರಹ್ಮೈವ ಭೂರಿಭುವನಂ ಸರ್ವಂ ಬ್ರಹ್ಮೈವ ಕೇವಲಂ ॥೫೨॥

ಬ್ರಹ್ಮೈವ ಪರಿಪೂರ್ಣಾತ್ಮಾ ಬ್ರಹ್ಮೈಕಂ ಸಾರಮವ್ಯಯಂ ।
ಬ್ರಹ್ಮೈವ ಕಾರಣಂ ಮೂಲಂ ಬ್ರಹ್ಮೈವೈಕಂ ಪರಾಯಣಂ ॥೫೩॥

---

ಬ್ರಹ್ಮವೊಂದೇ ನಿರ್ಗುಣವಾದ ಜ್ಞಾನಸ್ವರೂಪವು, ಮತ್ತು ತನ್ನಲ್ಲಿಯೇ ಇರುವುದು. ಪ್ರಪಂಚವೆಲ್ಲವೂ ನಷ್ಟವಾದರೂ ಬ್ರಹ್ಮವಸ್ತುವು ಸ್ಥಿರವಾಗಿರುವುದು॥೪೯

ನಿರ್ಮಲವಾದುದು ಬ್ರಹ್ಮವಸ್ತುವೊಂದೇ. ಎಲ್ಲಡೆಯಲ್ಲೂ ವ್ಯಾಪಕವಾಗಿರುವುದರಿಂದ ಎಲ್ಲರಿಗೂ ಸುಲಭವಾದುದು ಬ್ರಹ್ಮವಸ್ತುವೊಂದೇ. ಸತ್ಯವಸ್ತುಗಳಲ್ಲಿ ಬ್ರಹ್ಮವಸ್ತುವೊಂದೇ ಸತ್ಯವಾದುದು. ಅಥವಾ ಸತ್ಯವೆಂದು ತೋರುವ ವಸ್ತುವಿನ ಸತ್ಯತ್ವವು ಬ್ರಹ್ಮವಸ್ತುವೇ. ಎಲ್ಲವೂ ಬ್ರಹ್ಮವಸ್ತುವೇ. ॥೫೦॥

ಸುಖವಸ್ತುಗಳಿಂದ ಲಭಿಸುವ ಸೌಖ್ಯವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವು ಕೇವಲ ಸುಖಸ್ವರೂಪವಾದುದು. ಎಲ್ಲವೂ ಬ್ರಹ್ಮವಸ್ತುವೇ, ಅದರ ಹೊರತಾಗಿ ಏನೂ ಇಲ್ಲ. ॥೫೧॥

ಸಕಲವೆನ್ನುವುದೂ ಬ್ರಹ್ಮವಸ್ತುವೇ; ಬ್ರಹ್ಮವಸ್ತುವೊಂದೇ ಎಲ್ಲಕ್ಕೂ ಸಾಕ್ಷಿಯು. ನಾನಾರೀತಿಯ ಲೋಕಗಳೆಲ್ಲವೂ ಬ್ರಹ್ಮವಸ್ತುವೇ. ॥೫೨॥

ಪರಿಪೂರ್ಣವೆನ್ನುವ ವಸ್ತುವು ಬ್ರಹ್ಮವಸ್ತುವೊಂದೇ, ನಾಶರಹಿತವಾದ ಸಾರವಸ್ತುವು ಬ್ರಹ್ಮವಸ್ತುವೊಂದೇ. ಎಲ್ಲಕ್ಕೂ ಆದಿಕಾರಣವು ಬ್ರಹ್ಮವಸ್ತುವೊಂದೇ, ಎಲ್ಲರಿಗೂ ಎಲ್ಲ ಬಗೆಯ ಗತಿಯಾದುದು ಬ್ರಹ್ಮವಸ್ತುವೊಂದೇ. ॥೫೩॥

ಬ್ರಹ್ಮೈವ ಸರ್ವಭೂತಾತ್ಮಾ ಬ್ರಹ್ಮೈವ ಸುಖವಿಗ್ರಹಂ ।
ಬ್ರಹ್ಮೈವ ನಿತ್ಯತೃಪ್ತಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೫೪॥

ಬ್ರಹ್ಮೈವಾದ್ವೈತಮಾತ್ರಾತ್ಮಾ ಬ್ರಹ್ಮೈವಾಕಾಶವತ್ಪ್ರಭುಃ ।
ಬ್ರಹ್ಮೈವ ಹೃದಯಾಂತಸ್ಥಂ ಸರ್ವಂ ಬ್ರಹ್ಮೈವ ಕೇವಲಂ ॥೫೫॥

ಬ್ರಹ್ಮಣೋನ್ಯತ್ಪರಂ ನಾಸ್ತಿ ಬ್ರಹ್ಮಣೋನ್ಯಜ್ಜಗನ್ನ ಚ ।
ಬ್ರಹ್ಮಣೋನ್ಯದಹಂ ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೬॥

ಬ್ರಹ್ಮಣೋನ್ಯತ್ಸುಖಂ ನಾಸ್ತಿ ಬ್ರಹ್ಮಣೋನ್ಯತ್ಫಲಂ ನಹಿ ।
ಬ್ರಹ್ಮಣೋನ್ಯತ್ತೃಣಂ ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೭॥

ಬ್ರಹ್ಮೈವ ತತ್ಪದಂ ಮಿಥ್ಯಾ ಬ್ರಹ್ಮೈವಾಹಂ ನ ಕಿಂಚನ ।
ಬ್ರಹ್ಮೈವಾಹಂ ಜಗನ್ಮಿಥ್ಯಾ ಸರ್ವಂ ಬ್ರಹ್ಮೈವ ಕೇವಲಂ ॥೫೮॥

---

ಎಲ್ಲ ಪ್ರಾಣಿಗಳ ಜೀವಾತ್ಮನು ಬ್ರಹ್ಮವಸ್ತುವೇ. ಸುಖಸ್ವರೂಪವಾದುದು ಬ್ರಹ್ಮವಸ್ತುವೊಂದೇ. ಸದಾ ತೃಪ್ತವಾಗಿರುವುದು ಬ್ರಹ್ಮವಸ್ತುವೊಂದೇ, ಎಲ್ಲವೂ ಬ್ರಹ್ಮವಸ್ತುವೇ. ॥೫೪॥

ಅದ್ವಿತೀಯಸ್ವರೂಪವು ಬ್ರಹ್ಮವಸ್ತುವೊಂದೇ. ಆಕಾಶದಂತೆ ಸರ್ವವ್ಯಾಪಕವೂ ನಿರಾಕಾರವೂ ಅದಕ್ಕಿಂತಲೂ ಮಿಗಿಲಾಗಿ ನಿರ್ಗುಣವೂ ಆದ ವಸ್ತುವು ಬ್ರಹ್ಮವಸ್ತುವೊಂದೇ. ಎಲ್ಲರ ಹೃದಯದಲ್ಲಿ ನೆಲಸಿರುವ ಜೀವಾತ್ಮನು ಬ್ರಹ್ಮವಸ್ತುವೊಂದೆ. ॥೫೫॥

ಬ್ರಹ್ಮವಸ್ತುವಿಗಿಂತ ಶ್ರೇಷ್ಠವಸ್ತುವು ಇನ್ನೊಂದಿಲ್ಲ. ಬ್ರಹ್ಮನ ಹೊರತಾಗಿ ಜಗತ್ತೂ ಇಲ್ಲ, ಬ್ರಹ್ಮನ ಹೊರತಾಗಿ ನಾನು-ಎಂಬ ವಸ್ತುವು ಇಲ್ಲ, ಎಲ್ಲವೂ ಬ್ರಹ್ಮವೇ. ॥೫೬॥

ಬ್ರಹ್ಮವಸ್ತುವಿನ ಹೊರತಾಗಿ ಯಾವ ಸುಖವೂ ಇಲ್ಲ, ಯಾವ ಫಲವೂ ಇಲ್ಲ. ಬ್ರಹ್ಮವಸ್ತುವಿನ ಹೊರತಾಗಿ ಒಂದು ಹುಲ್ಲುಚೂರೂ ಇಲ್ಲ, ಎಲ್ಲವೂ ಬ್ರಹ್ಮವೇ. ॥೫೭॥

ಬ್ರಹ್ಮನು ಹೊರತಾಗಿ ಈಶ್ವರನೆಂಬುವವನಿರುವುದು ಸುಳ್ಳು, ಆ ಬ್ರಹ್ಮವಸ್ತುವೇ ನಾನು, ಈ ಜಗತ್ತೆಲ್ಲವೂ ಸುಳ್ಳು. ॥೫೮॥

ಬ್ರಹ್ಮೈವೇದಮಹಂ ಮಿಥ್ಯಾ ಬ್ರಹ್ಮಮಾತ್ರಂ ತ್ವಮೇವ ಹಿ ।
ಬ್ರಹ್ಮೈವಾನ್ಯಗುರುರ್ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೫೯॥

ಬ್ರಹ್ಮೈವಾನ್ಯದಸತ್ಕಾರ್ಯಂ ಬ್ರಹ್ಮೈವಾನ್ಯದಸದ್ವಪುಃ ।
ಬ್ರಹ್ಮಣೋಽನ್ಯನ್ಮನೋ ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೬೦॥

ಬ್ರಹ್ಮೈವೇತಜ್ಜಗನ್ಮಿಥ್ಯಾ ಬ್ರಹ್ಮೈವಾಹಂ ನ ಕಿಂಚನ ।
ಬ್ರಹ್ಮೈವೇಕಂ ನ ಚಾಹಂತಾ ಸರ್ವಂ ಬ್ರಹ್ಮೈವ ಕೇವಲಂ ॥೬೧॥

ಬ್ರಹ್ಮೈವ ಸರ್ವಮಿತ್ಯೇವಂ ಪ್ರೋಕ್ತಂ ಪ್ರಕರಣಂ ಮಯಾ ।
ಯಃ ಪಠೇಚ್ಛ್ರಾವಯೇತ್ಸದ್ಯೋ ಬ್ರಹ್ಮೈವ ಭವತಿ ಸ್ವಯಂ ॥೬೨॥

ಅಸ್ತಿಬ್ರಹ್ಮೇತಿ ವೇದೇ ಇದಮಿದಮಖಿಲಂ ವೇದಸಾರೋದ್ಭವೇತ
ಸಚ್ಚಾಸಚ್ಚ ಜಗತ್ತಥಾ ಶ್ರುತಿವಚೋ ಬ್ರಹ್ಮೈವ ತಜ್ಜಾದಿಕಂ ।
ಯತೋಽವಿದ್ಯೈವೇದಂ ಪರಿಲುಠತಿ ಮೋಹೇನ ಜಗತಿ
ಹ್ಯತೋ ವಿದ್ಯಾಪ್ರಾಪ್ತಃ ಪರಿಭವತಿ ಬ್ರಹ್ಮೈವ ಹಿ ಸದಾ ॥೬೩॥

---

ಬ್ರಹ್ಮನ ಹೊರತಾಗಿ ಇದು, ನಾನು, ನೀನು, ಎಂಬ ಬೇರೆ ವಸ್ತುಗಳೆಲ್ಲವೂ ಇಲ್ಲ. ಗುರುವೂ ಇಲ್ಲ, ಶಿಷ್ಯನೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ. ॥೫೯॥

ಬ್ರಹ್ಮವಸ್ತುವಿನ ಹೊರತಾಗಿ ಈ ಅಸತ್ಯ ವಸ್ತುಗಳಾವುವೂ ಇಲ್ಲ, ಶರೀರವೂ ಇಲ್ಲ, ಮನಸ್ಸೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ. ॥೬೦॥

ಎಲ್ಲವೂ ಬ್ರಹ್ಮವಸ್ತುವೇ ವಿನಾ ಅದಕ್ಕೊರತಾಗಿ ಕಾಣಿಸುವ ಜಗತ್ತೆಲ್ಲವೂ ಸುಳ್ಳು, ನಾನು-ಎಂಬುದೂ ಸುಳ್ಳು, ಅಹಂಕಾರವೂ ಸುಳ್ಳು. ॥೬೧॥

ಎಲ್ಲವೂ ಬ್ರಹ್ಮವಸ್ತುವೆ— ಎಂಬ ಈ ಪ್ರಕರಣವನ್ನು ನಿನಗೆ ಹೇಳಿರುವೆನು, ಇದನ್ನು ಯಾವನು ಕೇಳಿ ತಿಳಿದುಕೊಳ್ಳುವನೋ ಯಾವನು ಮತ್ತೊಬ್ಬರಿಗೆ ತಿಳಿಸುವನೋ, ಅವನು ಬ್ರಹ್ಮವೇ ಆಗುವನು. ॥೬೨॥

"ಅಸ್ತಿ ಬ್ರಹ್ಮ" "ಸತ್ಯಂಚಾನೃತಂ ಚ—ಯತೋವಾ " ಮುಂತಾದ ವೇದಾಂತವಾಕ್ಯಗಳೂ ಇದೇ ವಿಷಯವನ್ನೇ ನಿರೂಪಿಸುವುವು. ಅಂದರೆ-ಈ ಜಗತ್ತು

**ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಪಂಚದಶೋಽಧ್ಯಾಯಃ**

---

ವಸ್ತುತಃ ಇಲ್ಲ, ಅಸತ್ಯವಾದುದು, ಎಲ್ಲವೂ ಬ್ರಹ್ಮವಸ್ತುವೇ, ಆದರ ಹೊರತಾಗಿ ಯಾವುದೂ ಇಲ್ಲ-ಎಂದು ನಿರೂಪಿಸುವುದು. ಅದನ್ನು ಸರಿಯಾಗಿ ತಿಳಿದವನೂ ಬ್ರಹ್ಮನಾಗುವನು. ಎಂದು ಋಭುಮುನಿಯು ಬ್ರಹ್ಮಸ್ವರೂಪವನ್ನು ನಿದಾಘ ಮುನಿಗೆ ತಿಳಿಯಪಡಿಸಿದನು. ||೬೩||

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹದಿನೈದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಷೋಡಶೋಽಧ್ಯಾಯಃ

॥ ಋಭುರುವಾಚ ॥

ಅತ್ಯಂತಂ ದುರ್ಲಭಂ ವಕ್ಷ್ಯೇ ವೇದಶಾಸ್ತ್ರಾಗಮಾದಿಷು ।
ಶೃಣುಷ್ವ ಸಾವಧಾನೇನ ಅಸದೇವ ಹಿ ಕೇವಲಂ ॥೧॥

ಯತ್ಕಿಂಚಿದ್ದೃಶ್ಯತೇ ಲೋಕೇ ಯತ್ಕಿಂಚಿದ್ಭಾಷತೇ ಸದಾ ।
ಯತ್ಕಿಂಚಿದ್ಭುಜ್ಯತೇ ಲೋಕೇ ತತ್ಸರ್ವಮಸದೇವ ಹಿ ॥೨॥

ಯದ್ಯತ್ಕಿಂಚಿಜ್ಜಪಂ ವಾಽಪಿ ಸ್ನಾನಂ ವಾ ಜಲಮೇವ ವಾ ।
ಆತ್ಮನೋಽನ್ಯತ್ಪರಂ ಯತ್ತದಸತ್ಸರ್ವಂ ನ ಸಂಶಯಃ ॥೩॥

---

## ಹದಿನಾರನೆಯ ಅಧ್ಯಾಯ

ಎಲೈ ನಿದಾಘಮುನಿಯೇ ಕೇಳು, ವೇದಶಾಸ್ತ್ರಗಳಲ್ಲಿ ಹೇಳಿದ ಮತ್ತು ಸಾಮಾನ್ಯರಿಗೆ ತಿಳಿಯದಂತಹ "ಈ ಜಗತ್ತೆಲ್ಲವೂ ಅಸತ್ಯ (ಇಲ್ಲವೇ ಇಲ್ಲ)" ಎಂಬ ವಿಷಯವನ್ನು ನಿನಗೆ ಈಗ ಹೇಳುವೆನು. ಸಾವಧಾನತೆಯಿಂದ ಕೇಳು. ॥೧॥

ಈ ಪ್ರಪಂಚದಲ್ಲಿ ನಾವು ನೋಡುವಂತಹುದೆಲ್ಲವೂ ಆಡುವಂತಹುದೆಲ್ಲವೂ ಅನುಭವಿಸುವಂತಹುದೆಲ್ಲವೂ ಸಹ ಅಸತ್ಯವಾದುದು. ॥೨॥

ಆತ್ಮನ ಹೊರತಾಗಿ ನಾವು ಮಾಡುವಂತಹ ಜಪವಾಗಲೀ, ಸ್ನಾನವಾಗಲೀ ಇವೆಲ್ಲವೂ ಸಹ ಅಸತ್ಯವೆನ್ನುವುದರಲ್ಲಿ ಯಾವ ಸಂಶಯವೂ ಇಲ್ಲ. ॥೩॥

ಚಿತ್ತಕಾರ್ಯಂ ಬುದ್ಧಿಕಾರ್ಯಂ ಮಾಯಾಕಾರ್ಯಂ ತಥೈವ ಹಿ ।
ಆತ್ಮನೋಽನ್ಯತ್ಪರಂ ಕಿಂಚಿತ್ತತ್ಸರ್ವಮಸದೇವ ಹಿ ॥೪॥

ಅಹಂತಾಯಾಃ ಪರಂ ರೂಪಂ ಇದಂ ತ್ವಂ ಸತ್ಯಮಿತ್ಯಪಿ ।
ಆತ್ಮನೋಽನ್ಯತ್ಪರಂ ಕಿಂಚಿತ್ತತ್ಸರ್ವಮಸದೇವ ಹಿ ॥೫॥

ನಾನಾತ್ವಮೇವ ರೂಪತ್ವಂ ವ್ಯವಹಾರಃ ಕ್ವಚಿತ್ ಕ್ವಚಿತ್ ।
ಆತ್ಮೀಯ ಏವ ಸರ್ವತ್ರ ತತ್ಸರ್ವಮಸದೇವ ಹಿ ॥೬॥

ತತ್ವಭೇದಂ ಜಗದ್ಭೇದಂ ಸರ್ವಭೇದಮಸತ್ಯಕಂ ।
ಇಚ್ಛಾಭೇದಂ ಕ್ರಿಯಾಭೇದಂ ತತ್ಸರ್ವಮಸದೇವ ಹಿ ॥೭॥

ದ್ವೈತಭೇದಂ ಚಿತ್ತಭೇದಂ ಜಾಗ್ರದ್ಭೇದಂ ಮನೋಮಯಂ ।
ಅಹಂ ಭೇದಮಿದಂ ಭೇದಮಸದೇವ ಹಿ ಕೇವಲಂ ॥೮॥

---

ಆತ್ಮನ ಹೊರತಾಗಿ ಯಾವ ಮನಸ್ಸಿನ ಆಲೋಚನೆಗಳಾಗಲೀ, ಬುದ್ಧಿಯ ತಿಳಿವಳಿಕೆಯಾಗಲೀ ಮಾಯೆಯ ಮೋಹವಾಗಲೀ ಇಲ್ಲವು. ಅವೆಲ್ಲವೂ ಅಸತ್ಯ.॥೪॥

ಆತ್ಮನ ಹೊರತಾಗಿ ನಾನು, ನೀನು, ಇದು-ಅದು, ಸತ್ಯ-ಅಸತ್ಯ ಎನ್ನುವುದೆಲ್ಲವೂ ಅಸತ್ಯವು, ಆತ್ಮನೊಬ್ಬನೇ ಸತ್ಯಸ್ವರೂಪನು. ॥೫॥

ಕೆಲವೆಡೆ ಆತ್ಮನಿಗೆ ಸಂಬಂಧಪಟ್ಟಂತೆ ನಾನು-ನೀನು, ಎಂದು ಮೊದಲಾದ ಭೇದಗಳೂ ರೂಪಭೇದಗಳೂ ವ್ಯವಹಾರವೂ ನಿಜವಾದಂತೆ ತೋರುವುವು. ಆದರೆ ಅವೆಲ್ಲವೂ ಅಸತ್ಯ. ॥೬॥

ನೂರೆಂಟು ತತ್ವಗಳು, ನೂರಾರು ಲೋಕಗಳು ಎಂದು ಹೇಳುವ ಭೇದಗಳೆಲ್ಲವೂ, ನೂರೆಂಟುಬಗೆ ಇಚ್ಛೆಗಳೂ ಕ್ರಿಯೆಗಳೂ ಸಹ ಅಸತ್ಯವಾದವುಗಳು. ॥೭॥

ದ್ವೈತಗಳ ಭೇದ, ಬುದ್ಧಿಭೇದ, ಜಾಗ್ರದವಸ್ಥೆಯ ಭೇದ, ಸ್ವಪ್ನಭೇದ, ನಾನು-ನೀನು, ಇದು-ಅದು ಎಂಬ ಭೇದಗಳೆಲ್ಲವೂ ಅಸತ್ಯ. ॥೮॥

ಸ್ವಪ್ನಭೇದಂ ಸುಪ್ತಿಭೇದಂ ತುರ್ಯಭೇದಮಭೇದಕಂ
ಕರ್ತೃಭೇದಂ ಕಾರ್ಯಭೇದಂ ಗುಣಭೇದಂ ರಸಾತ್ಮಕಂ ।
ಲಿಂಗಭೇದಮಿದಂ ಭೇದಂ ತತ್ಸರ್ವಮಸದೇವ ಹಿ ॥೯॥

ಆತ್ಮಭೇದಮಸದ್ಭೇದಂ ಸದ್ಭೇದಮಸದಣ್ವಪಿ ।
ಅತ್ಯಂತಾಭಾವಸದ್ಭೇದಂ ತತ್ಸರ್ವಮಸದೇವ ಹಿ ॥೧೦॥

ಅಸ್ತಿಭೇದಂ ನಾಸ್ತಿಭೇದಂ ಅಭೇದಂ ಭೇದವಿಭ್ರಮಃ ।
ಭೀತಿಭೇದಂ ಭೂತಿಭೇದಂ ತತ್ಸರ್ವಮಸದೇವ ಹಿ ॥೧೧॥

ಪುನರನ್ಯತ್ರ ಸದ್ಭೇದಮಿದಮನ್ಯತ್ರ ವಾ ಭಯಂ ।
ಪುಣ್ಯಭೇದಂ ಪಾಪಭೇದಮಸದ್ಭೇದಮಸಣ್ವಪಿ ॥೧೨॥

ಸಂಕಲ್ಪಭೇದಂ ಸದ್ಭೇದಂ ಸದಾ ಸರ್ವತ್ರ ಭೇದಕಂ ।
ಜ್ಞಾನಾಜ್ಞಾನಮಯಂ ಸರ್ವಂ ತತ್ಸರ್ವಮಸದೇವ ಹಿ ॥೧೩॥

---

ಸುಷುಪ್ತಿಯ ಭೇದ, ಕೊನೆಯ ಭೇದ, ಕರ್ತೃಭೇದ, ಕಾರ್ಯಭೇದ, ಗುಣಗಳ ಭೇದ, ರಸಗಳ ಭೇದ, ಜಾತಿಭೇದ ಇವೆಲ್ಲವೂ ಅಸತ್ಯ. ॥೯॥

ನೂರೆಂಟುಜೀವಾತ್ಮರೆಂಬ ಭೇದ, ಅಸತ್ಯವಾದ ಮೊಲದ ಕೊಂಬು ಮೊದಲಾದವುಗಳ ಭೇದ, ಸತ್ಯದ ಭೇದ, ಅತ್ಯಂತಾಭಾವದ ಭೇದ-ಇವೆಲ್ಲವೂ ಅಸತ್ಯ. ॥೧೦॥

ಇದೆ-ಎನ್ನುವ ಭೇದ, ಇಲ್ಲ-ಎನ್ನುವ ಭೇದ, ಶಿವವಿಶಿಷ್ಟಾದ್ವೈತ, ಶಕ್ತಿವಿಶಿಷ್ಟಾದ್ವೈತ, ವಿಷ್ಣುವಿಶಿಷ್ಟಾದ್ವೈತಗಳೆನ್ನುವ ಅದ್ವೈತಭೇದಗಳು, ಭಯದ ಭೇದ, ಐಶ್ವರ್ಯಭೇದ- ಇವೆಲ್ಲವೂ ಅಸತ್ಯ, ಆತ್ಮನೊಬ್ಬನೇ ಸತ್ಯ. ॥೧೧॥

ಪುನಃ-ಎನ್ನುವ ಭೇದ, ಇನ್ನೊಂದೆಡೆಯಿದೆ-ಎನ್ನುವ ಭೇದ, ಅಲ್ಲಿ ತುಂಬಾ ಭಯ-ವೆನ್ನುವ ಭೇದ, ಪುಣ್ಯಭೇದ-ಇವೆಲ್ಲವೂ ಅಸತ್ಯ. ॥೧೨॥

ಸಂಕಲ್ಪ (ಕಲ್ಪನೆಗಳ) ಭೇದ, ಅನೇಕ ಸತ್ಯವಸ್ತುಗಳಿವೆಯೆಂದು ಕಲ್ಪಿಸುವ ಭೇದ, ಜ್ಞಾನಭೇದ, ಅಜ್ಞಾನಭೇದ- ಇವೆಲ್ಲವೂ ಅಸತ್ಯವು. ॥೧೩॥

ಬ್ರಹ್ಮಭೇದಂ ಕ್ಷತ್ರಭೇದಂ ಲೋಕಾನಾಂ ಭೇದಮೀದೃಶಂ ।
ಜ್ಞಾನಾಜ್ಞಾನಮಯಂ ಸರ್ವಂ ತತ್ಸರ್ವಮಸದೇವ ಹಿ ॥೧೪॥

ಇದಂ ಭೇದಮಹಂ ಭೇದಮಸದೇವ ಹಿ ಕೇವಲಂ ॥೧೫॥

ವೇದಭೇದಂ ದೇವಭೇದ ಭೂತಭೌತಿಕಭೇದಕಂ ।
ಪಂಚಾಕ್ಷರಮಸನ್ನಿತ್ಯಂ ಅಸದೇವ ಹಿ ಕೇವಲಂ ॥೧೬॥

ಜ್ಞಾನೇಂದ್ರಿಯಮಸನ್ನಿತ್ಯಂ ಕರ್ಮೇಂದ್ರಿಯಮಸತ್ಸದಾ ।
ಅಸದೇವ ಹಿ ಶಬ್ದಾಖ್ಯಂ ಅಸತ್ಯಂ ತತ್ಫಲಂ ಸದಾ ॥೧೭॥

ಅಸತ್ಯಂ ಪಂಚಭೂತಾಖ್ಯಂ ಅಸತ್ಯಂ ಪಂಚದೇವತಾಃ ।
ಅಸತ್ಯಂ ಪಂಚಕೋಶಾಖ್ಯಂ ಅಸದೇವ ಹಿ ಕೇವಲಂ ॥೧೮॥

ಅಸತ್ಯಂ ಷಡ್ವಿಕಾರಾದಿ ಅಸತ್ಯಂ ಷಟ್ತಥೋರ್ಮಿಣಾಂ ।
ಅಸತ್ಯಮರಿಷಡ್ವರ್ಗಮಸತ್ಯಂ ಷಡೃತುಸ್ತಥಾ ॥೧೯॥

---

ಬ್ರಾಹ್ಮಣಭೇದ, ಕ್ಷತ್ರಿಯಭೇದ, ಲೋಕಗಳ ಭೇದ-ಇವೆಲ್ಲವೂ ಅಜ್ಞಾನ ಕಲ್ಪಿತಗಳು, ಇವೆಲ್ಲವೂ ಅಸತ್ಯ. ॥೧೪॥

ನಾನು-ಎಂಬ ಭೇದ, ನೀನು-ಎಂಬ ಭೇದ, ವೇದಗಳ ಭೇದ, ದೇವತೆಗಳ ಭೇದ, ಪಂಚಭೂತಗಳ ಭೇದ, ಅವುಗಳಿಂದಾಗುವ ವಸ್ತುಗಳ ಭೇದ, ಪಂಚಾಕ್ಷರ ಮಂತ್ರಭೇದ, ಈ ಭೇದಗಳೆಲ್ಲವೂ ಅಸತ್ಯ. ॥೧೫-೧೬॥

ಜ್ಞಾನೇಂದ್ರಿಯಗಳು ಅಸತ್ಯ, ಕರ್ಮೇಂದ್ರಿಯಗಳು ಅಸತ್ಯ, ಶಬ್ದವೆಂಬುದು ಅಸತ್ಯ, ಆ ಶಬ್ದದ ಫಲವೂ ಅಸತ್ಯವೆ. ॥೧೭॥

ಪಂಚಭೂತಗಳು ಅಸತ್ಯ, ಪಂಚಾಯತನ ದೇವತೆಗಳು ಅಸತ್ಯ, ಪಂಚ ಕೋಶಗಳೆನ್ನುವವೂ ಅಸತ್ಯ, ಬ್ರಹ್ಮವಸ್ತುವೊಂದರ ಹೊರತು ಮಿಕ್ಕೆಲ್ಲವೂ ಅಸತ್ಯ. ॥೧೮॥

ಜನನ-ಮೊದಲಾದ ಆರು ವಿಕಾರಗಳೂ, ಶೀತೋಷ್ಣ, ಸುಖದುಃಖಗಳೆಂಬ ಷಡೂರ್ಮಿಗಳೂ, ಕಾಮ-ಮೊದಲಾದ ಆರು ಶರೀರಶತ್ರುಗಳೂ, ವಸಂತ-ಮೊದಲಾದ ಆರು ಋತುಗಳೂ ಸಹ ಅಸತ್ಯಗಳು. ॥೧೯॥

ಅಸತ್ಯಂ ದ್ವಾದಶಮಾಸಾಃ ಅಸತ್ಯಂ ವತ್ಸರಾಸ್ತಥಾ ।
ಅಸತ್ಯಂ ಷಡವಸ್ಥಾಖ್ಯಂ ಷಟ್ಕಾಲಮಸದೇವ ಹಿ ॥೨೦॥

ಅಸತ್ಯಮೇವ ಷಟ್‌ಶಾಸ್ತ್ರಮಸದೇವ ಹಿ ಕೇವಲಂ ॥೨೧॥

ಅಸದೇವ ಹಿ ಷಣ್ಮಾಸಮಸದೇವ ಹಿ ವತ್ಸರಂ ।
ಅಸದೇವ ಸದಾ ಜ್ಞಾನಮಸದೇವ ಹಿ ಕೇವಲಂ ॥೨೨॥

ಅನುಕ್ತಮುಕ್ತಂ ನೋಕ್ತಂ ಚ ಅಸದೇವ ಹಿ ಕೇವಲಂ ।
ಅಸತ್ಪ್ರಕರಣಂ ಚೋಕ್ತಂ ಸರ್ವವೇದೇಷು ದುರ್ಲಭಂ ॥೨೩॥

ಭೂಯಃ ಶೃಣುತ್ವಂ ಯೋಗೀಂದ್ರ ಸಾಕ್ಷಾನ್ಮೋಕ್ಷಂ ಬ್ರವೀಮ್ಯಹಂ ।
ಸನ್ಮಾತ್ರಮಹಮೇವಾತ್ಮಾ ಸಚ್ಚಿದಾನಂದಕೇವಲಂ ॥೨೪॥

ಸನ್ಮಯಾನಂದಭೂತಾತ್ಮಾ ಚಿನ್ಮಯಾನಂದಸದ್ಘನಃ ।
ಚಿನ್ಮಯಾನಂದಸಾಂದ್ರೋಽಹಂ ಚಿದಾನಂದೋಽಸ್ಮಿ ಕೇವಲಂ ॥೨೫॥

---

ಹನ್ನೆರಡು ತಿಂಗಳುಗಳೆನ್ನುವುವು ಅಸತ್ಯ, ಆರು ಕಾಲಗಳೆನ್ನುವುವು ಅಸತ್ಯ. ಶೈಶವಾದಿ ಷಡವಸ್ಥೆಗಳೂ ಸುಳ್ಳು. ವತ್ಸರಾದಿಗಳೂ ಅಸತ್ಯ. ॥೨೦॥

ಆರು ಶಾಸ್ತ್ರಗಳು ಅಸತ್ಯ, ಆರು ಮಾಸಗಳೂ ವರ್ಷಗಳೂ ಅಸತ್ಯ, ಜ್ಞಾನಾಜ್ಞಾನಗಳೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ. ॥೨೧-೨೨॥

ಈಗ ನಾನು ಹೇಳಿದುದೂ ಹೇಳದುದೂ ಎಲ್ಲವೂ ಸಹ ಅಸತ್ಯ. ಹೀಗೆ ನಿನಗೆ ವೇದಗಳಲ್ಲೂ ದುರ್ಲಭವಾದ ಈ ಅಸತ್ಪ್ರಕರಣವನ್ನು ಹೇಳಿರುವೆನು. ॥೨೩॥

ಎಲೈ ಯೋಗಿವರ್ಯನಾದ ನಿದಾಘಮುನಿಯೇ, ಮೋಕ್ಷಸ್ವರೂಪವನ್ನು ಹೇಳುವೆನು ಕೇಳು. ನಾನು ಸತ್ಯಸ್ವರೂಪನಾದ ಆನಂದಸ್ವರೂಪನಾದ ಜ್ಞಾನಸ್ವರೂಪನಾದ ಆತ್ಮನು. ಇಂತಹ ಆತ್ಮನೇ ಮೋಕ್ಷಸ್ವರೂಪನು. ॥೨೪॥

ಸತ್ಯಸ್ವರೂಪನಾದ ಆನಂದಮೂರ್ತಿಯು ನಾನು, ಜ್ಞಾನಪ್ರಕಾಶಸ್ವರೂಪನು ನಾನು, ಜ್ಞಾನರೂಪವಾದ ಆನಂದಮಯನು ನಾನು, ಇಂತಹ ಚಿದಾನಂದನು ನಾನು. ॥೨೫॥

ಚಿನ್ಮಾತ್ರಜ್ಯೋತಿರಾನಂದಃ ಚಿನ್ಮಾತ್ರಜ್ಯೋತಿವಿಗ್ರಹಃ ।
ಚಿನ್ಮಾತ್ರಜ್ಯೋತಿರೀಶಾನೋ ಸರ್ವದಾನಂದಕೇವಲಂ ॥೨೬॥

ಚಿನ್ಮಾತ್ರಜ್ಯೋತಿರಖಿಲಂ ಚಿನ್ಮಾತ್ರಜ್ಯೋತಿರಸ್ಮ್ಯಹಂ ।
ಚಿನ್ಮಾತ್ರಜ್ಯೋತಿರಾನಂದಶ್ಚಿನ್ಮಾತ್ರಜ್ಯೋತಿರಸ್ಮ್ಯಹಂ ॥೨೭॥

ಸನ್ಮಾತ್ರಂ ಸರ್ವಮೇವಾಹಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಮೇವ ಚಿತ್ತಂ ಚ ಚಿನ್ಮಾತ್ರಂ ಮೋಕ್ಷ ಏವ ಚ ॥೨೮॥

ಚಿನ್ಮಾತ್ರಂ ಪರಮಾನಂದಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಮೇವ ಮನನಂ ಚಿನ್ಮಾತ್ರಂ ಶ್ರವಣಂ ತಥಾ ॥೨೯॥

ಚಿನ್ಮಾತ್ರಮಹಮೇವಾಸ್ಮಿ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಂ ನಿರ್ಗುಣಂ ಬ್ರಹ್ಮ ಚಿನ್ಮಾತ್ರಂ ಸಗುಣಂ ಪರಂ ॥೩೦॥

---

ಜ್ಞಾನಜ್ಯೋತಿಪ್ರಕಾಶನಾದ ಆನಂದಮೂರ್ತಿಯು ನಾನು. ಜ್ಞಾನಜ್ಯೋತಿಶರೀರನು ನಾನು, ಜ್ಞಾನಜ್ಯೋತಿಪ್ರಕಾಶಸ್ವರೂಪನಾದ ಈಶ್ವರನು ನಾನು, ಸದಾ ನಾನು ಆನಂದಸ್ವರೂಪನು. ॥೨೬॥

ಎಲ್ಲವೂ ಜ್ಞಾನಜ್ಯೋತಿಯ ಪ್ರಕಾಶಸ್ವರೂಪವು, ಆ ಜ್ಞಾನಜ್ಯೋತಿಪ್ರಕಾಶವು ನಾನು, ಜ್ಞಾನಜ್ಯೋತಿಪ್ರಕಾಶರೂಪನಲ್ಲದೇ ನಾನು ಆನಂದಮೂರ್ತಿಯೂ ಆಗಿರುವೆನು. ॥೨೭॥

ಎಲ್ಲವೂ ಸತ್ಯಸ್ವರೂಪವಾದ ಜ್ಞಾನಸ್ವರೂಪವಾಗಿರುವುದು, ಮನಸ್ಸೂ ಹಾಗೆಯೇ ಇರುವುದು, ಮೋಕ್ಷಸ್ವರೂಪವೂ ಸತ್ಯಜ್ಞಾನಸ್ವರೂಪವುಳ್ಳದುದು, ಅಂತಹ ಮೋಕ್ಷರೂಪನು ನಾನು. ॥೨೮॥

ಆನಂದವು ಜ್ಞಾನಸ್ವರೂಪವಾದುದು, ಶ್ರವಣಮನನಗಳು ಜ್ಞಾನಸ್ವರೂಪವಾದವುಗಳು. ನಿರ್ಗುಣಬ್ರಹ್ಮವೂ ಜ್ಞಾನಸ್ವರೂಪವು, ಸಗುಣನಾದ ಈಶ್ವರನೂ ಜ್ಞಾನಸ್ವರೂಪನು. ನಾನು ಜ್ಞಾನಸ್ವರೂಪನು. ಎಲ್ಲವೂ ಜ್ಞಾನಸ್ವರೂಪವು, ಇದೇ ಮೋಕ್ಷಸ್ವರೂಪವು. ॥೩೦॥

ಚಿನ್ಮಾತ್ರಮಹಮೇವ ತ್ವಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಮೇವ ಹೃದಯಂ ಚಿನ್ಮಾತ್ರಂ ಚಿನ್ಮಯಂ ಪರಂ ॥೩೧॥

ಚಿದೇವ ತ್ವಂ ಚಿದೇವಾಹಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿನ್ಮಾತ್ರಮೇವ ಶಾಂತತ್ವಂ ಚಿನ್ಮಾತ್ರಂ ಶಾಂತಿಲಕ್ಷಣಂ ॥೩೨॥

ಚಿನ್ಮಾತ್ರಮೇವ ವಿಜ್ಞಾನಂ ಚಿನ್ಮಾತ್ರಂ ಜಗದೇವ ಹಿ ॥೩೩॥

ಚಿನ್ಮಾತ್ರಮೇವ ಚೈತನ್ಯಂ ಚಿನ್ಮಾತ್ರಂ ಭಾಸ್ಕರಾದಿಕಂ ।
ಚಿನ್ಮಾತ್ರಮೇವ ಸನ್ಮಾತ್ರಂ ಚಿನ್ಮಾತ್ರಂ ಬ್ರಹ್ಮ ಕೇವಲಂ ॥೩೪॥

ಚಿನ್ಮಾತ್ರಮೇವ ಸತ್ಕರ್ಮ ಚಿನ್ಮಾತ್ರಂ ನಿತ್ಯಮಂಗಲಂ ।
ಚಿನ್ಮಾತ್ರಮೇವ ಹಿ ಬ್ರಹ್ಮಾ ಚಿನ್ಮಾತ್ರಂ ಹರಿರೇವ ಹಿ ॥೩೫॥

ಚಿನ್ಮಾತ್ರಮೇವ ಮಾನಾತ್ಮಾ ಚಿನ್ಮಾತ್ರಂ ಸಿದ್ಧಿರೇವ ಹಿ ।
ಚಿನ್ಮಾತ್ರಮೇವ ಜನಿತಂ ಚಿನ್ಮಾತ್ರಂ ಸುಖಮೇವ ಹಿ ॥೩೬॥

---

ನೀನೂ ಜ್ಞಾನಸ್ವರೂಪನು, ನಾನೂ ಜ್ಞಾನಸ್ವರೂಪನು, ಹೃದಯವೂ ಜ್ಞಾನಸ್ವರೂಪವಾದುದು, ಪರಮೇಶ್ವರನೂ ಜ್ಞಾನಸ್ವರೂಪನು, ಎಲ್ಲವೂ ಜ್ಞಾನ ಸ್ವರೂಪವು. ॥೩೧॥

ನೀನು ಚಿನ್ಮಯನು (ಜ್ಞಾನಮೂರ್ತಿಯು) ನಾನು ಚಿನ್ಮಯನು, ಎಲ್ಲವೂ ಚಿನ್ಮಯವು. ಶಾಂತಸ್ವಭಾವವು ಚಿನ್ಮಯವು. ಶಾಂತಿಯು ಚಿನ್ಮಯವು. ಚಿನ್ಮಯ ತೆಯೇ ಶಾಂತಿ. ॥೩೨॥

ವಿಶೇಷಜ್ಞಾನವು (ಪಾಂಡಿತ್ಯವು) ಚಿನ್ಮಯವೇ. ಜಗತ್ತೆಲ್ಲವು ಚಿತ್ಸ್ವರೂ ಪವೇ. ॥೩೩॥

ಚೈತನ್ಯವೂ ಚಿನ್ಮಯವು, ಸೂರ್ಯಚಂದ್ರ ಮೊದಲಾದವರೂ ಚಿನ್ಮಯರು, ಇದೆ-ಎನ್ನುವುದೆಲ್ಲವೂ ಚಿನ್ಮಯವು. ಬ್ರಹ್ಮವಸ್ತುವೇ ಚಿನ್ಮಯವು. ॥೩೪॥

ಒಳ್ಳೆಯ ಕಾರ್ಯಗಳೆಲ್ಲವೂ ಚಿನ್ಮಯವು, ಮಂಗಳವೆನ್ನುವುದೆಲ್ಲವೂ ಚಿನ್ಮ ಯವು. ಬ್ರಹ್ಮನು ಚಿನ್ಮಯನೇ, ಹರಿಯು ಚಿನ್ಮಯನೇ. ॥೩೫॥

ಪ್ರಮಾಣಗಳೆಲ್ಲವೂ ಚಿನ್ಮಯವೇ, ಪ್ರಮಾಣಗಳಿಂದ ಸಿದ್ಧಿಸುವುದೆಲ್ಲವೂ ಚಿನ್ಮಯವೇ. ಜನಿಸಿದುದೆಲ್ಲವೂ ಚಿನ್ಮಯವೇ, ಸುಖವು ಚಿನ್ಮಯವೇ. ॥೩೬॥

ಚಿನ್ಮಾತ್ರಮೇವ ಗಗನಂ ಚಿನ್ಮಾತ್ರಂ ಪರ್ವತೋ ಜಲಂ ।
ಚಿನ್ಮಾತ್ರಮೇವ ನಕ್ಷತ್ರಂ ಚಿನ್ಮಾತ್ರಂ ಮೇಘ ಏವ ಹಿ ॥೩೭॥

ಚಿದೇವ ದೇವತಾಕಾರಂ ಚಿದೇವ ಶಿವಪೂಜನಂ ।
ಚಿನ್ಮಾತ್ರಮೇವ ಕಾಠಿಣ್ಯಂ ಚಿನ್ಮಾತ್ರಂ ಶೀತಲಂ ಜಲಂ ॥೩೮॥

ಚಿನ್ಮಾತ್ರಮೇವ ಮಂತವ್ಯಂ ಚಿನ್ಮಾತ್ರಂ ದೃಶ್ಯಭಾವನಂ ।
ಚಿನ್ಮಾತ್ರಮೇವ ಸಕಲಂ ಚಿನ್ಮಾತ್ರಂ ಭುವನಂ ಪಿತಾ ॥೩೯॥

ಚಿನ್ಮಾತ್ರಮೇವ ಜನನೀ ಚಿನ್ಮಾತ್ರಾನ್ನಾಸ್ತಿ ಕಿಂಚನ ।
ಚಿನ್ಮಾತ್ರಮೇವ ನಯನಂ ಚಿನ್ಮಾತ್ರಂ ಶ್ರವಣಂ ತಥಾ ॥೪೦॥

ಚಿನ್ಮಾತ್ರಮೇವ ಕರಣಂ ಚಿನ್ಮಾತ್ರಂ ಕಾರ್ಯಮೀಶ್ವರಃ ।
ಚಿನ್ಮಾತ್ರಂ ಚಿನ್ಮಯಂ ಸತ್ಯಂ ಚಿನ್ಮಾತ್ರಾನ್ನಾಸ್ತಿ ನಾಸ್ತಿ ಹಿ ॥೪೧॥

---

ಆಕಾಶವು ಚಿನ್ಮಯವೇ, ಬೆಟ್ಟವು ಚಿನ್ಮಯವೇ, ಜಲವು ಚಿನ್ಮಯವೇ, ನಕ್ಷತ್ರಗಳೂ ಚಿನ್ಮಯಗಳೇ, ಮೇಘವು ಚಿನ್ಮಯವೇ. ॥೩೭॥

ದೇವತಾಸ್ವರೂಪವು ಚಿನ್ಮಯವೇ, ಶಿವಪೂಜೆಯು ಚಿನ್ಮಯವೇ, ಕಠಿಣತೆಯು ಚಿನ್ಮಯವೇ, ತಣ್ಣೀರೂ ಸಹ ಚಿನ್ಮಯವೇ. ॥೩೮॥

ಯೋಚನೆಗೆ ವಿಷಯವಾದುದೂ ಚಿನ್ಮಯವೇ, ಕಾಣಿಸುವುದೆಲ್ಲವೂ ಚಿನ್ಮಯವೇ, ಎಲ್ಲವೂ ಚಿನ್ಮಯವೇ, ಲೋಕಗಳೆಲ್ಲವೂ ಚಿನ್ಮಯವೇ, ತಂದೆಯೂ ಚಿನ್ಮಯನೇ. ॥೩೯॥

ತಾಯಿಯೂ ಚಿನ್ಮಯಳೇ, ಕಣ್ಣು ಚಿನ್ಮಯವು, ಕಿವಿಯು ಚಿನ್ಮಯವು, ಚಿನ್ಮಯವಾದ ಪರವಸ್ತುವಿಗಿಂತ ಬೇರೆಯಾಗಿ ಯಾವುದೂ ಇಲ್ಲವು. ॥೪೦॥

ಸಾಧನಗಳೆಲ್ಲವೂ ಚಿನ್ಮಯವೇ, ಅವುಗಳಿಂದಾಗುವ ಕಾರ್ಯಗಳೆಲ್ಲವೂ ಚಿನ್ಮಯವೇ, ಈಶ್ವರನೂ ಚಿನ್ಮಯನೇ, ಚಿನ್ಮಯವೂ ಚಿನ್ಮಯವೇ, ಚಿನ್ಮಯವಾದ ಪರವಸ್ತುವಿನ ಹೊರತು ಬೇರಾವ ವಸ್ತುವೂ ಇಲ್ಲವು. ॥೪೧॥

ಚಿನ್ಮಾತ್ರಮೇವ ವೇದಾಂತಂ ಚಿನ್ಮಾತ್ರಂ ಬ್ರಹ್ಮನಿಶ್ಚಯಃ ।
ಚಿನ್ಮಾತ್ರಮೇವ ಸದ್ಭಾವಿ ಚಿನ್ಮಾತ್ರಂ ಭಾತಿ ನಿತ್ಯಶಃ ॥೪೨॥

ಚಿದೇವ ಜಗದಾಕಾರಂ ಚಿದೇವ ಪರಮಂ ಪದಂ ।
ಚಿದೇವ ಹಿ ಚಿದಾಕಾರಂ ಚಿದೇವ ಹಿ ಚಿದವ್ಯಯಃ ॥೪೩॥

ಚಿದೇವ ಹಿ ಶಿವಾಕಾರಂ ಚಿದೇವ ಶಿವನಿಗ್ರಹಃ ।
ಚಿದಾಕಾರಮಿದಂ ಸರ್ವಂ ಚಿದಾಕಾರಂ ಸುಖಾಸುಖಂ ॥೪೪॥

ಚಿದೇವ ಹಿ ಜಡಾಕಾರಂ ಚಿದೇವ ಹಿ ನಿರಂತರಂ ।
ಚಿದೇವ ಕಲನಾಕಾರಂ ಜೀವಾಕಾರಂ ಚಿದೇವ ಹಿ ॥೪೫॥

ಚಿದೇವ ದೇವತಾಕಾರಂ ಚಿದೇವ ಶಿವಪೂಜನಂ ।
ಚಿದೇವ ತ್ವಂ ಚಿದೇವಾಹಂ ಸರ್ವಂ ಚಿನ್ಮಾತ್ರಮೇವ ಹಿ ॥೪೬॥

---

ವೇದಾಂತವೆಲ್ಲವೂ ಚಿನ್ಮಯವು, ಬ್ರಹ್ಮಜ್ಞಾನವು ಚಿನ್ಮಯವೇ. "ಇದೆ" ಎಂದು ಪ್ರಕಾಶಿಸುವುದೆಲ್ಲವೂ ಚಿನ್ಮಯವೇ, ಚಿನ್ಮಯವಾದ ಪರವಸ್ತುವೇ ಜಗತ್ತಿನಲ್ಲೆಲ್ಲಾ ಪ್ರಕಾಶಿಸುವುದು. ॥೪೨॥

ಚಿನ್ಮಯವಾದ ಪರವಸ್ತುವೇ ಜಗತ್ತಿನಂತೆ ತೋರುವುದು, ಅಂದರೆ ಜಗತ್ತೆಲ್ಲವು ಚಿದ್ವಸ್ತುವಿನ ಪ್ರಕಾಶವೇ ವಿನಾ ಬೇರೆಯಲ್ಲ, ಬೇರೆಯಿಲ್ಲ. ಚಿನ್ಮಯವಾದ ಪರವಸ್ತುವೇ ಪರಮಪದವಿಯು, ಅವಿನಾಶಿಯಾದುದು ಚಿದ್ವಸ್ತುವೊಂದೇ. ॥೪೩॥

ಚಿನ್ಮಯವಾದ ಪರವಸ್ತುವೇ ಶಿವನು, ಶಿವಸ್ವರೂಪವೇ ಚಿನ್ಮಯವು. ಈ ಜಗತ್ತೆಲ್ಲವೂ ಚಿನ್ಮಯವೇ, ಸುಖದುಃಖಗಳೂ ಚಿದ್ವಸ್ತುವಿನ ಜ್ಞಾನಾಕಾರಗಳು, ಸಂತೋಷಜ್ಞಾನವು ಸುಖ, ಶೋಕಜ್ಞಾನವು ದುಃಖವಲ್ಲವೆ ? ॥೪೪॥

ಚಿದ್ವಸ್ತುವೇ ಜಡವಸ್ತುವಿನಂತೆ ತೋರುವುದು, ಕಾರಣವೇನೆಂದರೆ—ಜ್ಞಾನರೂಪವಾದ ಆ ಪರವಸ್ತುವೇ ಎಲ್ಲೆಡೆಯಲ್ಲೂ ನಿರಂತರವಾಗಿರುವುದು. ಕಾಲವೂ ಸಹ ಚಿನ್ಮಯವು. ಜೀವನೂ ಚಿನ್ಮಯನು. ॥೪೫॥

ದೇವತೆಗಳು ಚಿನ್ಮಯರು, ಶಿವಪೂಜೆಯು ಚಿನ್ಮಯವಾದುದು. ನೀನೇ ಚಿನ್ಮಯನು, ನಾನೂ ಚಿನ್ಮಯನು, ಎಲ್ಲವೂ ಚಿನ್ಮಯವೇ. ॥೪೬॥

ಚಿದೇವ ಪರಮಾಕಾರಂ ಚಿದೇವ ಹಿ ನಿರಾಮಯಂ ।
ಚಿನ್ಮಾತ್ರಮೇವ ಸತತಂ ಚಿನ್ಮಾತ್ರಂ ಹಿ ಪರಾಯಣಂ ॥೪೭॥

ಚಿನ್ಮಾತ್ರಮೇವ ವೈರಾಗ್ಯಂ ಚಿನ್ಮಾತ್ರಂ ನಿರ್ಗುಣಂ ಸದಾ ।
ಚಿನ್ಮಾತ್ರಮೇವ ಸಂಚಾರಂ ಚಿನ್ಮಾತ್ರಂ ಮಂತ್ರತಂತ್ರಕಂ ॥೪೮॥

ಚಿದಾಕಾರಮಿದಂ ವಿಶ್ವಂ ಚಿದಾಕಾರಂ ಜಗತ್ತ್ರಯಂ ।
ಚಿದಾಕಾರಮಹಂಕಾರಂ ಚಿದಾಕಾರಂ ಪರಾತ್ಪರಂ ॥೪೯॥

ಚಿದಾಕಾರಮಿದಂ ಭೇದಂ ಚಿದಾಕಾರಂ ತೃಣಾದಿಕಂ ।
ಚಿದಾಕಾರಂ ಚಿದಾಕಾಶಂ ಚಿದಾಕಾರಮರೂಪಕಂ ॥೫೦॥

ಚಿದಾಕಾರಂ ಮಹಾನಂದಂ ಚಿದಾಕಾರಂ ಸುಖಾತ್ಮಕಂ ।
ಚಿದಾಕಾರಂ ಸುಖಂ ಭೋಜ್ಯಂ ಚಿದಾಕಾರಂ ಪರಂ ಗುರುಂ ॥೫೧॥

---

ಚಿನ್ಮಯವಾದ ಪರವಸ್ತುವೇ ಸರ್ವೋತ್ಕೃಷ್ಟವಾದುದು. ಆ ವಸ್ತುವಿಗೆ ಯಾವ ರೋಗವಿಕಾರಗಳೂ ಇಲ್ಲ. ಎಲ್ಲೆಡೆಯಲ್ಲೂ ಆ ವಸ್ತುವೇ ಜ್ಞಾನರೂಪದಿಂದ ಇರುವುದು, ಚಿನ್ಮಯವಸ್ತುವೇ ಎಲ್ಲರಿಗೂ ಪರಮಗತಿಯು. ॥೪೭॥

ವೈರಾಗ್ಯವು ಚಿನ್ಮಯವಸ್ತುವೇ, ಆ ಪರವಸ್ತುವು ನಿರ್ಗುಣವಾದುದು, ಗಮನವೂ ಚಿನ್ಮಯವೇ, ಮಂತ್ರತಂತ್ರಗಳೂ ಚಿನ್ಮಯವಾದ ಪರವಸ್ತುವೇ. ॥೪೮॥

ಈ ಪ್ರಪಂಚವೆಲ್ಲವೂ ಚಿನ್ಮಯವಾದುದು, ಮೂರುಲೋಕಗಳೂ ಚಿನ್ಮಯವು. ನಾನು-ಎನ್ನುವ ಜೀವನೂ ಚಿನ್ಮಯನು, ಪರಮೇಶ್ವರನೂ ಚಿನ್ಮಯನೇ. ॥೪೯॥

ಭೇದವೆಲ್ಲವೂ ಚಿನ್ಮಯವೇ, ಹುಲ್ಲುಕಡ್ಡಿ ಮುಂತಾದುದೂ ಚಿನ್ಮಯವೇ, ಆಕಾರವು ಚಿನ್ಮಯವು, ಆಕಾಶವು ಚಿನ್ಮಯವು, ಚಿನ್ಮಯವು ರೂಪವಿಲ್ಲದುದು.॥೫೦॥

ಆನಂದವು ಚಿನ್ಮಯವು, ಸುಖವು ಚಿನ್ಮಯವು, ಸುಖಸಾಧನವು ಚಿನ್ಮಯವು, ಸುಖವನ್ನನುಭವಿಸುವವನೂ ಚಿನ್ಮಯನು, ಎಲ್ಲರೂ ಚಿನ್ಮಯರು. ॥೫೧॥

ಚಿದಾಕಾರಮಿದಂ ಲೋಕಂ ಚಿದಾಕಾರಮಯಂ ಪುಮಾನ್ ।
ಚಿದಾಕಾರಮಜಂ ಶಾಂತಂ ಚಿದಾಕಾರಮನಾಮಯಂ ॥೫೨॥

ಚಿದಾಕಾರಂ ಪರಾತೀತಂ ಚಿದಾಕಾರಂ ಚಿದೇವ ಹಿ ।
ಚಿದಾಕಾರಂ ಚಿದಾಕಾಶಂ ಚಿದಾಕಾರಂ ಶಿವಾಯತೇ ॥೫೩॥

ಚಿದಾಕಾರಂ ಸದಾ ಚಿತ್ತಂ ಚಿದಾಕಾರಂ ಸದಾಽಮೃತಂ ।
ಚಿದಾಕಾರಮಿದಂ ಸ್ಥಾನಂ ಚಿದಾಕಾರಂ ಹೃದಂಬರಂ ॥೫೪॥

ಚಿದಾಬೋಧಂ ಚಿದಾಕಾರಂ ಚಿದಾಕಾಶಂ ತತಂ ಸದಾ ।
ಚಿದಾಕಾರಂ ಸದಾ ಪೂರ್ಣಂ ಚಿದಾಕಾರಂ ಮಹತ್ಫಲಂ ॥೫೫॥

ಚಿದಾಕಾರಂ ಪರಂ ತತ್ವಂ ಚಿದಾಕಾರಂ ಪರಂ ಭವಾನ್ ।
ಚಿದಾಕಾರಂ ಸದಾ ಮೋದಂ ಚಿದಾಕಾರಂ ಸದಾಽಮೃತಂ ॥೫೬॥

---

ಈ ಲೋಕವು ಚಿನ್ಮಯವು, ಈ ಪುರುಷನು ಚಿನ್ಮಯನು, ಚಿನ್ಮಯವಾದ ಪರಮಾತ್ಮವಸ್ತುವು ಜನನವಿಲ್ಲದುದು, ಶಾಂತವಾದುದು, ನಿರ್ಮಲವಾದುದು. ನೀರೋಗವಾದುದು, ಪರಿಶುದ್ಧವಾಗಿರುವುದು. ॥೫೨॥

ಉಚ್ಚ-ನೀಚ, ಮೇಲುಕೀಳೆಂಬ ಭೇದಗಳು ಚಿನ್ಮಯವಸ್ತುವಿಗಿಲ್ಲ, ಚಿನ್ಮಯ (ಜ್ಞಾನಮಯ) ವಸ್ತುವು ಚಿತ್ತೇ (ಜ್ಞಾನಸ್ವರೂಪೀಪರಮಾತ್ಮನೇ) ಆಗಿರುವುದು. ಆ ಚಿನ್ಮಯವಸ್ತುವೇ ಪರಶಿವನ ಸ್ವರೂಪವಾಗುವುದು. ॥೫೩॥

ಮನಸ್ಸು ಚಿನ್ಮಯವಾದುದು, ಅಮೃತವು ಚಿನ್ಮಯವಾದುದು, ಈಸ್ಥಾನವು ಚಿನ್ಮಯವಾದುದು. ಹೃದಯಾಕಾಶವು ಚಿನ್ಮಯವಾದುದು. ॥೫೪॥

ಜ್ಞಾನಾಜ್ಞಾನಗಳು ಚಿನ್ಮಯವಾದವುಗಳು, ಎಲ್ಲೆಡೆಯಲ್ಲೂ ಚಿನ್ಮಯತೆಯೇ ತುಂಬಿರುವುದು, ಚಿನ್ಮಯವಸ್ತುವೇ ಪೂರ್ಣವಾಗಿರುವುದು, ಉತ್ತಮಫಲಗಳೆಲ್ಲವೂ ಚಿನ್ಮಯವಾದವುಗಳು. ॥೫೫॥

ಪರತತ್ವವೆನ್ನುವುದು ಚಿನ್ಮಯವೇ, ನೀನೂ-ಎನ್ನುವುದೂ ಚಿನ್ಮಯವಸ್ತುವೇ, ಆನಂದವೆಲ್ಲವೂ ಚಿನ್ಮಯವು, ಆ ಚಿನ್ಮಯವಸ್ತುವು ಅವಿನಾಶಿಯಾದುದು. ॥೫೬॥

ಚಿದಾಕಾರಂ ಸದಾ ಕಾಮಂ ಚಿದಾಕಾರಮಿದಂ ಮಹತ್ ।
ಚಿದಾಕಾರಂ ಪುನಃ ಪುಣ್ಯಂ ಚಿದಾಕಾರಂ ಸದಾ ಮನಃ ॥೫೭॥

ಚಿದಾಕಾರಂ ಪರಂ ಬ್ರಹ್ಮ ಚಿದಹಂ ಚಿದಹಂ ಸದಾ ।
ಚಿದಹಂ ಚಿದಹಂ ಚಿತ್ತಂ ಸತ್ಯಂ ಸತ್ಯಂ ನ ಸಂಶಯಃ ॥೫೮॥

ಚಿದೇವ ಜಗದಾಕಾರಂ ಚಿದೇವ ಶಿವಶಂಕರಂ ।
ಚಿದೇವ ಗಗನಾಕಾರಂ ಚಿದೇವ ಗಣನಾಯಕಃ ॥೫೯॥

ಚಿದೇವ ಭುವನಾಕಾರಂ ಚಿದೇವ ಭವಭಾವನಂ ।
ಚಿದೇವ ಹೃದಯಾಕಾರಂ ಚಿದೇವ ಹೃದಯೇಶ್ವರಃ ॥೬೦॥

ಚಿದೇವ ಅಮೃತಾಕಾರಂ ಚಿದೇವ ಚಲನಾಸ್ಪದಂ ।
ಚಿದೇವಾಹಂ ಚಿದೇವಾಹಂ ಚಿನ್ಮಯಂ ಚಿನ್ಮಯಂ ತಥಾ ॥೬೧॥

---

ಸುಖಲೋಲುಪತೆಯೆಲ್ಲವೂ ಚಿನ್ಮಯವೇ, ದೊಡ್ಡದೆನ್ನುವ ವಸ್ತುವೆಲ್ಲವೂ ಚಿನ್ಮಯವೇ, ಪುಣ್ಯವು ಚಿನ್ಮಯವೇ, ಮನಸ್ಸು ಚಿನ್ಮಯವೇ. ॥೫೭॥

ಪರಬ್ರಹ್ಮವಸ್ತುವೇ ಚಿನ್ಮಯವು, ನಾನೂ ಸಹ ಚಿನ್ಮಯನೇ, ಮನಸ್ಸು ಚಿನ್ಮಯವೇ, ಇದರಲ್ಲಿ ಸಂಶಯವಿಲ್ಲ; ನಿಶ್ಚಯವು, ಸತ್ಯವು. ॥೫೮॥

ಜ್ಞಾನಮೂರ್ತಿಯಾದ ಪರವಸ್ತುವೇ ಜಗತ್ತಿನ ಆಕಾರವಾಗಿ ತೋರುವುದು. ಆ ಪರಮಾತ್ಮವಸ್ತುವೇ ಶಿವನು, ಅದೇ ಶಂಕರನು, ಅದೇ ಗಗನವು, ಅದೇ ಗಣೇಶನು. ॥೫೯॥

ಚಿನ್ಮಯವಾದಾ ಪರವಸ್ತುವೇ ಲೋಕರೂಪವಾಗಿ ತೋರುವುದು. ಶಿವನ ಭಾವನೆಯು ಚಿನ್ಮಯವೇ, ಹಾಗೆ ಭಾವಿಸುವ ಹೃದಯವೂ ಚಿನ್ಮಯವು. ಆ ಹೃದಯದ ಅಧಿಪತಿ (ಜೀವನು)ಯೂ ಚಿನ್ಮಯನೇ. ॥೬೦॥

ಅಮೃತದ ಸ್ವರೂಪವು ಚಿನ್ಮಯವೇ, ಚಲಿಸುವಂತಹುದು ಚಿನ್ಮಯವೇ, ನಾನೇ ಚಿದ್ವಸ್ತುವು, ಚಿದ್ವಸ್ತುವೇ ಚಿನ್ಮಯವು, ಚಿನ್ಮಯವೇ ಚಿದ್ವಸ್ತುವು. ಚಿದ್ವಸ್ತುವೇ ಜ್ಞಾನಮೂರ್ತಿಯಾದ ಪರಮಾತ್ಮನು, ಅವನೇ ಪರಮೇಶ್ವರನು. ॥೬೧॥

ಚಿದೇವ ಸತ್ಯವಿಶ್ವಾಸಂ ಚಿದೇವ ಬ್ರಹ್ಮಭಾವನಂ ।
ಚಿದೇವ ಪರಮಂ ದೇವಂ ಚಿದೇವ ಹೃದಯಾಲಯಂ ॥೬೨॥

ಚಿದೇವ ಸಕಲಾಕಾರಂ ಚಿದೇವ ಜನಮಂಡಲಂ ।
ಚಿದೇವ ಸರ್ವಮಾನಂದಂ ಚಿದೇವ ಪ್ರಿಯಭಾಷಣಂ ॥೬೩॥

ಚಿದೇವ ತ್ವಂ ಚಿದೇವಾಹಂ ಸರ್ವಂ ಚಿನ್ಮಾತ್ರಮೇವ ಹಿ ।
ಚಿದೇವ ಪರಮಂ ಧ್ಯಾನಂ ಚಿದೇವ ಪರಮಾರ್ಹಣಂ ॥೬೪॥

ಚಿದೇವತ್ವ ಪ್ರಕರಣಂ ಸರ್ವವೇದೇಷು ದುರ್ಲಭಂ ।
ಸಕೃಚ್ಛ್ರವಣಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೬೫॥

ಯಸ್ಯಾಭಿಧ್ಯಾನಯೋಗಾಜ್ಜನಿಮೃತಿವಿವಶಾ ಶಾಶ್ವತಂ ವೃತ್ತಿಭಿರ್ಯೇ
ಮಾಯಾಮೋಹೈರ್ವಿಹೀನಾ ಹೃದುದರಭಯಜಂ ಭಿದ್ಯತೇ ಗ್ರಂಥಿಜಾತಂ ।

---

ಸತ್ತವಾದ ವಸ್ತುವಿದೆ, ಜಗತ್ತು ಶೂನ್ಯವಲ್ಲ-ಎನ್ನುವ ಆಸ್ತಿಕವಿಶ್ವಾಸವೂ ಚಿನ್ಮಯವೇ. ಬ್ರಹ್ಮಜ್ಞಾನವು ಚಿನ್ಮಯವೇ, ಪರಮೇಶ್ವರನೂ ಚಿನ್ಮಯನೇ, ಹೃದಯದಲ್ಲಿ ನೆಲಸಿರುವ ಜೀವನೂ ಚಿನ್ಮಯನೇ. ॥೬೨॥

ಚಿನ್ಮಯವಾದ ಪರವಸ್ತುವೇ ಎಲ್ಲ ಬಗೆಯ ಆಕಾರವಾಗಿ ತೋರುವುದು. ಜನಗಳು ಚಿನ್ಮಯರು, ಆನಂದವೆಲ್ಲವೂ ಚಿನ್ಮಯವೇ, ಪ್ರೀತಿಯ ಮಾತು ಚಿನ್ಮಯವೇ. ॥೬೩॥

ನೀನೂ ಚಿನ್ಮಯನೇ, ನಾನೂ ಚಿನ್ಮಯನೇ, ಎಲ್ಲವೂ ಚಿನ್ಮಯವೇ, ಉತ್ಕೃಷ್ಟವಾದ ಧ್ಯಾನವು ಚಿನ್ಮಯವೇ, ಉತ್ತಮ ಪೂಜೆಯು ಚಿನ್ಮಯವೇ. ॥೬೪॥

ಎಲ್ಲವೂ ಚಿನ್ಮಯವೆಂದು ನಿರೂಪಿಸುವ ಈ ಪ್ರಕರಣವು ವೇದಗಳಲ್ಲೂ ದುರ್ಲಭವಾದುದು. ಇದನ್ನು ಒಂದು ಬಾರಿ ಕೇಳಿದರೂ ಸಹ ಅಂತಹವನು ಬ್ರಹ್ಮರೂಪನೇ ಆಗುವನು. ॥೬೫॥

ಇಂತಹ ಚಿನ್ಮಯನಾದ ಅಂದರೆ ಜ್ಞಾನಮೂರ್ತಿಯಾದ ಪರಶಿವನನ್ನು ಸದಾ ಯಾರು ಧ್ಯಾನಿಸುವರೋ ಅವರ ಮಾಯಾಮೋಹಗಳೆಲ್ಲವೂ ನಾಶವಾಗುವುವು. ಅವರ ಅಜ್ಞಾನವು ತೊಲಗುವುದು, ಜನನಮರಣಗಳು ಅವರನ್ನು ಸ್ಪರ್ಶಿಸಲಾರವು.

ವಿಶ್ವಂ ವಿಶ್ವಾಧಿಕರಸಂ ಭವತಿ ಭವತೋ ದರ್ಶನಾದಾಪ್ತಕಾಮಃ
ಸೋ ನಿತ್ಯೋ ನಿರ್ವಿಕಲ್ಪೋ ಭವತಿ ಭುವಿ ಸದಾ ಬ್ರಹ್ಮಭೂತೋಽಂತರಾತ್ಮಾ
॥೬೬॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಷೋಡಶೋಽಧ್ಯಾಯಃ

---

ನಿತ್ಯರೂ ವಿಕಾರಗಳಿಲ್ಲದವರೂ ನಿತ್ಯತೃಪ್ತರೂ ಆಗಿ ಕೊನೆಗೆ ಅವರು ಲೋಕಾತೀತರಾಗಿ ಪರಮಾತ್ಮವಸ್ತುವೇ ಆಗುವರು. (ಮುಕ್ತಿಯನ್ನೈದುವರು) ॥೬೬॥

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹದಿನಾರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಸಪ್ತದಶೋಽಧ್ಯಾಯಃ

॥ ಋಭುರುವಾಚ ॥

ನಿದಾಘ ಶೃಣು ಗುಹ್ಯಂ ಮೇ ಸರ್ವಸಿದ್ಧಾಂತಸಂಗ್ರಹಂ ।
ದ್ವೈತಾದ್ವೈತಮಿದಂ ಶೂನ್ಯಂ ಶಾಂತಂ ಬ್ರಹ್ಮೈವ ಸರ್ವದಾ ॥೧॥

ಅಹಮೇವ ಪರಂ ಬ್ರಹ್ಮ ಅಹಮೇವ ಪರಾತ್ಪರಂ ।
ದ್ವೈತಾದ್ವೈತಮಿದಂ ಶೂನ್ಯಂ ಶಾಂತಂ ಬ್ರಹ್ಮೈವ ಕೇವಲಂ ॥೨॥

ಅಹಮೇವ ಹಿ ಶಾಂತಾತ್ಮಾ ಅಹಮೇವ ಹಿ ಸರ್ವಗಃ ।
ಅಹಮೇವ ಹಿ ಶುದ್ಧಾತ್ಮಾ ಅಹಮೇವ ಹಿ ನಿತ್ಯಶಃ ॥೩॥

---

## ಹದಿನೇಳನೆಯ ಅಧ್ಯಾಯ

ಎಲೈ ನಿದಾಘಮುನಿಯೇ ಕೇಳು, ಈಗ ಎಲ್ಲ ವೇದಾಂತಗಳ ಸಿದ್ಧಾಂತವನ್ನು ಸಂಗ್ರಹಿಸಿ ಹೇಳುವೆನು. ಭೇದರೂಪವಾಗಿಯೂ ಅಭೇದರೂಪವಾಗಿಯೂ ಕಾಣುವ ಈ ಪ್ರಪಂಚವು ವಸ್ತುತಃ ಇಲ್ಲವು. ಬ್ರಹ್ಮವಸ್ತುವೊಂದೇ ಇರುವುದು. ॥೧॥

ನಾನೇ ಪರಬ್ರಹ್ಮನು, ನಾನೇ ಸರ್ವೋತ್ಕೃಷ್ಟವಸ್ತುವು. ಬೇರೆಬೇರೆಯಾಗಿ ದೇಹವೇ ಆತ್ಮವೆಂದು ತೋರುವಂತೆ ಅಭಿನ್ನವಾಗಿಯೂ ಕಾಣಿಸುವ ಈ ಪ್ರಪಂಚವು ಶೂನ್ಯವು, ವಸ್ತುತಃ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೨॥

ನಾನೇ ಶಾಂತಮೂರ್ತಿಯು, ನಾನೇ ಎಲ್ಲೆಡೆಯಲ್ಲೂ ಇರುವೆನು, ನಾನೇ ಶುದ್ಧಸ್ವರೂಪನು, ನಾನೇ ನಿತ್ಯನು, ಮಿಕ್ಕೆಲ್ಲ ಪ್ರಪಂಚವೂ ಅನಿತ್ಯವು, ಶೂನ್ಯವು. ॥೩॥

ಅಹಮೇವ ಹಿ ನಾನಾತ್ಮಾ ಅಹಮೇವ ಹಿ ನಿರ್ಗುಣಃ ।
ಅಹಮೇವ ಹಿ ನಿತ್ಯಾತ್ಮಾ ಅಹಮೇವ ಹಿ ಕಾರಣಂ ॥೪॥

ಅಹಮೇವ ಜಗತ್ಸರ್ವಂ ಇದಂ ಚೈವಾಹಮೇವ ಹಿ ।
ಅಹಮೇವ ಹಿ ಮೋಕ್ಷಾತ್ಮಾ ಅಹಮೇವ ಹಿ ಮುಕ್ತಿದಃ ॥೫॥

ಅಹಮೇವ ಹಿ ಚೈತನ್ಯಮಹಮೇವ ಹಿ ಚಿನ್ಮಯಃ ।
ಅಹಮೇವ ಹಿ ಚೈತನ್ಯಮಹಂ ಚಿತ್ತಾಂತರಃ ಸದಾ ॥೬॥

ಅಹಮೇವ ಹಿ ಭೂತಾತ್ಮಾ ಭೌತಿಕಂ ತ್ವಹಮೇವ ಹಿ ।
ಅಹಮೇವ ತ್ವಮೇವಾಹಂ ಅಹಮೇವಾಹಮೇವ ಹಿ ॥೭॥

ಜೀವಾತ್ಮಾ ಅಹಮೇವಾಹಮಹಮೇವ ಪರೇಶ್ವರಃ ।
ಅಹಮೇವ ವಿಭುರ್ನಿತ್ಯಮಹಮೇವ ಸ್ವಯಂ ಸದಾ ॥೮॥

---

ಅನೇಕ ಬಗೆಯಾಗಿ ತೋರುವ ವಸ್ತುಗಳೆಲ್ಲವೂ ನಾನೇ ಅಥವಾ ಭಿನ್ನಭಿನ್ನವಾಗಿ ತೋರುವ ವಸ್ತುಗಳ ಆತ್ಮನು ನಾನು. ನಿರ್ಗುಣಸ್ವರೂಪನು ನಾನು, ನಾನೇ ನಿತ್ಯಸ್ವರೂಪನು, ನಾನೇ ಎಲ್ಲಕ್ಕೂ ಕಾರಣವು. ॥೪॥

ಈ ಜಗತ್ತೆಲ್ಲವೂ ನಾನೇ, ಇದು ಎನ್ನುವುದೂ ನಾನೇ, ಮೋಕ್ಷಸ್ವರೂಪನು ನಾನೇ, ಮೋಕ್ಷವನ್ನು ಕೊಡುವವನೂ ನಾನೇ. ॥೫॥

ನಾನೇ ಚೈತನ್ಯವು, ನಾನೇ ಚಿನ್ಮಯನು, ಜ್ಞಾನಮೂರ್ತಿಯು, ನಾನೇ ಮನಸ್ಸು, ಮನಸ್ಸಿನಲ್ಲಿ ನೆಲಸಿರುವ ಜೀವಾತ್ಮನೂ ನಾನೇ. ॥೬॥

ಪಂಚಭೂತಗಳೂ ನಾನೇ, ಆ ಭೂತಗಳ ಕಾರ್ಯಗಳೂ ನಾನೇ, ನಾನೇ ನೀನು, ನೀನೇ ನಾನು, ನಾನೇ ನಾನು, ನಾನು ನಾನೇ. ॥೭॥

ನಾನೇ ಜೀವಾತ್ಮನು, ನಾನೇ ಪರಮೇಶ್ವರನು, ನಾನೇ ಎಲ್ಲಕ್ಕೂ ಪ್ರಭುವು, ನಾನೇ ತಾನು, ತಾನೇ ನಾನು, ನನ್ನ ಹೊರತು ಯಾವುದೂ ಇಲ್ಲವು. ॥೮॥

ಅಹಮೇವಾಕ್ಷರಂ ಸಾಕ್ಷಾದಹಮೇವ ಹಿ ಮೇ ಪ್ರಿಯಃ ।
ಅಹಮೇವ ಸದಾ ಬ್ರಹ್ಮ ಅಹಮೇವ ಸದಾವ್ಯಯಃ ॥೯॥

ಅಹಮೇವಾಹಮೇಕೋಽಯಮಹಮೇವಾಂತರಾಂತರಃ ।
ಅಹಮೇವ ಚಿದಾಕಾಶಮಹಮೇವಾವಭಾಸಕಃ ॥೧೦॥

ಅಹಮೇವ ಸದಾ ಸ್ರಷ್ಟಾ ಅಹಮೇವ ಹಿ ರಕ್ಷಕಃ ।
ಅಹಮೇವಾಹಂ ಲೀಲಾತ್ಮಾ ಅಹಮೇವ ಹಿ ನಿಶ್ಚಯಃ ॥೧೧॥

ಅಹಮೇವ ಸದಾ ಸಾಕ್ಷೀ ತ್ವಮೇವ ತ್ವಂ ಪುರಾತನಃ ।
ತ್ವಮೇವ ಹಿ ಪರಂ ಬ್ರಹ್ಮ ತ್ವಮೇವ ಹಿ ನಿರಂತರಂ ॥೧೨॥

ಅಹಮೇವಾಹಮೇವಾಹಮಹಮೇವ ತ್ವಮೇವ ಹಿ ।
ಅಹಮೇವಾದ್ವಯಾಕಾರೋ ಅಹಮೇವ ವಿದೇಹಕಃ ॥೧೩॥

---

ನಾನೇ ಸದಾ ಪ್ರತ್ಯಕ್ಷಸ್ವರೂಪನಾದ ಅವಿನಾಶಿಯಾದ ಪರಮಾತ್ಮನು. ಓಂಕಾರಸ್ವರೂಪನು ನಾನು, ನಾನೇ ನನಗೆ ಪ್ರಿಯನಾದವನು, ನಾನೇ ಬ್ರಹ್ಮನು, ಯಾವ ಬಗೆಯ ನಾಶವಿಲ್ಲದವನು ನಾನು, ನಿತ್ಯನು ನಾನು. ॥೯॥

ನಾನೇ ನಾನು, ಅಂದರೆ ನಾನೊರ್ವನೇ ಇರುವೆನು, ಅತಿರಹಸ್ಯವಸ್ತುವು ನಾನೇ, ಜ್ಞಾನಾಕಾಶವು ನಾನು, ಎಲ್ಲ ವಸ್ತುಗಳನ್ನೂ ಬೆಳಗಿಸುವವನು ನಾನು. ॥೧೦॥

ನಾನೇ ಈ ಜಗತ್ತನ್ನು ಸೃಷ್ಟಿಸುವವನು, ನಾನೇ ರಕ್ಷಿಸುವವನು, ನಾನೇ ಸಂಹರಿಸುವವನು, ಇಂತಹ ಲೀಲೆಗಳನ್ನು ಪ್ರಸರಿಸಿ ಉದಾಸೀನನಾಗಿರುವವನೂ ನಾನೇ. ॥೧೧॥

ನಾನೇ ನೀನು, ನೀನೇ ನಾನು, ಅನಾದಿವಸ್ತುವು ನೀನು, ನೀನೇ ಪರಬ್ರಹ್ಮನು, ಎಲ್ಲೆಡೆಯಲ್ಲೂ ವ್ಯಾಪಿಸಿರುವ ಪರಮಾತ್ಮನು ನೀನು. ॥೧೨॥

ನಾನೇ ನಾನು, ನಾನು ನಾನೇ, ನಾನೇ ನೀನು, ನೀನೇ ನಾನು, ಅದ್ವಿತೀಯನಾದವನು ನಾನು, ದೇಹವು ವಸ್ತುತಃ ನನಗಿಲ್ಲವು. ॥೧೩॥

ಅಹಮೇವ ಮಮಾಧಾರೋ ಅಹಮೇವ ಸದಾತ್ಮಕಃ ।
ಅಹಮೇವೋಪಶಾಂತಾತ್ಮಾ ಅಹಮೇವ ವಿವಕ್ಷಕಃ ॥೧೪॥

ಅಹಮೇವ ಸಮಾಧಾನಂ ಶ್ರದ್ಧಾಪ್ಯಹಮೇವ ಹಿ ।
ಅಹಮೇವ ಮಹಾವ್ಯೋಮ ಅಹಮೇವ ಕಲಾತ್ಮಕಃ ॥೧೫॥

ಅಹಮೇವ ಹಿ ಕಾರ್ಯಾಂತಃ ಅಹಮೇವ ಸದಾಂತರಃ ।
ಅಹಮೇವ ಪುರಸ್ತಾಚ್ಚ ಅಹಂಪಶ್ಚಾದಹಂ ಸದಾ ॥೧೬॥

ಅಹಮೇವ ಹಿ ವಿಶ್ವಾತ್ಮಾ ಅಹಮೇವ ಹಿ ಕೇವಲಂ ।
ಅಹಮೇವ ಪರಂ ಬ್ರಹ್ಮ ಅಹಮೇವ ಪರಾತ್ಪರಃ ॥೧೭॥

ಅಹಮೇವ ಚಿದಾನಂದಃ ಅಹಮೇವ ಸುಖಾಸುಖಂ ।
ಅಹಮೇವ ಗುರುತ್ವಂ ಚ ಅಹಮೇವಾಚ್ಯುತಃ ಸದಾ ॥೧೮॥

---

ನಾನೇ ನನಗೆ ಆಧಾರನು, ನಾನು ಯಾವಾಗಲೂ ಆತ್ಮನು, ಸತ್ಯಸ್ವರೂಪನು, ನಾನು ಶಾಂತಮೂರ್ತಿಯು, ನನಗೆ ಯಾವ ಅಂಗಗಳೂ ಇಲ್ಲ, ಹೇಳಲು ಇಚ್ಛೆಯುಳ್ಳವನೂ ನಾನು, ಹೇಳುವವನೂ ನಾನೇ, ಹೇಳುವುದೂ ನಾನೇ. ॥೧೪॥

ನಾನೇ ಸಮಾಧಾನವು, ಶ್ರದ್ಧೆಯು ನಾನೇ, ವಿಶಾಲವಾದ ಆಕಾಶವೂ ನಾನೇ, ಕಲೆಯ ಸ್ವರೂಪನು ನಾನೇ, ವಿಶಾಲ ಗಗನದಂತಿರುವ ಪರಮಾತ್ಮನು ನಾನು. ॥೧೫॥

ಪ್ರತಿಯೊಂದು ಕಾರ್ಯಗಳ ಕೊನೆಯು (ಫಲವು) ನಾನೇ, ಯಾವಾಗಲೂ ಅಜ್ಞಾನಿಗಳಿಗೆ ಅಗೋಚರನು ನಾನು. ಒಳಗೂ ನಾನೇ, ಹೊರಗೂ ನಾನೇ, ಎದುರಿನಲ್ಲಿಯೂ ನಾನೇ, ಹಿಂದೆಯೂ ನಾನೇ, ಎಲ್ಲೆಲ್ಲಿಯೂ ನಾನೇ ಇರುವೆನು. ॥೧೬॥

ನಾನು ಜಗನ್ಮಯನು, ಅಂದರೆ ಜಗತ್ತೆಲ್ಲವೂ ನನ್ನ ಹೊರತಾಗಿ ಇಲ್ಲವು, ನಾನೊರ್ವನೇ ಇರುವವನು, ನಾನೇ ಪರಬ್ರಹ್ಮನು, ನಾನೇ ಪರಮೇಶ್ವರನು. ॥೧೭॥

ನಾನು ಜ್ಞಾನಮೂರ್ತಿಯು, ಆನಂದಮೂರ್ತಿಯು, ಸುಖದುಃಖಸ್ವರೂಪನು ನಾನೇ, ನಾನೇ ಗುರುತ್ವ (ಭಾರ)ವು, ನಾನೇ ಅಚ್ಯುತನು, ಚ್ಯುತಿಯಿಲ್ಲದವನು. ॥೧೮॥

ಅಹಮೇವ ಹಿ ವೇದಾಂತೋ ಅಹಮೇವ ಹಿ ಚೇತನಃ ।
ದೇಹೋಽಯಂ ಶುದ್ಧಚೈತನ್ಯಂ ಅಹಂ ಸಂಶಯವರ್ಜಿತಃ ॥೧೯॥

ಅಹಮೇವ ಪರಂಜ್ಯೋತಿರಹಮೇವ ಪರಂ ಪದಂ ।
ಅಹಮೇವಾವಿನಾಶ್ಯಾತ್ಮಾ ಅಹಮೇವ ಪುರಾತನಃ ॥೨೦॥

ಅಹಂ ಬ್ರಹ್ಮ ನ ಸಂದೇಹ ಅಹಮೇವ ಹಿ ನಿಷ್ಕಲಃ ।
ಅಹಂ ತುರ್ಯೋ ನ ಸಂದೇಹ ಅಹಮಾತ್ಮಾ ನ ಸಂಶಯಃ ॥೨೧॥

ಅಹಂ ಶಾಂತೋ ನ ಸಂದೇಹೋ ಅಹಂ ಭಾನವಿವರ್ಜಿತಃ ।
ಅಹಂ ಸತ್ತಾ ನ ಸಂದೇಹ ಅಹಂ ಶುದ್ಧತ್ವಮೇವ ಚ ॥೨೨॥

---

ನಾನೇ ವೇದಾಂತವು, ಅಂದರೆ ವೇದಾಂತಗಳ ಪರಮಸಿದ್ಧಾಂತವಾದ ಪರಮಾತ್ಮನು ನಾನೇ. ನಾನೇ ಚೇತನವಸ್ತುವು, ಈ ದೇಹವು ನಾನು, ಅಂದರೆ ನನ್ನ ಹೊರತಾಗಿ ದೇಹವು ಶೂನ್ಯವು. ನಾನು ಶುದ್ಧ ಚೈತನ್ಯವು, ನನಗೆ ಯಾವ ಸಂಶಯವೂ ಇಲ್ಲ. ನನ್ನಲ್ಲಿ ಯಾವ ಸಂಶಯವೂ ಇಲ್ಲ, ಕಾರಣವೇನೆಂದರೆ ಎರಡು ವಸ್ತುಗಳಿದ್ದರೆ ಇದೊ! ಅದೋ! ಎಂದು ಸಂಶಯವುದಯಿಸುವುದು, ಇಲ್ಲಿ ನಾನೊಬ್ಬನೇ ಇರುವವನಾದುದರಿಂದ ಯಾವ ಬಗೆಯ ಸಂಶಯವೂ ನನ್ನ ವಿಷಯದಲ್ಲಿ ಇಲ್ಲ. ॥೧೯॥

ನಾನೇ ಪರಂಜ್ಯೋತಿಯು, ನಾನೇ ಪರಮಪದವು, ನಾಶವಿಲ್ಲದವನು ನಾನೇ, ಅನಾದಿಸ್ವರೂಪನು ನಾನೇ. ॥೨೦॥

ನಾನು ನಿರ್ಗುಣವಾದ ಮತ್ತು ವಿಕಾರಗಳಿಲ್ಲದ ಪರಿಶುದ್ಧವಾದ ಬ್ರಹ್ಮನು, ಇದರಲ್ಲಿ ಸಂದೇಹವಿಲ್ಲ. ಶರೀರ, ಇಂದ್ರಿಯ, ಮನಸ್ಸುಗಳಿಗಿಂತ ಭಿನ್ನವಾದ ಅಥವಾ ತ್ರಿಮೂರ್ತಿಗಳಿಗಿಂತ ಉತ್ಕೃಷ್ಟನಾದ ಪರಮಾತ್ಮನು ನಾನು, ಇದರಲ್ಲಿ ಸಂಶಯವಿಲ್ಲ. ॥೨೧॥

ನಾನು ಶಾಂತಮೂರ್ತಿಯು. ಪ್ರಕಾಶಸ್ವರೂಪನಾದ ನನಗೆ ಬೇರೊಂದು ಪ್ರಕಾಶವಿಲ್ಲವು. ನನ್ನಿಂದ ಹೊರತಾಗಿ ನನ್ನಲ್ಲಿ ಪ್ರಕಾಶವಿಲ್ಲವು, ನಾನೇ ಸತ್ತೆಯು, ಅಂದರೆ ಇದೆ ಎನ್ನುವ ವಸ್ತುವಿನ ಸತ್ಯಸ್ವರೂಪವು (ಇರುವಿಕೆಯು) ನಾನು, ಶುದ್ಧನು ನಾನು, ಶುದ್ಧತೆಯೂ ನಾನು, ಇದರಲ್ಲಿ ಸಂದೇಹವಿಲ್ಲ. ॥೨೨॥

ಅಹಮಿತ್ಯಪಿ ಹೀನೋಽಹಮುಹಮಿತ್ಯಪಿ ಭಾವನಃ ।
ಅಹಮೇವ ಹಿ ಭಾವಾಂತಾ ಅಹಮೇವ ಹಿ ಶೋಭನಂ ॥೨೩॥

ಅಹಮೇವ ಕ್ಷಣಾತೀತಃ ಅಹಮೇವ ಹಿ ಮಂಗಲಂ ।
ಅಹಮೇವಾಚ್ಯುತೋಽನಂತ ಅಹಮೇವ ನಿರಂತರಂ ॥೨೪॥

ಅಹಮೇವಾಪ್ರಮೇಯಾತ್ಮಾ ಅಹಂ ಸಂಕಲ್ಪವರ್ಜಿತಃ ।
ಅಹಂ ಬುದ್ಧಃ ಪರಂಧಾಮ ಅಹಂ ಬುದ್ಧಿವಿವರ್ಜಿತಃ ॥೨೫॥

ಅಹಮೇವ ಸದಾ ಸತ್ಯಂ ಅಹಮೇವ ಸದಾ ಸುಖಂ ।
ಅಹಮೇವ ಸದಾ ಲಭ್ಯಂ ಅಹಂ ಸುಲಭಕಾರಣಂ ॥೨೬॥

ಅಹಂ ಸುಲಭವಿಜ್ಞಾನೋ ದುರ್ಲಭೋಽಜ್ಞಾನಿನಾಂ ಸದಾ ।
ಅಹಂ ಚಿನ್ಮಾತ್ರ ಏವಾತ್ಮಾ ಅಹಮೇವ ಹಿ ಚಿದ್ಘನಃ ॥೨೭॥

---

ನಾನು-ಎಂಬ ಅಹಂಕಾರವು ನನ್ನಲ್ಲಿಲ್ಲ. ಆದರೂ ಅಸತ್ಯವಾದೀ ದೇಹಾಭಿಮಾನದಿಂದ ನಾನು ಎನ್ನುವ ವ್ಯವಹಾರವು ನಡೆಯುತ್ತಿರುವುದು. ವಸ್ತುತಃ ನಾನು-ಎನ್ನುವ ಭಾವನೆಗೆ ವಿಷಯನು ನಾನೇ. (ಪರಮಾತ್ಮನೇ) ॥೨೩॥

ಕ್ಷಣಕಾಲಗಳ ಗಣನೆಗೆ ಸಿಲುಕದವನು ನಾನು, ಮಂಗಳವು ನಾನೇ, ಅಚ್ಯುತನೂ ಅಂದರೆ ನಾಶವಿಲ್ಲದವನೂ ಅನಂತನೂ ಎಂದರೆ ಕೊನೆಯಿಲ್ಲದವನೂ ವ್ಯಾಪಕನೂ ನಾನಾಗಿರುವೆನು. ॥೨೪॥

ಇಂದ್ರಿಯಗಳಿಗೆ ಅಗೋಚರನಾದ ಪರಮಾತ್ಮನು ನಾನು. ನನಗೆ ಯಾವ ಕಾಮನೆಗಳೂ ಇಲ್ಲವು. ನಾನು ಜ್ಞಾನಮೂರ್ತಿಯು, ಆದರೂ ನನಗೆ ಬುದ್ಧಿಯೆಂಬುದಿಲ್ಲವು, ಪಡೆಯಲು ಅತ್ಯುತ್ತಮವಾದ ಸ್ಥಾನವು ನಾನು. ॥೨೫॥

ನಾನು ಸದಾ ಸತ್ಯಸ್ವರೂಪನು, ಸುಖಸ್ವರೂಪನು ಎಲ್ಲೆಡೆಯಲ್ಲೂ ವ್ಯಾಪಿಸಿರುವುದರಿಂದ ಯಾವಾಗಲೂ ಎಲ್ಲರಿಗೂ ಸುಲಭನು. ಸುಲಭವಾದ ಕಾರಣವೂ ನಾನು, ಕಾರ್ಯವೂ ನಾನೇ. ॥೨೬॥

ಸುಲಭವಾದ ವಿಜ್ಞಾನವು ನಾನು, ಅಜ್ಞಾನಿಗಳಿಗೆ ದುರ್ಲಭನು ನಾನು, ಕೇವಲ ಜ್ಞಾನಸ್ವರೂಪನು ನಾನು, ಚಿನ್ಮಯನು, (ಜ್ಞಾನಮಯನು) ನಾನು. ॥೨೭

ಅಹಮೇವ ತ್ವಮೇವಾಹಂ ಬ್ರಹ್ಮ ಏವ ನ ಸಂಶಯಃ ।
ಅಹಮಾತ್ಮಾ ನ ಸಂದೇಹಃ ಸರ್ವವ್ಯಾಪೀ ನ ಸಂಶಯಃ ॥೨೮॥

ಅಹಮಾತ್ಮಾ ಪ್ರಿಯಂ ಸತ್ಯಂ ಸತ್ಯಂ ಸತ್ಯಂ ಪುನಃ ಪುನಃ ।
ಅಹಮಾತ್ಮಾಜರೋ ವ್ಯಾಪೀ ಅಹಮೇವಾತ್ಮನೋ ಗುರುಃ ॥೨೯॥

ಅಹಮೇವಾಪ್ಯಕೋ ಮೋಕ್ಷೋ ಅಹಮೇವ ಹಿ ನಿಶ್ಚಲಃ ।
ಅಹಮೇವ ಹಿ ನಿತ್ಯಾತ್ಮಾ ಅಹಂ ಮುಕ್ತೋ ನ ಸಂಶಯಃ ॥೩೦॥

ಅಹಮೇವ ಸದಾ ಸಿದ್ಧೋ ಅಹಮೇವ ಹಿ ನಿರ್ಗುಣಃ ।
ಅಹಂ ಪ್ರಪಂಚಹೀನೋಽಸ್ಮಿ ಅಹಂ ದೇಹವಿವರ್ಜಿತಃ ॥೩೧॥

ಅಹಂ ಕಾಮವಿಹೀನಾತ್ಮಾ ಅಹಂ ಮಾಯಾವಿವರ್ಜಿತಃ ।
ಅಹಂ ದೋಷಪ್ರಶಾಂತಾತ್ಮಾ ಅಹಂ ಸಂಸಾರವರ್ಜಿತಃ ॥೩೨॥

---

ನಾನೇ ನೀನು, ನೀನೇ ನಾನು, ನಾನು ನೀನೂ ಈರ್ವರೂ ಬ್ರಹ್ಮವಸ್ತುವೇ. ಆತ್ಮವಸ್ತುವೇ, ಜಡವಸ್ತುವಲ್ಲ, ಇದರಲ್ಲಿ ಸಂಶಯವಿಲ್ಲ. ॥೨೮॥

ನಾನು ಎಲ್ಲರಿಗೂ ಅತ್ಯಂತ ಪ್ರಿಯನಾಗಿರುವ ಆತ್ಮನು, ಅಂದರೆ ತಾನು ಎಂದು ವ್ಯವಹರಿಸುವವನು ಆತ್ಮ. ಆತನು ತನಗಾಗಿ, ತನ್ನ ಸಂತಸಕ್ಕಾಗಿ, ತನ್ನ ಸುಖಕ್ಕಾಗಿ ಹೆಂಡತಿಮಕ್ಕಳು ಮನೆಮಠ ಸಂಸಾರಗಳನ್ನು ಕಟ್ಟಿಕೊಳ್ಳುವನು. ಇದರಿಂದ ಎಲ್ಲರಿಗೂ ಆತ್ಮನು ಅತ್ಯಂತ ಪ್ರಿಯನೆಂದು ತಿಳಿಯಬಹುದು. ನಾನು ಸದಾ ಸತ್ಯಸ್ವರೂಪನು, ಜರೆ ಮೊದಲಾದ ಯಾವ ಅವಸ್ಥೆಗಳೂ ನನಗಿಲ್ಲವು. ನನಗೆ ನಾನೇ ಗುರುವು, ತಿಳಿದ ನಾನು ತಿಳಿಯದ ನನಗೆ ಉಪದೇಶಮಾಡುವೆನು. ॥೨೯॥

ನಾನೇ ಮೋಕ್ಷಸ್ವರೂಪನು, ಕ್ರಿಯೆಗಳಿಲ್ಲದ ಅವಿನಾಶಿಯು ನಾನು, ನಿತ್ಯನು ನಾನು. ಸದಾ ಮುಕ್ತನು ನಾನು, ಇದರಲ್ಲಿ ಸಂಶಯವಿಲ್ಲ. ॥೩೦॥

ನಾನು ಹೊಸದಾಗಿ ಜನಿಸುವವನಲ್ಲ. ಸದಾ ನಾನು ಸಿದ್ಧನಾಗಿರುವೆನು, ನಿರ್ಗುಣನು ನಾನು. ನನಗೆ ಯಾವ ಪ್ರಪಂಚವೂ ಇಲ್ಲವು, ದೇಹವೂ ನನಗಿಲ್ಲವು. ॥೩೧॥

ಯಾವ ಕಾಮನೆ (ಸುಖಾಪೇಕ್ಷೆ)ಗಳೂ ನನಗಿಲ್ಲವು, ಮಾಯೆಯು ನನ್ನಲ್ಲಿಲ್ಲವು, ಯಾವ ದೋಷವೂ ನನಗಿಲ್ಲವು, ಯಾವ ಸಂಸಾರವೂ ನನಗಿಲ್ಲವು. ॥೩೨॥

ಅಹಂ ಸಂಕಲ್ಪರಹಿತೋ ನಿಕಲ್ಪರಹಿತಃ ಶಿವಃ ।
ಅಹಮೇವ ಹಿ ಶುದ್ಧಾತ್ಮಾ ಅಹಮೇವಾತಿನಿರ್ಮಲಃ ॥೩೩॥

ಅಹಮೇವ ಸದಾ ಜ್ಯೋತಿರಹಮೇವ ಸದಾ ಪ್ರಭುಃ ।
ಅಹಮೇವ ಸದಾ ಬ್ರಹ್ಮ ಅಹಮೇವ ಸದಾ ಪರಃ ॥೩೪॥

ಅಹಮೇವ ಸದಾ ಜ್ಞಾನಮಹಮೇವ ಸದಾ ಮೃದುಃ ।
ಅಹಮೇವ ಹಿ ಚಿತ್ತಂ ಚ ಅಹಂ ಮಾನವಿವರ್ಜಿತಃ ॥೩೫॥

ಅಹಂಕಾರಂ ಚ ಸಂಸಾರಮಹಂಕಾರಮಸತ್ಸದಾ ।
ಅಹಮೇವ ಹಿ ಚಿನ್ಮಾತ್ರಂ ಮತ್ತೋಽನ್ಯನ್ನಾಸ್ತಿ ನಾಸ್ತಿ ಹಿ ॥೩೬॥

ಅಹಮೇವ ಹಿ ಮೇ ಸತ್ಯಂ ಮತ್ತೋ ನಾನ್ಯತ್ತು ಕಿಂಚನ ।
ಮತ್ತೋಽನ್ಯತ್ತತ್ಪದಂ ನಾಸ್ತಿ ಮತ್ತೋಽನ್ಯತ್ತ್ವಂ ಪದಂ ನಹಿ ॥೩೭॥

ಪುಣ್ಯಮಿತ್ಯಪಿ ನ ಕ್ವಾಪಿ ಪಾಪಮಿತ್ಯಪಿ ನಾಸ್ತಿ ಹಿ ।
ಇದಂ ಭೇದಮಯಂ ಭೇದಂ ಸದಸದ್ಭೇದಮಿತ್ಯಪಿ ॥೩೮॥

---

ಯಾವ ಕಲ್ಪನೆಗಳೂ ನನಗಿಲ್ಲವು, ಯಾವ ಹುಚ್ಚುತನವೂ ನನಗಿಲ್ಲವು, ಎಲ್ಲವನ್ನೂ ಮೀರಿದ ಶುದ್ಧಾತ್ಮನು ನಾನು, ಅತಿನಿರ್ಮಲನು ನಾನು. ॥೩೩॥

ಸದಾ ಬೆಳಗುತ್ತಿರುವ ದಿವ್ಯಜ್ಯೋತಿಯು ನಾನು, ಯಾವಾಗಲೂ ನಾನೇ ಪರಮೇಶ್ವರನು, ನಾನೇ ಬ್ರಹ್ಮನು, ನಾನೇ ಪರಮಾತ್ಮನು. ॥೩೪॥

ನಾನೇ ಜ್ಞಾನವು, ಅತಿ ಮೃದುವು ನಾನು, ಮನಸ್ಸೂ ನಾನು, ನನಗೆ ಯಾವ ಅಭಿಮಾನಗಳೂ ಇಲ್ಲವು. ॥೩೫॥

ಅಹಂಕಾರವು ಸಂಸಾರವು ಸಹ ಅಸತ್ಯವಾದವುಗಳು. ನಾನು ಮಾತ್ರ ಸತ್ಯನು, ಮತ್ತು ಚಿನ್ಮಯನು. ನನ್ನ ಹೊರತಾಗಿ ಯಾವುದೂ ಇಲ್ಲವು. ॥೩೬॥

ನನಗೆ ನಾನೇ ಸತ್ಯವು, ನನ್ನ ಹೊರತಾಗಿ ಯಾವುದೂ ನನಗೆ ಇಲ್ಲವು, ನನ್ನ ಹೊರತು ನೀನು-ಎನ್ನುವುದೂ ಇಲ್ಲ, ಅವನು-ಎಂಬ ಈಶ್ವರವ್ಯವಹಾರವು ಇಲ್ಲ. ॥೩೭॥

ನನ್ನ ಹೊರತಾಗಿ ಪುಣ್ಯವೆಂಬುದೂ ಇಲ್ಲವು, ಪಾಪವೆಂಬುದೂ ಇಲ್ಲವು.

ನಾಸ್ತಿ ನಾಸ್ತಿ ತ್ವಯಾ ಸತ್ಯಂ ಸತ್ಯಂ ಸತ್ಯಂ ಪುನಃ ಪುನಃ ।
ನಾಸ್ತಿ ನಾಸ್ತಿ ಸದಾ ನಾಸ್ತಿ ಸರ್ವಂ ನಾಸ್ತೀತಿ ನಿಶ್ಚಯಃ ॥೩೯॥

ಇದಂ ಬ್ರಹ್ಮ ಪರಂ ಬ್ರಹ್ಮ ಅಹಂ ಬ್ರಹ್ಮ ತ್ವಮೇವ ಹಿ ।
ಕಾಲೋ ಬ್ರಹ್ಮ ಕಲಾ ಬ್ರಹ್ಮ ಕಾರ್ಯಂ ಬ್ರಹ್ಮ ಕ್ಷಣಂ ತಥಾ ॥೪೦॥

ಸರ್ವಂ ಬ್ರಹ್ಮಾಸ್ಮ್ಯಹಂ ಬ್ರಹ್ಮ ಬ್ರಹ್ಮಾಸ್ಮೀತಿ ನ ಸಂಶಯಃ ।
ಚಿತ್ತಂ ಬ್ರಹ್ಮ ಮನೋ ಬ್ರಹ್ಮ ಸತ್ಯಂ ಬ್ರಹ್ಮ ಸದಾಸ್ಮ್ಯಹಂ ॥೪೧॥

ನಿರ್ಗುಣಂ ಬ್ರಹ್ಮ ನಿತ್ಯಂ ಚ ನಿರಂತರಮಹಂ ಪರಃ ।
ಆದ್ಯಂ ತದ್ಬ್ರಹ್ಮ ಏನಾಹಂ ಆದ್ಯಂತಂ ಚ ನಹಿ ಕ್ವಚಿತ್ ॥೪೨॥

ಅಹಮಿತ್ಯಪಿ ವಾರ್ತಾಪಿ ಸ್ಮರಣಂ ಭಾಷಣಂ ನ ಚ ।
ಸರ್ವಂ ಬ್ರಹ್ಮ ನ ಸಂದೇಹಸ್ತ್ವಮಿತ್ಯಪಿ ನಹಿ ಕ್ವಚಿತ್ ॥೪೩॥

---

ಇದು ಎನ್ನುವ ಭೇದವೂ ಅವನು-ಎನ್ನುವ ಭೇದವೂ ಇಲ್ಲವು. ಇದು ಸತ್ಯ ಇದು ಅಸತ್ಯ-ಎನ್ನುವ ಭೇದಗಳೂ ಇಲ್ಲ. ॥೩೮॥

ನೀನು ಎಂಬುದೂ ಇಲ್ಲ, ನಾನು ಎಂಬುದೂ ಇಲ್ಲ, ಇದು ಸತ್ಯವಾದ ಮಾತು, ನನ್ನ ಹೊರತಾಗಿ ಯಾವುದೂ ಇಲ್ಲ. ॥೩೯॥

ಇದು-ಎನ್ನುವುದೂ ಬ್ರಹ್ಮವಸ್ತುವೇ, ಬೇರೆಯದು-ಎನ್ನುವುದೂ ಬ್ರಹ್ಮವೇ, ನಾನೂ ಬ್ರಹ್ಮವಸ್ತುವೇ, ನೀನೂ ಬ್ರಹ್ಮವಸ್ತುವೇ, ಕಾಲವೂ ಬ್ರಹ್ಮವೇ, ಕಲೆಗಳೂ ಬ್ರಹ್ಮವಸ್ತುವೇ, ಕಾರ್ಯವೂ ಕಾರಣವೂ ಬ್ರಹ್ಮವಸ್ತುವೇ. ॥೪೦॥

ಎಲ್ಲವೂ ಬ್ರಹ್ಮ, ನಾನೂ ಬ್ರಹ್ಮ, ನೀನೂ ಬ್ರಹ್ಮ, ಇದು ನಿಶ್ಚಯವು, ಮನಸ್ಸೂ ಬ್ರಹ್ಮ, ಚಿತ್ತವೂ ಬ್ರಹ್ಮ, ಸತ್ಯವೂ ಬ್ರಹ್ಮ. ॥೪೧॥

ನಾನು ನಿರ್ಗುಣವಾದ ನಿತ್ಯವಾದ ಸರ್ವೋತ್ತಮವಾದ ಮತ್ತು ವ್ಯಾಪಕವಾದ ಬ್ರಹ್ಮವಸ್ತುವು, ಆದಿ ಅಂತ್ಯಗಳು ಬ್ರಹ್ಮವೇ, ವಸ್ತುತಃ ಆದಿ-ಅಂತ್ಯಗಳು ಬ್ರಹ್ಮನಿಗೆ ಇಲ್ಲ. ॥೪೨॥

ನಾನು-ಎಂಬ ಸುದ್ದಿಯೂ ಇಲ್ಲ, ಸ್ಮರಣೆಯೂ ಇಲ್ಲ, ಭಾಷಣವೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ, ಅದರ ಹೊರತಾಗಿ ಯಾವುದೂ ಇಲ್ಲ. ॥೪೩॥

ವಕ್ತಾ ನಾಸ್ತಿ ನ ಸಂದೇಹ ಏಷಾ ಗೀತಾ ಚ ದುರ್ಲಭಾ ।
ಸದ್ಯೋ ಮೋಕ್ಷಪ್ರದಂ ಹ್ಯೇತತ್ಸದ್ಯೋ ಮುಕ್ತಿಪ್ರದಾಯಕಂ ॥೪೪॥

ಸದ್ಯ ಏವ ಪರಂ ಬ್ರಹ್ಮಪದಂ ಪ್ರಾಪ್ನೋತಿ ನಿಶ್ಚಯಃ ।
ಸಕೃಚ್ಛ್ರವಣಮಾತ್ರೇಣ ಸದ್ಯೋ ಮುಕ್ತಿಂ ಪ್ರಯಚ್ಛತಿ ॥೪೫॥

ಏತತ್ತು ದುರ್ಲಭಂ ಲೋಕೇ ತ್ರೈಲೋಕ್ಯೇಽಪಿ ಚ ದುರ್ಲಭಂ ।
ಅಹಂ ಬ್ರಹ್ಮ ನ ಸಂದೇಹ ಇತ್ಯೇವಂ ಭಾವಯೇದ್ದೃಢಂ ॥೪೬॥

ತತಸ್ಸರ್ವಂ ಪರಿತ್ಯಜ್ಯ ತೂಷ್ಣೀಂ ತಿಷ್ಠ ಯಥಾಸುಖಂ ॥೪೭॥

॥ ಸೂತ ಉವಾಚ ॥

ಭುವನಗಗನಮಧ್ಯಧ್ಯಾನಯೋಗಾಂಗಸಂಗೈಃ
ಯಮನಿಯಮವಿಶೇಷೈರ್ಭಸ್ಮರಾಗಾಂಗಸಂಗೈಃ ।
ಸುಖಮುಖಭರಿತಾಶಾಃ ಕ್ಲೇಶಪಾಶಾದ್ವಿಹೀನಾಃ
ಹೃದಿ ಮುದಿತಪರಾಶಾಃ ಶಾಂಭವಾಃ ಶಂಭವಶ್ಚ ॥೪೮॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಸಪ್ತದಶೋಽಧ್ಯಾಯಃ

---

ಬ್ರಹ್ಮವಸ್ತುವಿನ ಹೊರತಾಗಿ ವ್ಯಕ್ತವೂ ಇಲ್ಲ. ಈ ಮಹಾರಹಸ್ಯವಾದ ವಿಷಯವು ದುರ್ಲಭವಾದುದು. ಸಾಮಾನ್ಯರಿಗೆ ಇಂತಹ ತತ್ವಜ್ಞಾನವು ಉದಯಿಸಲಾರದು. ಇದು ಕೂಡಲೇ ಮುಕ್ತಿಯನ್ನುಂಟುಮಾಡುವುದು. ॥೪೪॥

ಈ ತತ್ವವನ್ನು ಬಲ್ಲವನು ಜಾಗ್ರತೆಯಾಗಿ ಬ್ರಹ್ಮಪದವನ್ನು ಹೊಂದುವನು. ಒಂದು ಬಾರಿ-ಕೇಳಿದರೂ ಸಹ ಜಾಗ್ರತೆಯಾಗಿ ಮುಕ್ತಿಯು ಲಭಿಸುವುದು. ॥೪೫॥

ಲೋಕದಲ್ಲಿ ಈ ತತ್ತ್ವವು ಅತಿದುರ್ಲಭವಾದುದು, “ನಾನೇ ಬ್ರಹ್ಮನು” ಎಂದು ದೃಢವಾಗಿ ಅನುಸಂಧಾನ ಮಾಡಬೇಕು, ಆಮೇಲೆ ವಿರಕ್ತಿಯಿಂದ ಎಲ್ಲವನ್ನೂ ತ್ಯಜಿಸಿ ನಿರ್ಲಿಪ್ತನಾಗಿ ಆತ್ಮಚಿಂತನೆಯಲ್ಲಿ ತೊಡಗಬೇಕು. ॥೪೬-೪೭॥

ಯಮನಿಯಮ ಮೊದಲಾದ ನಿಯಮಗಳನ್ನು ಆಚರಿಸುತ್ತಾ, ಭಸ್ಮವನ್ನು ಲೇಪಿಸಿಕೊಂಡು ನಿಶ್ಚಲತೆಯಿಂದ ಹೃದಯದಲ್ಲಿ ಪರಮಾತ್ಮನನ್ನು ಯಾರು ಧ್ಯಾನಿ

ಸುವರೋ ಅವರ ಸಂಸಾರಪಾಶಗಳೆಲ್ಲವೂ ಕಡಿದುಹೋಗುವುವು, ಆಪ್ತಕಾಮರಾಗುವರು, ಆನಂದಮಯರಾಗಿ ಸುಖಸ್ವರೂಪರಾಗುವರು. ಮುಕ್ತಿಯನ್ನೈದುವರು. ಎಂದು ಋಭುಮುನಿಯು ಆತ್ಮಸ್ವರೂಪಾನುಸಂಧಾನವನ್ನು ವಿವರಿಸಿದನು. ॥೪೮॥

ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹದಿನೇಳನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಅಷ್ಟಾದಶೋಽಧ್ಯಾಯಃ

॥ ಋಭುರುವಾಚ ॥

ಶೃಣು ಭೂಯಃ ಪರಂ ತತ್ವಂ ಸದ್ಯೋ ಮೋಕ್ಷಪ್ರದಾಯಕಂ ।
ಸರ್ವಂ ಬ್ರಹ್ಮೈವ ಸತತಂ ಸರ್ವಂ ಶಾಂತಂ ನ ಸಂಶಯಃ ॥೧॥

ಬ್ರಹ್ಮಾಕಾರಂ ಇದಂ ಸರ್ವಂ ಪರಾಕಾರಮಿದಂ ನಹಿ ।
ಇದಮಿತ್ಯಪಿ ಯದ್ದೋಷಂ ವಯಮಿತ್ಯಪಿ ಭಾಷಣಂ ॥೨॥

ಮತ್ತೋಽನ್ಯತ್ಪಾವನಂ ನಾಸ್ತಿ ಮತ್ತೋಽನ್ಯತ್ಪದಂ ನಹಿ ।
ಮತ್ತೋಽನ್ಯದ್ಧರ್ಮರೂಪಂ ವಾ ಮತ್ತೋಽನ್ಯದಖಿಲಂ ನ ಚ ॥೩॥

---

## ಹದಿನೆಂಟನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಜಾಗ್ರತೆಯಾಗಿ ಮುಕ್ತಿಯನ್ನುಂಟುಮಾಡುವಂತಹ ತತ್ವಜ್ಞಾನವನ್ನು ವಿವರಿಸುವೆನು, ಕೇಳು. ಏಕೆಂದರೆ:—ಎಲ್ಲವೂ ಬ್ರಹ್ಮವಸ್ತುವೇ, ಶಾಂತವಾದ ಬ್ರಹ್ಮವಸ್ತುವೇ ಯಾವಾಗಲೂ ಎಲ್ಲೆಲ್ಲಿಯೂ ವ್ಯಾಪಿಸಿರುವುದು. ॥೧॥

ಈ ಜಗತ್ತೆಲ್ಲವೂ ಬ್ರಹ್ಮವಸ್ತುವಿನ ಆಕಾರವು, ಬೇರೆಯಾಕಾರವು ಇದಕ್ಕಿಲ್ಲವು. ಇದು-ಎನ್ನುವ ವ್ಯವಹಾರವೂ ನಾವು-ಎನ್ನುವ ವ್ಯವಹಾರವೂ ಸಹ ಬ್ರಹ್ಮನ ಆಕಾರವೇ. ॥೨॥

ನನಗಿಂತಲೂ ಪವಿತ್ರವಾದುದು ಇಲ್ಲವು, ನನ್ನ ಹೊರತಾಗಿ ಅದು ಎಂಬುದಿಲ್ಲ, ನನ್ನ ಹೊರತು ಧರ್ಮವೆಂಬುದಿಲ್ಲವು, ನನ್ನ ಹೊರತಾಗಿ ಯಾವುದೂ ಇಲ್ಲ. ॥೩॥

ಯತ್ಕಿಂಚಿತ್ ಸ್ಮರಣಂ ವಾಪಿ ಯತ್ಕಿಂಚಿತ್ ಧ್ಯಾನಮೇವ ಹಿ ।
ಯತ್ಕಿಂಚಿತ್ ಧ್ಯಾನರೂಪಂ ವಾ ತತ್ಸರ್ವಂ ಬ್ರಹ್ಮ ಏವ ಹಿ ॥೪॥

ಯತ್ಕಿಂಚಿತ್ ಬ್ರಹ್ಮವಾಕ್ಯಂ ವಾ ಯತ್ಕಿಂಚಿತ್ ವೇದವಾಕ್ಯಕಂ ।
ಯತ್ಕಿಂಚಿತ್ ಗುರುವಾಕ್ಯಂ ವಾ ತತ್ಸರ್ವಂ ಬ್ರಹ್ಮ ಏವ ಹಿ ॥೫॥

ಯತ್ಕಿಂಚಿತ್ ಕಲ್ಮಷಂ ಸತ್ಯಂ ಯತ್ಕಿಂಚಿತ್ ಪ್ರಿಯಭಾಷಣಂ ।
ಯತ್ಕಿಂಚಿನ್ಮನನಂ ಚಿಂತಾ ತತ್ಸರ್ವಂ ಬ್ರಹ್ಮ ಏವ ಹಿ ॥೬॥

ಯತ್ಕಿಂಚಿತ್ ಸದ್ಗುರೋರ್ವಾಕ್ಯಂ ಯತ್ಕಿಂಚಿದುರುಚಿಂತನಂ ।
ಯತ್ಕಿಂಚಿದ್ಯೋಗಭೇದಂ ವಾ ತತ್ಸರ್ವಂ ಬ್ರಹ್ಮ ಏವ ಹಿ ॥೭॥

ಯತ್ಕಿಂಚಿತ್ ಶ್ರವಣಂ ನಿತ್ಯಂ ಯತ್ಕಿಂಚಿತ್ ಧ್ಯಾನಮುಚ್ಯತೇ ।
ಯತ್ಕಿಂಚಿನ್ನಿಶ್ಚಯಂ ಶ್ರದ್ಧಾ ತತ್ಸರ್ವಂ ಬ್ರಹ್ಮ ಚೈವ ಹಿ ॥೮॥

ಸರ್ವಂ ತ್ಯಜ್ಯ ಗುರುಂ ತ್ಯಜ್ಯ ದೇವಂ ಸಂತ್ಯಜ್ಯ ನಿತ್ಯಶಃ ।
ತೂಷ್ಣೀಮೇವಾಸನಂ ಬ್ರಹ್ಮ ಸುಖಮೇವ ಹಿ ಕೇವಲಂ ॥೯॥

---

ಪ್ರತಿಯೊಂದು ಸ್ಮರಣೆಯೂ, ಪ್ರತಿಯೊಂದು ಧ್ಯಾನವೂ, ಪ್ರತಿಯೊಂದು ಧ್ಯಾನಿಸಲ್ಪಡುವ ವಸ್ತುವೂ ಸಹ, ಎಲ್ಲವೂ ಬ್ರಹ್ಮವಸ್ತುವೇ. ॥೪॥

ಪ್ರತಿಯೊಂದು ವೇದಾಂತವಾಕ್ಯಗಳೂ, ಪ್ರತಿಯೊಂದು ವೇದವಾಕ್ಯಗಳೂ, ಪ್ರತಿಯೊಂದು ಗುರೂಪದೇಶವಾಕ್ಯಗಳೂ ಸಹ ಎಲ್ಲವೂ ಬ್ರಹ್ಮವಸ್ತುವೇ. ॥೫॥

ಪ್ರತಿಯೊಂದು ಕಲ್ಮಷಗಳೂ, ಸತ್ಯವೂ, ಹಿತವಾದ ನುಡಿಯೂ, ಮನನವೂ ಚಿಂತೆಯೂ ಇವೆಲ್ಲವೂ ಸಹ ಬ್ರಹ್ಮವಸ್ತುವೇ. ॥೬॥

ಒಳ್ಳೆಯ ಗುರುವಿನ ಉಪದೇಶ, ಚಿಂತನೆ, ಯೋಗಾನುಷ್ಠಾನ ಇವೆಲ್ಲವೂ ಸಹ ಬ್ರಹ್ಮವಸ್ತುವೇ. ॥೭॥

ಪ್ರತಿಯೊಂದರ ಶ್ರವಣ, ಪ್ರತಿಯೊಂದರ ಧ್ಯಾನ, ಪ್ರತಿಯೊಂದು ನಿಶ್ಚಯ, ಶ್ರದ್ಧೆ—ಇವೆಲ್ಲವೂ ಬ್ರಹ್ಮವಸ್ತುವೇ. ॥೮॥

ಆದುದರಿಂದ ಗುರುವನ್ನೂ ಬಿಟ್ಟು, ದೇವರನ್ನೂ ಬಿಟ್ಟು, ಎಲ್ಲವನ್ನೂ ತ್ಯಜಿಸಿ, ನಿಷ್ಕಾಮವಾಗಿ ವಿರಕ್ತನಾಗಿ ಸುಮ್ಮನೆ ಉದಾಸೀನನಾಗಿರಬೇಕು. ಇಂತಹ ಸುಖವಾದ ಸ್ಥಿತಿಯೇ ಬ್ರಹ್ಮಸ್ವರೂಪವು, ಜೀವನ್ಮುಕ್ತಿಯು. ॥೯॥

ಸರ್ವಂ ತ್ಯಕ್ತ್ವಾ ಸುಖಂ ನಿತ್ಯಂ ಸರ್ವಂ ಯಾಗಂ ಸುಖಂ ಮಹತ್ ।
ಸರ್ವತ್ಯಾಗಪರಾನಂದಂ ಸರ್ವತ್ಯಾಗಸುಖಂ ಪರಂ ॥೧೦॥

ಸರ್ವತ್ಯಾಗಂ ಮಹಾಮೋಕ್ಷಂ ಚಿತ್ತತ್ಯಾಗಂ ತದೇವ ಹಿ ।
ಚಿತ್ತಮೇವ ಜಗನ್ನಿತ್ಯಂ ಚಿತ್ತಮೇವ ಹಿ ಸಂಸೃತಿಃ ॥೧೧॥

ಚಿತ್ತಮೇವ ಮಹಾಮಾಯಾ ಚಿತ್ತಮೇವ ಶರೀರಕಂ ।
ಚಿತ್ತಮೇವ ಭಯಂ ದೇವಃ ಚಿತ್ತಮೇವ ಮನೋಮಯಂ ॥೧೨॥

ಸರ್ವತ್ಯಾಗಂ ಮನಸ್ತ್ಯಾಗಃ ಸರ್ವತ್ಯಾಗಮಹಂಕೃತೇಃ ।
ಸರ್ವತ್ಯಾಗಮನಸ್ತ್ಯಾಗಃ ಸರ್ವತ್ಯಾಗಃ ಪರಂ ಸುಖಂ ॥೧೩॥

ಚಿತ್ತಮೇವ ಪ್ರಪಂಚಾಖ್ಯಂ ಚಿತ್ತಮೇವ ಹಿ ಕಲ್ಮಷಂ ।
ಚಿತ್ತಮೇವ ಜಡಂ ಸರ್ವಂ ಚಿತ್ತಮೇವೇಂದ್ರಿಯಾದಿಕಂ ॥೧೪॥

---

ಎಲ್ಲ ಅನಿತ್ಯಸುಖಗಳನ್ನೂ, ಅವುಗಳ ಸಾಧನಗಳನ್ನೂ ಬಿಟ್ಟು ಆತ್ಮಾನಂದನಾಗಿರಬೇಕು. ಇಂತಹ ಸರ್ವತ್ಯಾಗವೇ ಪರಮಸುಖವು. ॥೧೦॥

ಎಲ್ಲವನ್ನೂ ತ್ಯಜಿಸುವುದೇ ಮೋಕ್ಷವು, ಅದೇ ಚಿತ್ತದ ತ್ಯಾಗವು. ಚಿತ್ತವೇ ಜಗತ್ತು, ಚಿತ್ತವೇ ಸಂಸಾರವು, ಅಂದರೆ ಈ ಜಗತ್ತು ಈ ಸಂಸಾರ ಇವೆಲ್ಲವೂ ಮನಸ್ಸಿನ ಭ್ರಾಂತಿ-ಕಲ್ಪನೆಗಳು. ಆ ಮನಸ್ಸನ್ನೇ ತ್ಯಜಿಸಿದರೆ ಜಗತ್ತೂ ಇಲ್ಲ, ಸಂಸಾರವೂ ಇಲ್ಲ, ಅದೇ ಮಹಾಮೋಕ್ಷವು. ॥೧೧॥

ಮನಸ್ಸೇ ಮಹಾಮಾಯೆಯು, ಮನವೇ ಶರೀರವು, ಮನವೇ ಭಯವು, ಮನವೇ ದೇವರು, ಮನವೇ ಮನೋವಿಕಾರವು, ಅಂದರೆ ಇವೆಲ್ಲವೂ ಮನಸ್ಸಿನ ಕಲ್ಪನೆಗಳು. ಆ ಮನವನ್ನೇ ಬಿಟ್ಟರೆ ಎಲ್ಲವನ್ನೂ ಬಿಟ್ಟಂತಾಗುವುದು. ॥೧೨॥

ಮನಸ್ಸಿನ ತ್ಯಾಗವೇ ಸರ್ವತ್ಯಾಗವು, ಮನಸ್ಸನ್ನು ತ್ಯಜಿಸಿದರೆ ಅಹಂಕಾರವು ಇಲ್ಲ. ಅದರ ಅನರ್ಥಗಳೂ ಇಲ್ಲ. ಅದೇ ಪರಮಸುಖವು. ॥೧೩॥

ಮನವೇ ಪ್ರಪಂಚವು, ಮನವೇ ದೋಷವು, ಮನವೇ ಜಡವಸ್ತುವು, ಮನವೇ ಇಂದ್ರಿಯಾದಿಗಳು, ಆ ಮನವನ್ನೇ ತ್ಯಜಿಸಿದರೆ ಯಾವುದೂ ಇಲ್ಲ. ॥೧೪॥

ಚಿತ್ತಮೇವ ಸದಾಽಸತ್ಯಂ ಚಿತ್ತಮೇವ ಹಿ ನಕ್ವಚಿತ್ ।
ಚಿತ್ತಮೇವ ಮಹಾಶಾಸ್ತ್ರಂ ಚಿತ್ತಮೇವ ಮನಃಪ್ರದಂ ॥೧೫॥

ಚಿತ್ತಮೇವ ಸದಾ ಪಾಪಂ ಚಿತ್ತಮೇವ ಸದಾ ಮಲಂ ।
ಚಿತ್ತಮೇವ ಹಿ ಸರ್ವಾಖ್ಯಂ ಚಿತ್ತಂ ಸರ್ವಾತ್ಮನಾ ಜಯಿ ॥೧೬॥

ಚಿತ್ತಂ ನಾಸ್ತೀತಿ ಚಿಂತಾಸ್ಯಾದಾತ್ಮಮಾತ್ರಂ ಪ್ರಕಾಶತೇ ।
ಚಿತ್ತಮಸ್ತೀತಿ ಚಿಂತಾ ಚೇಚ್ಚೇತ್ತತ್ವಂ ಸ್ವಯಮೇವ ಹಿ ॥೧೭॥

ಸ್ವಯಮೇವ ಹಿ ಚಿಂತಾಖ್ಯಂ ಸ್ವಯಂ ಬ್ರಹ್ಮ ನ ಸಂಶಯಃ ।
ಚಿತ್ತಮೇವ ಹಿ ಸರ್ವಾಖ್ಯಂ ಚಿತ್ತಂ ಸರ್ವಮಿತಿ ಸ್ಮೃತಂ ॥೧೮॥

ಬ್ರಹ್ಮೈವಾಹಂ ಸ್ವಯಂ ಜ್ಯೋತಿರ್ಬ್ರಹ್ಮೈವಾಹಂ ನ ಸಂಶಯಃ ।
ಸರ್ವಂ ಬ್ರಹ್ಮ ನ ಸಂದೇಹಃ ಸರ್ವಂ ಚಿಜ್ಜ್ಯೋತಿರೇವ ಹಿ ॥೧೯॥

---

ಚಿತ್ತವೇ ಅಸತ್ಯವು, ಆದುದರಿಂದ ಅದು ವಸ್ತುತಃ ಇಲ್ಲವು, ಚಿತ್ತವೇ ಶಾಸ್ತ್ರಗಳು, ಚಿತ್ತವೇ ಮನಸ್ಸಿನ ಕಲ್ಪನೆಗಳು. ॥೧೫॥

ಮನವೇ ಪಾಪವು, ಮನಸ್ಸೇ ಕೊಳೆಯು, ಮನವೇ ಎಲ್ಲ ಅನರ್ಥಗಳು. ಆದುದರಿಂದ ಆ ಮನವನ್ನು ಜಯಿಸಿ ತ್ಯಜಿಸಬೇಕು. ॥೧೬॥

ಮನವು ಇಲ್ಲ ಎಂದು ದೃಢವಾಗಿ ತಿಳಿದರೆ ಆತ್ಮವೊಂದೇ ಪ್ರಕಾಶಿಸುವುದು. ಮನವು ಇದೆಯೆಂದು ತಿಳಿದರೆ ಎಲ್ಲವೂ ಮನೋಮಯವೇ ಆಗಿ ಇಲ್ಲದ ತಾಪ ತ್ರಯಗಳು ಅದರಲ್ಲಿ ಅಂಟಿಕೊಳ್ಳುವುವು. ॥೧೭॥

ಎಲ್ಲ ಚಿಂತೆಯೂ ಬ್ರಹ್ಮವಸ್ತುವೇ, ಅದು ಹೊರತು ಯಾವುದೂ ಇಲ್ಲ. ಅಸತ್ಯವಾಗಿ ತೋರುವ ಮಿಕ್ಕೆಲ್ಲವೂ ಬರಿಯ ಮನಸ್ಸಿನ ಕಲ್ಪನೆಗಳು. ಆದುದರಿಂದ ಎಲ್ಲವೂ ಮನವೇ ಎಂದು ಹೇಳುವರು. ॥೧೮॥

ಸ್ವಪ್ರಕಾಶವಾದ ಬ್ರಹ್ಮವಸ್ತುವೇ ನಾನು, ನಾನೇ ಆ ಬ್ರಹ್ಮವಸ್ತುವು, ಎಲ್ಲವೂ ಜ್ಞಾನಜ್ಯೋತಿಪ್ರಕಾಶರೂಪವಾದ ಬ್ರಹ್ಮವಸ್ತುವೇ. ॥೧೯॥

ಅಹಂ ಬ್ರಹ್ಮೈವ ನಿತ್ಯಾತ್ಮಾ ಪೂರ್ಣಾತ್ಪೂರ್ಣತರಂ ಸದಾ ।
ಅಹಂ ಪೃಥ್ವ್ಯಾದಿಸಹಿತಮಹಂ ದೇಹವಿಲಕ್ಷಣಃ ॥೨೦॥

ಅಹಂ ಸೂಕ್ಷ್ಮಶರೀರಾಂತಮಹಮೇವ ಪುರಾತನಂ ।
ಅಹಮೇವ ಹಿ ಪೂತಾತ್ಮಾ ಸರ್ವಂ ಬ್ರಹ್ಮೈವ ಕೇವಲಂ ॥೨೧॥

ಚಿದಾಕಾರೋ ಹ್ಯಹಂ ಪೂರ್ಣಶ್ಚಿದಾಕಾಶಮಿದಂ ಜಗತ್ ।
ಚಿದಾಕಾರಂ ಚಿದಾಕಾಶಂ ಚಿದಾಕಾಶಮಹಂ ಸದಾ ॥೨೨॥

ಚಿದಾಕಾಶಂ ತ್ವಮೇವಾಸಿ ಚಿದಾಕಾಶಮಹಂ ಸದಾ ।
ಚಿದಾಕಾಶಂ ಚಿದೇವೇದಂ ಚಿದಾಕಾಶಂ ನ ಕಿಂಚನ ॥೨೩॥

ಚಿದಾಕಾರಂ ತತಂ ಸರ್ವಂ ಚಿದಾಕಾರಪ್ರಕಾಶಕಂ ।
ಚಿದಾಕಾಶಂ ಮನೋರೂಪಂ ಚಿದಾಕಾಶಂ ಚ ಚಿದ್ಘನಂ ॥೨೪॥

---

ನಾನು ನಿತ್ಯಸ್ವರೂಪವಾದ ಬ್ರಹ್ಮವಸ್ತುವು, ನ್ಯೂನತೆಯಿಲ್ಲದ ಪೂರ್ಣ ವಸ್ತುವು ನಾನು. ಭೂಮಿ ಮೊದಲಾದುವುಗಳು ನನ್ನಲ್ಲಿಯೇ ಅಧ್ಯಸ್ತವಾಗಿರುವುವು, ನಾನು ದೇಹಕ್ಕಿಂತ ಭಿನ್ನನಾದವನು. ॥೨೦॥

ಸೂಕ್ಷ್ಮವಾದ ಹೃದಯದಲ್ಲಿ ನಾನು ಆತ್ಮರೂಪದಿಂದ ನೆಲಸಿರುವೆನು. ಅನಾದಿ ಪುರುಷನು ನಾನು, ಎಲ್ಲವನ್ನೂ ಪ್ರಮಾಣಿಸಿ ನೋಡುವವನು ನಾನು, ನಾನೇ ಬ್ರಹ್ಮವಸ್ತುವು, ಎಲ್ಲವೂ ಬ್ರಹ್ಮವಸ್ತುವೇ, ಎಲ್ಲವೂ ನಾನೇ. ॥೨೧॥

ನಾನು ಜ್ಞಾನಮೂರ್ತಿಯು, ಪೂರ್ಣನು, ಈ ಜಗತ್ತೂ ಜ್ಞಾನಮಯವಾದುದು. ಅಂತಹ ಜ್ಞಾನಮಯನೇ ನಾನು, ಅಂದರೆ ನಾನೇ ಬ್ರಹ್ಮವಸ್ತುವು. ॥೨೨॥

ನಾನೇ ವ್ಯಾಪಕವಾದ ಜ್ಞಾನಾಕಾಶವು, ನೀನೂ ವ್ಯಾಪಕವಾದ ಜ್ಞಾನಾಕಾಶವು. ಈ ಜಗತ್ತೂ ಜ್ಞಾನಾಕಾಶವು, ಜ್ಞಾನಾಕಾಶವೆಂದರೆ ಬ್ರಹ್ಮವಸ್ತುವು. ॥೨೩॥

ಎಲ್ಲೆಡೆಯಲ್ಲಿಯೂ ಜ್ಞಾನಾಕಾಶವೇ ವ್ಯಾಪಿಸಿದೆ. ಎಲ್ಲವನ್ನೂ ಜ್ಞಾನಾಕಾಶವೇ ಬೆಳಗಿಸುವುದು, ಮನಸ್ಸೂ ಸಹ ಜ್ಞಾನಾಕಾಶರೂಪವು. ಜ್ಞಾನಾಕಾಶವೆಂದರೆ ಜ್ಞಾನಮೂರ್ತಿಯಾದ ಬ್ರಹ್ಮವಸ್ತುವೇ. ॥೨೪॥

ಚಿದಾಕಾಶಂ ಪರಂ ಬ್ರಹ್ಮ ಚಿದಾಕಾಶಂ ಚ ಚಿನ್ಮಯಂ ।
ಚಿದಾಕಾಶಂ ಶಿವಃ ಸಾಕ್ಷಾತ್ ಚಿದಾಕಾಶಮಹಂ ಸದಾ ॥೨೫॥

ಸಚ್ಚಿದಾನಂದರೂಪೋಽಹಂ ಸಚ್ಚಿದಾನಂದಶಾಶ್ವತಃ ।
ಸಚ್ಚಿದಾನಂದಸನ್ಮಾತ್ರಂ ಸಚ್ಚಿದಾನಂದಭಾವನಃ ॥೨೬॥

ಸಚ್ಚಿದಾನಂದಪೂರ್ಣೋಽಹಂ ಸಚ್ಚಿದಾನಂದಕಾರಣಂ ।
ಸಚ್ಚಿದಾನಂದಸಂದೋಹಃ ಸಚ್ಚಿದಾನಂದ ಈಶ್ವರಃ ॥೨೭॥

ಸಚ್ಚಿದಾನಂದನಿತ್ಯೋಽಹಂ ಸಚ್ಚಿದಾನಂದಲಕ್ಷಣಃ ।
ಸಚ್ಚಿದಾನಂದಮಾತ್ರೋಽಹಂ ಸಚ್ಚಿದಾನಂದರೂಪಕಃ ॥೨೮॥

ಆತ್ಮೈವೇದಮಿದಂ ಸರ್ವಮಾತ್ಮೈವಾಹಂ ನ ಸಂಶಯಃ ।
ಆತ್ಮೈವಾಸ್ತಿ ಪರಂ ಸತ್ಯಮಾತ್ಮೈವ ಪರಮಂ ಪದಂ ॥೨೯॥

---

ಜ್ಞಾನಾಕಾಶವೇ ಪರಬ್ರಹ್ಮವು, ಚಿದಾಕಾಶವೇ ಚಿನ್ಮಯವು, ಚಿದಾಕಾಶವೇ ಸಾಕ್ಷಾತ್ ಶಿವನು, ಅಂತಹ ಜ್ಞಾನಾಕಾಶವೇ ನಾನು. ॥೨೫॥

ನಾನು ಸತ್ಯಜ್ಞಾನ ಆನಂದಸ್ವರೂಪನು, ಅಂತವಿಲ್ಲದ ಅವಿನಾಶಿಯು ನಾನು. ಜಗತ್ತಿನಲ್ಲಿ ತೋರುವ ಸತ್ತೆಯು ನಾನು, ಸಚ್ಚಿದಾನಂದವಸ್ತುವಿನ ಜ್ಞಾನವು ನಾನು, ಆ ಜ್ಞಾನವು ನನ್ನ ಹೊರತಾಗಿ ಇಲ್ಲ. ॥೨೬॥

ನಾನು ಸತ್ಯಜ್ಞಾನ ಆನಂದಗಳಿಂದ ತುಂಬಿರುವೆನು, ಇಂತಹ ನಾನು ಎಲ್ಲಕ್ಕೂ ಕಾರಣವು, ಸತ್ಯಜ್ಞಾನಾನಂದಗಳ ಸಮುದಾಯವು ನಾನು, ಈಶ್ವರನೂ ಸಹ ಸಚ್ಚಿದಾನಂದನು, ಆದುದರಿಂದ ಈಶ್ವರನೂ ನಾನೇ. ॥೨೭॥

ನಾನು ನಿತ್ಯವಾದ ಸಚ್ಚಿದಾನಂದ ಸ್ವರೂಪನು, ಜ್ಞಾನ ಸತ್ಯ ಆನಂದಗಳೇ ನನ್ನ ಲಕ್ಷಣವು. ಕೇವಲ ಸಚ್ಚಿದಾನಂದಗಳೇ ನನ್ನಲ್ಲಿರುವುವು, ಅದೇ ನನ್ನ ಸ್ವರೂಪವು. ॥೨೮॥

ಈ ಜಗತ್ತೆಲ್ಲವೂ ಆತ್ಮವಸ್ತುವೇ, ನಾನೂ ಆತ್ಮನೇ, ಆತ್ಮನೊಬ್ಬನೇ ಸತ್ಯನು, ಆತ್ಮನೇ ಪರಮಸ್ಥಾನವು. ॥೨೯॥

ಆತ್ಮೈವ ಜಗದಾಕಾರಮಾತ್ಮೈವ ಭುವನತ್ರಯಂ ।
ಆತ್ಮೈವ ಜಗತಾಂ ಶ್ರೇಷ್ಠಮಾತ್ಮೈವ ಹಿ ಮನೋಮಯಃ ॥೩೦॥

ಆತ್ಮೈವ ಜಗತಾಂ ತ್ರಾತಾ ಆತ್ಮೈವ ಗುರುರಾತ್ಮನಃ ।
ಆತ್ಮೈವ ಬಹುಧಾ ಭಾತಿ ಆತ್ಮೈವೈಕಂ ಪರಾತ್ಮನಃ ॥೩೧॥

ಆತ್ಮೈವ ಪರಂ ಲೋಕಮಾತ್ಮೈವ ಪರಮಾತ್ಮನಃ ।
ಆತ್ಮೈವ ಪರಮಂ ಬ್ರಹ್ಮ ಆತ್ಮೈವಾಹಂ ನ ಸಂಶಯಃ ॥೩೨॥

ಆತ್ಮೈವ ಜೀವರೂಪಾತ್ಮಾ ಆತ್ಮೈವೇಶ್ವರವಿಗ್ರಹಃ ।
ಆತ್ಮೈವ ಹರಿರಾನಂದ ಆತ್ಮೈವ ಸ್ವಯಮಾತ್ಮನಃ ॥೩೩॥

ಆತ್ಮೈವಾನಂದಸಂದೋಹ ಆತ್ಮೈವೇದಂ ಸದಾ ಸುಖಂ ।
ಆತ್ಮೈವ ನಿತ್ಯಶುದ್ಧಾತ್ಮಾ ಆತ್ಮೈವ ಜಗತಃ ಪರಃ ॥೩೪॥

ಆತ್ಮೈವ ಪಂಚಭೂತಾತ್ಮಾ ಆತ್ಮೈವ ಜ್ಯೋತಿರಾತ್ಮನಃ ।
ಆತ್ಮೈವ ಸರ್ವದಾ ನಾನ್ಯದಾತ್ಮೈವ ಪರಮೋಽವ್ಯಯಃ ॥೩೫॥

---

ಆತ್ಮನೇ ಜಗತ್ತಿನ ಆಕಾರವಾಗಿ ತೋರುವವನು, ಆತ್ಮನೇ ಮೂರುಲೋಕಗಳು. ಆತ್ಮನೇ ಜಗತ್ತಿನಲ್ಲಿ ಶ್ರೇಷ್ಠವಸ್ತುವು, ಮನಸ್ಸಿನಲ್ಲಿ ಪ್ರತಿಬಿಂಬಿಸಿ ವ್ಯವಹರಿಸುವವನು ಆತ್ಮನೇ. ॥೩೦॥

ಆತ್ಮನೇ ಜಗತ್ತನ್ನು ರಕ್ಷಿಸುವವನು, ಆತ್ಮನೇ ಆತ್ಮನಿಗೆ ಗುರುವು, ಆತ್ಮನೇ ಶರೀರಭೇದದಿಂದ ನಾನಾ ಬಗೆಯಾಗಿ ತೋರುವವನು. ॥೩೧॥

ಆತ್ಮನೇ ಉತ್ತಮಲೋಕವು, ಆತ್ಮನೇ ಪರಮಾತ್ಮನು, ಆತ್ಮನೇ ಪರಬ್ರಹ್ಮನು, ಆತ್ಮನೇ ನಾನು, ಈ ವಿಷಯದಲ್ಲಿ ಸಂಶಯವಿಲ್ಲವು. ॥೩೨॥

ಆತ್ಮನೇ ಜೀವನು, ಆತ್ಮನೇ ಈಶ್ವರನು, ಆತ್ಮನೇ ಹರಿಯು, ಆತ್ಮನೇ ಆನಂದವು, ಆತ್ಮನೇ ತಾನು, ತಾನೇ ಆತ್ಮನು. ॥೩೩॥

ಆತ್ಮನು ಆನಂದಗಳ ಮೊತ್ತವು, ಆತ್ಮನು ಸುಖಸ್ವರೂಪನು, ಆತ್ಮನು ನಿತ್ಯಶುದ್ಧನು, ಆತ್ಮನು ಜಗತ್ತಿಗಿಂತ ಭಿನ್ನನು, ಉತ್ಕೃಷ್ಟನು. ॥೩೪॥

ಆತ್ಮನೇ ಪಂಚಭೂತಗಳು, ಆತ್ಮನೇ ಆತ್ಮನಿಗೆ ಜ್ಯೋತಿಯು, ಅದೇ ಬೆಳಕು, ಆತ್ಮನೇ ಯಾವಾಗಲೂ ಇರುವವನು, ಆತ್ಮನು ನಾಶವಿಲ್ಲದ ನಿತ್ಯಪುರುಷನು. ॥೩೫॥

ಆತ್ಮೈವ ಹ್ಯಾತ್ಮಭಾಸಾತ್ಮಾ ಆತ್ಮೈವ ವಿಭುರವ್ಯಯಃ ।
ಆತ್ಮೈವ ಬ್ರಹ್ಮವಿಜ್ಞಾನಮಾತ್ಮೈವಾಹಂ ತ್ವಮೇವ ಹಿ ॥೩೬॥

ಆತ್ಮೈವ ಪರಮಾನಂದ ಆತ್ಮೈವಾಹಂ ಜಗನ್ಮಯಃ ।
ಆತ್ಮೈವಾಹಂ ಜಗದ್ಭಾಸಂ ಆತ್ಮೈವಾಹಂ ನ ಕಿಂಚನ ॥೩೭॥

ಆತ್ಮೈವ ಹ್ಯಾತ್ಮನಃ ಸ್ನಾನಂ ಆತ್ಮೈವಾತ್ಮವಿಲೇಪನಂ ।
ಆತ್ಮೈವ ಹ್ಯಾತ್ಮನೋ ಮೋದಮಾತ್ಮೈವಾತ್ಮಪ್ರಿಯಸ್ಸದಾ ॥೩೮॥

ಆತ್ಮೈವ ಹ್ಯಾತ್ಮನೋ ನಿತ್ಯೋ ಹ್ಯಾತ್ಮೈವ ಗುಣಭಾಸಕಃ ।
ಆತ್ಮೈವ ತುರ್ಯರೂಪಾತ್ಮಾ ಆತ್ಮಾತೀತಸ್ತತಃ ಪರಃ ॥೩೯॥

ಆತ್ಮೈವ ನಿತ್ಯಪೂರ್ಣಾತ್ಮಾ ಆತ್ಮೈವಾಹಂ ನ ಸಂಶಯಃ ।
ಆತ್ಮೈವ ತ್ವಮಹಂ ಚಾತ್ಮಾ ಸರ್ವಮಾತ್ಮೈವ ಕೇವಲಂ ॥೪೦॥

---

ಆತ್ಮನೇ ಆತ್ಮನಿಗೆ ಪ್ರಕಾಶವು, ನಾಶರಹಿತನಾದ ಸ್ವಾಮಿಯು ಆತ್ಮನೇ, ಆತ್ಮನೇ ಬ್ರಹ್ಮಜ್ಞಾನವು, ಆತ್ಮನೇ ನಾನು, ನೀನೂ ಆತ್ಮನೇ. ॥೩೬॥

ಆತ್ಮನೇ ಪರಮಾನಂದವು, ಜಗದ್ರೂಪನಾದ ಆತ್ಮನೇ ನಾನು, ಜಗತ್ತಿನ ಪ್ರಕಾಶರೂಪನಾದ ಆತ್ಮನೇ ನಾನು. ಈ ಎಲ್ಲವೂ ಆತ್ಮನೇ ಹೊರತು ಬೇರೇನೂ ಅಲ್ಲ. ॥೩೭॥

ಆತ್ಮನೇ ಆತ್ಮನಿಗೆ ಸ್ನಾನವು, ಆತ್ಮನೇ ಆತ್ಮನಿಗೆ ಗಂಧಾದಿಲೇಪನವು, ಆತ್ಮನೇ ಆತ್ಮನಿಗೆ ಸಂತಸವು, ಆತ್ಮನೇ ಆತ್ಮನಿಗೆ ಪ್ರಿಯನು, ಬೇಕಾದವನು. ॥೩೮॥

ಆತ್ಮನೇ ಆತ್ಮನಿಗೆ ನಿತ್ಯನು, ಆತ್ಮನೇ ಆತ್ಮನ ಗುಣಗಳನ್ನು ಪ್ರಕಾಶಿಸುವವನು. ಆತ್ಮನೇ ದೇಹೇಂದ್ರಿಯಾದಿಗಳಿಂದ ಭಿನ್ನನಾದವನು, ಆತ್ಮನು ಎಲ್ಲವುಗಳಿಂದಲೂ ಭಿನ್ನನು. ॥೩೯॥

ಆತ್ಮನು ನಿತ್ಯನು, ಪೂರ್ಣನು, ಅಂತಹ ಆತ್ಮನೇ ನಾನು, ನೀನೂ ಆತ್ಮನೇ, ಆತ್ಮನೇ ನೀನು, ಎಲ್ಲವೂ ಆತ್ಮನೇ. ॥೪೦॥

ನಿತ್ಯೋಽಹಂ ನಿತ್ಯಪೂರ್ಣೋಽಹಂ ನಿತ್ಯೋಽಹಂ ಸರ್ವದಾ ಸದಾ ।
ಆತ್ಮೈವಾಹಂ ಜಗನ್ನಾನ್ಯದನ್ಯತಾತ್ಮಾ ಪುರಾತನಃ ॥೪೧॥

ಪುರಾತನೋಽಹಂ ಪುರುಷೋಽಹವಿನಾಶಃ,
ಪರಾತ್ಪರೋಽಹಂ ಪರಮೇಶ್ವರೋಽಹಂ ।
ಭವಪ್ರದೋಽಹಂ ಭವನಾಶನೋಽಹಂ
ಸುಖಪ್ರದೋಽಹಂ ಸುಖರೂಪಮದ್ವಯಂ ॥೪೨॥

ಆನಂದೋಽಹಮಶೇಷೋಽಹಮನ್ಯತೋಽಹಂ ನ ಸಂಶಯಃ ।
ಅಜೋಽಹಮಾತ್ಮರೂಪೋಽಹಮನ್ಯನ್ನಾಸ್ತಿ ಸದಾ ಪ್ರಿಯಃ ॥೪೩॥

ಬ್ರಹ್ಮೈವಾಹಂ ಬ್ರಹ್ಮ ಸರ್ವಂ ಸರ್ವಂ ಬ್ರಹ್ಮ ಸದಾಽವ್ಯಯಃ ।
ಸದಾ ಸರ್ವಪದಂ ನಾಸ್ತಿ ಸರ್ವಮೇವ ಸದಾ ನ ಹಿ ॥೪೪॥

---

ನಿತ್ಯನು ನಾನು, ಸದಾ ಪೂರ್ಣನು ನಾನು, ಯಾವಾಗಲೂ ನಿತ್ಯನು ನಾನು. ಆತ್ಮನೇ ನಾನು, ಜಗತ್ತೂ ಆತ್ಮನೇ, ಬೇರೆಯಲ್ಲ. ಅವಿನಾಶಿಯಾದ, ಅನಾದಿಯಾದ ಆತ್ಮನು ನಾನು. ॥೪೧॥

ಅನಾದಿಪುರುಷನು ನಾನು, ಪರಮೇಶ್ವರನು ನಾನು, ಸರ್ವಶ್ರೇಷ್ಠನು ನಾನು, ಸಂಸಾರವನ್ನುಂಟುಮಾಡುವವನು ನಾನು, ಸಂಸಾರವನ್ನು ನಾಶಮಾಡುವವನು ನಾನು, ಸುಖವನ್ನು ಕೊಡುವವನು ನಾನು, ಅದ್ವಿತೀಯಸುಖರೂಪನು ನಾನು. ॥೪೨॥

ಆನಂದವು ನಾನು, ಸರ್ವವೂ ನಾನು, ಮರಣವಿಲ್ಲದವನು ನಾನು, ಜನನವಿಲ್ಲದವನು ನಾನು, ಆತ್ಮನು ನಾನು, ನನ್ನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೪೩॥

ಬ್ರಹ್ಮನೇ ನಾನು, ಎಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವೇ ಎಲ್ಲವೂ. ಎಲ್ಲವೂ ಎನ್ನುವ ಮಾತೇ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೪೪॥

ನಿರ್ಗುಣೋಽಹಂ ನಿರಾಧಾರ ಅಹಂ ನಾಸ್ತೀತಿ ಸರ್ವದಾ।
ಅನರ್ಥಮೂಲಂ ನಾಸ್ತ್ಯೇವ ಮಾಯಾಕಾರ್ಯಂ ನ ಕಿಂಚನ ॥೪೫॥

ಅವಿದ್ಯಾವಿಭವಂ ನಾಸ್ತಿ ಅಹಂ ಬ್ರಹ್ಮ ನ ಸಂಶಯಃ।
ಸರ್ವಂ ಬ್ರಹ್ಮ ಚಿದಾಕಾರಂ ತದೇವಾಹಂ ನ ಸಂಶಯಃ ॥೪೬॥

ತದೇವಾಹಂ ಸ್ವಯಂ ಚಾಹಂ ಪರಂ ಚಾಹಂ ಪರೇಶ್ವರಃ।
ವಿದ್ಯಾಧಾರೋಽಹಮೇವಾತ್ರ ವಿದ್ಯಾವಿದ್ಯೇ ನ ಕಿಂಚನ ॥೪೭॥

ಚಿದಹಂ ಚಿದಹಂ ನಿತ್ಯಂ ತುರ್ಯೋಽಹಂ ತುರ್ಯಕಃ ಪರಃ।
ಬ್ರಹ್ಮೈವ ಸರ್ವಂ ಬ್ರಹ್ಮೈವ ಸರ್ವಂ ಬ್ರಹ್ಮ ಸದಾಸ್ಮ್ಯಹಂ ॥೪೮॥

ಮತ್ತೋಽನ್ಯನ್ನಾಪರಂ ಕಿಂಚಿನ್ಮತ್ತೋಽನ್ಯದ್ಬ್ರಹ್ಮ ನ ಕ್ವಚಿತ್।
ಮತ್ತೋಽನ್ಯತ್ಪರಮಂ ನಾಸ್ತಿ ಮತ್ತೋಽನ್ಯಚ್ಚಿತ್ಪದಂ ನ ಹಿ ॥೪೯॥

---

ನನಗೆ ಯಾವ ಗುಣಗಳೂ ಇಲ್ಲ, ಯಾವ ಆಧಾರವೂ ಇಲ್ಲ, ಅನರ್ಥವೂ ಇಲ್ಲ, ಅನರ್ಥಕಾರಣವೂ ಇಲ್ಲ, ಮಾಯೆಯೂ ಇಲ್ಲ, ಮಾಯೆಯ ಕಾರ್ಯವೂ (ಜಗತ್ತು) ಇಲ್ಲ. ॥೪೫॥

ಅವಿದ್ಯೆ (ಅಜ್ಞಾನದ)ಯ ವೈಭವ (ಜಗತ್ತು)ವು ಇಲ್ಲ, ನಾನೇ ಬ್ರಹ್ಮನು, ಎಲ್ಲವೂ ಜ್ಞಾನಸ್ವರೂಪವಾದ ಬ್ರಹ್ಮವಸ್ತುವು, ಆ ಬ್ರಹ್ಮವಸ್ತುವೇ ನಾನು. ॥೪೬॥

ಅದೇ ನಾನು, ನಾನೇ ನಾನು, ಬೇರೆ-ಎನ್ನುವುದೂ ನಾನು. ನಾನೇ ಪರಮೇಶ್ವರನು, ವಿದ್ಯೆಗೆ ಆಧಾರವು ನಾನು, ಆದರೆ ವಸ್ತುತಃ ನನ್ನ ಹೊರತಾಗಿ ವಿದ್ಯೆಯೂ ಇಲ್ಲ, ಅವಿದ್ಯೆಯೂ (ಅಜ್ಞಾನವೂ) ಇಲ್ಲ. ॥೪೭॥

ಜ್ಞಾನಮೂರ್ತಿಯು ನಾನು, ತ್ರಿಮೂರ್ತಿಗಳಿಗಿಂತ ಭಿನ್ನನಾದ, ದೇಹೇಂದ್ರಿಯ ಮನಸ್ಸುಗಳಿಂದ ಭಿನ್ನನಾದ ಪರಮಾತ್ಮನು ನಾನು. ಬ್ರಹ್ಮವಸ್ತುವೇ ಎಲ್ಲವೂ, ಎಲ್ಲವೂ ಬ್ರಹ್ಮವಸ್ತುವೇ, ಅಂತಹ ಬ್ರಹ್ಮವಸ್ತುವು ನಾನು. ॥೪೮॥

ನನ್ನ ಹೊರತು ಬೇರೆ ಏನೂ ಇಲ್ಲ, ನನ್ನ ಹೊರತಾಗಿ ಬ್ರಹ್ಮವಸ್ತುವೆಂಬುದಿಲ್ಲ. ನನ್ನ ಹೊರತಾಗಿ ಪರಮಾತ್ಮನೆಂಬುದಿಲ್ಲ, ನನ್ನ ಹೊರತು ಚಿತ್ತೆಂಬ ವಸ್ತುವೂ ಇಲ್ಲ. ॥೪೯॥

  

ಮತ್ತೋಽನ್ಯತ್ತತ್ಪದಂ ನಾಸ್ತಿ ಮತ್ತೋಽನ್ಯಚ್ಚಿತ್ಪದಂ ನಮೇ ।
ಮತ್ತೋಽನ್ಯದ್ಭವನಂ ನಾಸ್ತಿ ಮತ್ತೋಽನ್ಯತ್ಕಿಂಚಿದಪ್ಯಣು ॥೫೦॥

ಮತ್ತೋಽನ್ಯತ್ಕಾರಣಂ ನಾಸ್ತಿ ಮತ್ತೋಽನ್ಯದ್ಬ್ರಹ್ಮ ಏವ ನ ।
ಮತ್ತೋಽನ್ಯತ್ತತ್ತ್ವರೂಪಂ ನ ಮತ್ತೋಽನ್ಯಚ್ಛುದ್ಧಮೇವ ನ ॥೫೧॥

ಮತ್ತೋಽನ್ಯತ್ಪಾವನಂ ನಾಸ್ತಿ ಮತ್ತೋಽನ್ಯತ್ತತ್ಪದಂ ನಹಿ ।
ಮತ್ತೋಽನ್ಯದ್ಧರ್ಮರೂಪಂ ವಾ ಮತ್ತೋಽನ್ಯದಖಿಲಂ ನ ಚ ॥೫೨॥

ಮತ್ತೋಽನ್ಯದಪದೇವಾತ್ರ ಮತ್ತೋಽನ್ಯನ್ಮಿಥ್ಯ ಏವ ಹಿ ।
ಮತ್ತೋಽನ್ಯದ್ಭಾತಿ ಸರ್ವಸ್ಯ ಮತ್ತೋಽನ್ಯಚ್ಛಶಶೃಂಗವತ್ ॥೫೩॥

ಮತ್ತೋಽನ್ಯದ್ಭಾತಿ ಚೇನ್ಮಿಥ್ಯಾ ಮತ್ತೋಽನ್ಯಚ್ಚೇಂದ್ರಜಾಲಕಂ ।
ಮತ್ತೋಽನ್ಯತ್ತತ್ಸದೃಶಂ ನಾಸ್ತಿ ಮತ್ತೋಽನ್ಯತ್ಕಾರ್ಯಲಕ್ಷಣಂ ॥೫೪॥

---

ನನ್ನ ಹೊರತಾಗಿ ಅದು, ಅವನು ಎಂಬುದಿಲ್ಲವು. ನನ್ನ ಹೊರತಾಗಿ ಏನೂ ಜನಿಸುವುದಿಲ್ಲ, ನನ್ನ ಹೊರತಾಗಿ ಯಾವುದೊಂದು ಚಿಕ್ಕವಸ್ತುವೂ ಇಲ್ಲ, ಎಲ್ಲವೂ ನಾನೇ. ॥೫೦॥

ನನ್ನ ಹೊರತು ಬೇರೊಂದು ಕಾರಣವು ಇಲ್ಲ. ನನ್ನ ಹೊರತಾಗಿ ಬ್ರಹ್ಮ ವಸ್ತುವಿಲ್ಲ. ನನ್ನ ಹೊರತು ಸತ್ವಗುಣವೆಂಬುದಿಲ್ಲ, ನನ್ನ ಹೊರತಾಗಿ ಶುದ್ಧವೆನ್ನುವುದಿಲ್ಲ. ॥೫೧॥

ನನಗಿಂತ ಪವಿತ್ರವೆಂಬ ವಸ್ತುವಿಲ್ಲ. ನನ್ನ ಹೊರತಾಗಿ ಅದು ಎಂಬ ಪದವೇ ಇಲ್ಲ, ನನ್ನ ಹೊರತಾಗಿ ಧರ್ಮವೆಂಬುದಿಲ್ಲ, ನನ್ನ ಹೊರತಾಗಿ ಯಾವ ವಸ್ತುವೂ ಇಲ್ಲ. ॥೫೨॥

ನನ್ನ ಹೊರತಾಗಿ ಕಾಣುವುದೆಲ್ಲವೂ ಅಸತ್ಯ, ಎಲ್ಲವೂ ಮಿಥ್ಯೆಯು, ನನ್ನ ಹೊರತಾಗಿ ಕಾಣುವುದೆಲ್ಲವೂ ಮೊಲದ ಕೊಂಬಿನಂತೆ ಅಸತ್ಯವಾದವು. ॥೫೩॥

ನನ್ನ ಹೊರತಾಗಿ ಬೇರೊಂದು ಕಂಡರೆ ಅದೆಲ್ಲವೂ ಸುಳ್ಳು, ಅದೆಲ್ಲವೂ ಇಂದ್ರಜಾಲವು, ನನ್ನ ಹೊರತಾಗಿ ಸದೃಶವಸ್ತುವೆಂಬುದಿಲ್ಲ, ಕಾರ್ಯವೆಂಬುದೂ ಇಲ್ಲ. ॥೫೪॥

ಬ್ರಹ್ಮಮಾತ್ರಮಿದಂ ಸರ್ವಂ ಸೋಹಮಸ್ಮೀತಿ ಭಾವನಾ ।
ಸರ್ವಮುಕ್ತಂ ಭಗವತಾ ಏವಮೇವೇತಿ ನಿಶ್ಚಿನು ॥೫೫॥

ಬಹುನೋಕ್ತೇನ ಕಿಂ ಯೋಗಿನ್ ನಿಶ್ಚಯಂ ಕುರು ಸರ್ವದಾ ।
ಸಕೃನ್ನಿಶ್ಚಯಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೫೬॥

ವನನಗಭುವನಂ ಯಚ್ಛಂಕರಾನ್ನಾನ್ಯದಸ್ತಿ
ಜಗದಿದಮಸುರಾದ್ಯಂ ದೇವದೇವಃ ಸಪತ್ನಃ ।
ತನುಮನಗಮವಾಪ್ಯೇ ಕೋಶಕಾಶಾವಕಾಶೇ
ಸಖಲು ಪರಶಿವಾತ್ಮಾ ದೃಶ್ಯತೇ ಸೂಕ್ಷ್ಮಬುದ್ಧ್ಯಾ ॥೫೭॥

ಚಕ್ಷುಶ್ಶ್ರೋತ್ರಮನೋಸವಶ್ಚ ಹೃದಿ ಖಾದುದ್ಭಾಸಿತಧ್ಯಾಂತರಾ
ತಸ್ಮಿನ್ನೇವ ವಿಲೀಯತೇ ಗತಿಪರಂ ಯದ್ವಾ ಸಮಾಂ ವಾಸಿತಂ ।
ಚಿತ್ತಂ ಚೇತಯತೇ ಹೃದೀಂದ್ರಿಯಗಣಂ ವಾಚಾಂ ಮನೋದೂರಗಂ
ತಂ ಬ್ರಹ್ಮಾಮೃತಮೇತದೇವ ಗಿರಿಜಾಕಾಂತಾತ್ಮನಾ ಸಂಜ್ಞಿತಂ ॥೫೮॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಅಷ್ಟಾದಶೋಽಧ್ಯಾಯಃ

---

ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಆ ಬ್ರಹ್ಮವಸ್ತುವೇ ನಾನು ಎಂದು ತಿಳಿಯುವ ಈ ರಹಸ್ಯವಾದ ತತ್ವವನ್ನು ಭಗವಂತನೇ ಹೇಳಿರುವನು. ॥೫೫॥

ಎಲೈ ಯೋಗಿಯಾದ ನಿದಾಘನೇ, ಹೆಚ್ಚು ವಿವರಣೆಯಿಂದೇನು ? ನಾನೇ ಬ್ರಹ್ಮನೆಂದು ಅನುಭವಪೂರ್ವಕವಾಗಿ ನಿಶ್ಚಯಿಸು. ಹಾಗೆ ಒಂದುಬಾರಿ ನಿಶ್ಚಯವುಳ್ಳಯವನಾದರೂ ನೀನು ಬ್ರಹ್ಮನೇ ಆಗುವೆ. ॥೫೬॥

ಶಂಕರನ ಹೊರತಾಗಿ ಕಾಡು, ಬೆಟ್ಟ, ನಾಡು ಎಂಬುದಾವುದೂ ಇಲ್ಲ. ದೇವ-ರಾಕ್ಷಸ-ಮನುಷ್ಯ ಮೊದಲಾದ ಈ ಜಗತ್ತೆಲ್ಲವೂ ಆ ದೇವದೇವನೇ ಆಗಿರುವನು. ಇಂದ್ರಿಯಗಳಿಗೆ ಅಗೋಚರನಾದ ಆ ದೇವನು ನಿನ್ನ ಹೃದಯಮಂದಿರದಲ್ಲಿಯೇ ಸೂಕ್ಷ್ಮಬುದ್ಧಿಗೆ ಮಾತ್ರ ಕಾಣಿಸುವನು. ॥೫೭॥

ಕಣ್ಣು-ಕಿವಿ-ಮನ-ಹೃದಯ ಮೊದಲಾದ ಇಂದ್ರಿಯಗಳಲ್ಲಿ ನೆಲಸಿ ಆ ದೇವನು ಅವೆಲ್ಲವನ್ನೂ ಪ್ರೇರಿಸುವನು. ಆದರೂ ಇಂದ್ರಿಯಗಳಿಗೆ ಆತನು ಅಗೋಚ

ರನ್ನು, ಅಂತಹ ಪರಮಾತ್ಮನಾದ ಗಿರಿಜಾಕಾಂತನೆಂಬ ಸಂಜ್ಞೆಯುಳ್ಳ, ಮತ್ತು ವ್ಯಾಪಕನಾದ, ಜನನಮರಣಗಳಿಲ್ಲದ ಪರಬ್ರಹ್ಮನನ್ನು ಭಾವಿಸುವೆನು. ಎಂದು ನಿದಾಘಮುನಿಗೆ ಋಭುಮಹರ್ಷಿಯು ಸ್ವಸ್ವರೂಪವನ್ನು ತಿಳಿಯಪಡಿಸಿದನು.॥೫೮॥

ಇಲ್ಲಿಗೆ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹದಿನೆಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀ ಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಏಕೋನವಿಂಶೋಽಧ್ಯಾಯಃ

॥ ಋಭುರುವಾಚ ॥

ಬ್ರಹ್ಮಾನಂದಂ ಪ್ರವಕ್ಷ್ಯಾಮಿ ತ್ರಿಷು ಲೋಕೇಷು ದುರ್ಲಭಂ ।
ಯಸ್ಯ ಶ್ರವಣಮಾತ್ರೇಣ ಸದಾ ಮುಕ್ತಿಮವಾಪ್ನುಯಾತ್ ॥೧॥

ಪರಾನಂದೋಽಹಮೇವಾತ್ಮಾ ಸರ್ವಾತ್ಮಾನಂದಮೇವ ಹಿ ।
ಪೂರ್ಣಾನಂದಸ್ವರೂಪೋಽಹಂ ಚಿದಾನಂದಮಯಂ ಜಗತ್ ॥೨॥

ಸದಾನಂದಮನಂತೋಽಹಂ ನಿತ್ಯಾನಂದಮಿದಂ ಮನಃ ।
ಬುದ್ಧಾನಂದಸ್ವರೂಪೋಽಹಂ ಬೋಧಾನಂದಮಿದಂ ಜಗತ್ ॥೩॥

---

## ಹತ್ತೊಂಬತ್ತನೆಯ ಅಧ್ಯಾಯವು

ಎಲೈ ನಿದಾಘಮುನಿಯೇ, ಈಗ ಮೂರುಲೋಕಗಳಲ್ಲೂ ದುರ್ಲಭವಾದ ಮತ್ತು ಕೇಳಿದೊಡನೆ ಮುಕ್ತಿಯುಂಟಾಗುವಂತಹ ಬ್ರಹ್ಮಾನಂದವನ್ನು ಈಗ ಹೇಳುವೆನು ಕೇಳು. ಎಂದು ಮತ್ತೆ ಋಭುಮುನಿಯು ಆನಂದಾತ್ಮಸ್ವರೂಪವನ್ನು ಬೋಧಿಸತೊಡಗಿದನು. ॥೧॥

ಸರ್ವೋತ್ತಮವಾದ ಆನಂದಮೂರ್ತಿಯಾದ ಆತ್ಮನು ನಾನು, ಆತ್ಮಾನಂದವೆಲ್ಲವೂ ನಾನೇ, ಪರಿಪೂರ್ಣವಾದ ಆನಂದಸ್ವರೂಪನು ನಾನು, ಈ ಜಗತ್ತು ಆನಂದಮಯವು. ॥೨॥

ಸದಾ ಆನಂದರೂಪನೂ ಅನಂತ (ಕೊನೆ ಅಥವಾ ನಾಶವಿಲ್ಲದವ)ನೂ ನಾನು. ಈ ಮನವು ನಿತ್ಯಾನಂದಸ್ವರೂಪವು, ನಾನು ಜ್ಞಾನಾನಂದಸ್ವರೂಪನು, ಈಜಗತ್ತು ಆತ್ಮಾನಂದರೂಪವು. ॥೩॥

ಕೇವಲಾನಂದಮಾತ್ರೋಽಹಂ ಕೇವಲಜ್ಞಾನವಾನಹಂ ।
ಇತಿ ಭಾವಯ ಯತ್ನೇನ ಪ್ರಪಂಚೋಪಶಮಾಯ ವೈ ॥೪॥

ಸದಾ ಸತ್ಯಂ ಪರಂಜ್ಯೋತಿಃ ಸದಾ ನಿತ್ಯಾದಿಲಕ್ಷಣಃ ।
ಸದಾ ಸತ್ಯಾದಿಹೀನಾತ್ಮಾ ಸದಾ ಜ್ಯೋತಿಪ್ರಿಯೋ ಹ್ಯಹಂ ॥೫॥

ನಾಸ್ತಿ ಮಿಥ್ಯಾ ಪ್ರಪಂಚಾತ್ಮಾ ನಾಸ್ತಿ ಮಿಥ್ಯಾ ಮನೋಮಯಃ ।
ನಾಸ್ತಿ ಮಿಥ್ಯಾಽಭಿಧಾನಾತ್ಮಾ ನಾಸ್ತಿ ಚಿತ್ತಂ ದುರಾತ್ಮವತ್ ॥೬॥

ನಾಸ್ತಿ ಮೂಢತರೋ ಲೋಕೇ ನಾಸ್ತಿ ಮೂಢತರೋ ನರಃ ।
ಅಹಮೇವ ಪರಂ ಬ್ರಹ್ಮ ಅಹಮೇವ ಸ್ವಯಂ ಸದಾ ॥೭॥

ಇದಂ ಪರಂ ಚ ನಾಸ್ತ್ಯೇವ ಅಹಮೇವ ಹಿ ಕೇವಲಂ ।
ಅಹಂ ಬ್ರಹ್ಮಾಸ್ಮಿ ಶುದ್ಧೋಽಸ್ಮಿ ಸರ್ವಂ ಬ್ರಹ್ಮೈವ ಕೇವಲಂ ॥೮॥

---

"ಶುದ್ಧವಾದ ಆನಂದಸ್ವರೂಪನು ನಾನು, ಶುದ್ಧವಾದ ಜ್ಞಾನಸ್ವರೂಪನು ನಾನು"---ಎಂಬುದಾಗಿ ಪ್ರಯತ್ನಪೂರ್ವಕವಾಗಿ ನೀನು ಭಾವಿಸು. ಆ ಭಾವನೆಯಿಂದ ಪ್ರಪಂಚವೆಲ್ಲವೂ ಮಾಯವಾಗಿ ನಿನಗೆ ಖಂಡಿತವಾಗಿ ಮುಕ್ತಿಯು ಲಭಿಸುವುದು. ॥೪॥

ನಾನು ಯಾವಾಗಲೂ ಸತ್ಯಸ್ವರೂಪನು, ಅತ್ಯುತ್ಕೃಷ್ಟವಾದ ಜ್ಯೋತಿಯು ನಾನು. ನಿತ್ಯನೂ ಜ್ಞಾನಸ್ವರೂಪನೂ ಆನಂದರೂಪನೂ ನಾನಾಗಿರುವೆನು. ಅಸತ್ಯತೆಯು ನನ್ನಲ್ಲಿ ಯಾವಾಗಲೂ ಇಲ್ಲ, ಅಸತ್ಯವಸ್ತುವೆಂಬುದೇ ಇಲ್ಲ. ॥೫॥

ಅಸತ್ಯವಾದ ಪ್ರಪಂಚಸ್ವರೂಪತೆಯು ನನ್ನಲ್ಲಿಲ್ಲ. ಅಸತ್ಯವಾದ ಮನೋಮಯತೆಯು ನನ್ನಲ್ಲಿಲ್ಲ. ಅಸತ್ಯವಾದ ನಾನಾಬಗೆಯ ಹೆಸರುಗಳೂ ನನಗಿಲ್ಲ. ಕೆಟ್ಟದ್ದನ್ನೇ ಆಲೋಚಿಸುವಂತಹ ಮನಸ್ಸೂ ನನಗಿಲ್ಲ. ॥೬॥

ಮಾಯಾಮಯವಾದ ಈ ಪ್ರಪಂಚವೂ ಇಲ್ಲ, ಮಾಯಾಮಯನಾದ ಮಾನವನೂ ಇಲ್ಲ, ನಾನೇ ಪರಬ್ರಹ್ಮನು, ಯಾವಾಗಲೂ ನಾನೊರ್ವನೇ ಇರುವವನು. ॥೭॥

ಇದು-ಬೇರೆಯದು-ಎನ್ನುವುದಾವುದೂ ಇಲ್ಲ. ಎಲ್ಲವೂ ನಾನೇ, ನಾನು ಬ್ರಹ್ಮನು, ಶುದ್ಧನು, ಎಲ್ಲವೂ ಬ್ರಹ್ಮವಸ್ತುವೇ. ॥೮॥

ಜಗತ್ಸರ್ವಂ ಸದಾ ನಾಸ್ತಿ ಚಿತ್ತಮೇವ ಜಗನ್ಮಯಂ ।
ಚಿತ್ತಮೇವ ಪ್ರಪಂಚಾಖ್ಯಂ ಚಿತ್ತಮೇವ ಶರೀರಕಂ ॥೯॥

ಚಿತ್ತಮೇವ ಮಹಾದೋಷಃ ಚಿತ್ತಮೇವ ಹಿ ಬಾಲಕಃ ।
ಚಿತ್ತಮೇವ ಮಹಾಮಾಯಾ ಚಿತ್ತಮೇವ ಮಹಾನಸತ್ ॥೧೦॥

ಚಿತ್ತಮೇವ ಹಿ ಮಿಥ್ಯಾತ್ಮಾ ಚಿತ್ತಂ ಶಶವಿಷಾಣವತ್ ।
ಚಿತ್ತಂ ನಾಸ್ತಿ ಸದಾ ನಾಸ್ತಿ ಚಿತ್ತಂ ವಂಧ್ಯಾಕುಮಾರವತ್ ॥೧೧॥

ಚಿತ್ತಂ ಶೂನ್ಯಂ ನ ಸಂದೇಹೋ ಬ್ರಹ್ಮೈವ ಕೇವಲಂ ಜಗತ್ ।
ಅಹಮೇವ ಹಿ ಚೈತನ್ಯಮಹಮೇವ ಹಿ ನಿರ್ಗುಣಃ ॥೧೨॥

ಮನ ಏವ ಹಿ ಸಂಸಾರಃ ಮನ ಏವ ಹಿ ಮಂಡಲಂ ।
ಮನ ಏವ ಹಿ ಬಂಧತ್ವಂ ಮನ ಏವ ಹಿ ಪಾತಕಂ ॥೧೩॥

---

ಈ ಜಗತ್ತು ಯಾವಾಗಲೂ ಇಲ್ಲ, ಮನಸ್ಸೇ ಜಗತ್ತಿನರೂಪವು. ಮನವೇ ಜಗತ್ತು, ಮನಸ್ಸೇ ಶರೀರವು, ಅಂದರೆ ಎಲ್ಲವೂ ಮನಸ್ಸಿನ ಭ್ರಾಂತಿಯ ಕಲ್ಪನೆಗಳು. ॥೯॥

ಮನಸ್ಸೇ ಮಹಾದೋಷವು, ದೋಷಗಳಂತೆ ಅನೇಕಾನಿಷ್ಟಗಳನ್ನುಂಟು ಮಾಡುವುದು. ಹುಡುಗರಂತೆ ಮನವೇ ನಾನಾಚೇಷ್ಟೆಗಳನ್ನಾಡುವುದು. ಆ ಮನವೇ ಮಹಾಮಾಯೆಯು, ಮನವೇ ಅಸತ್ಯವು. ॥೧೦॥

ಮನಸ್ಸು, ದೇಹವೇ ಆತ್ಮನೆಂಬ ಭ್ರಮೆಯನ್ನುಂಟುಮಾಡುವುದು. ವಸ್ತುತಃ ಮನವು ಇಲ್ಲ, ಮೊಲದ ಕೊಂಬಿನಂತೆಯೂ ಬಂಜೆಯ ಕುಮಾರನಂತೆಯೂ ಅದು ಯಾವಾಗಲೂ ಇರುವುದಲ್ಲ, ಅಸತ್ಯವು. ॥೧೧॥

ಆದುದರಿಂದ ಮನವೆಂಬುದು ಇಲ್ಲ, ಮನಸ್ಸಿನ ಕಲ್ಪನೆಯಾದ ಜಗತ್ತೂ ಇಲ್ಲ. ಬ್ರಹ್ಮವಸ್ತುವಿನ ಹೊರತಾಗಿ ಜಗತ್ತಿಲ್ಲವು. ಅದು ಚೈತನ್ಯರೂಪವು, ನಿರ್ಗುಣವು, ಅಂತಹ ಬ್ರಹ್ಮವಸ್ತುವೇ ನಾನು ॥೧೨॥

ಮನಸ್ಸೇ ಸಂಸಾರವು, ಮನಸ್ಸೇ ಪರಿವಾರವು. ಮನವೇ ಬಂಧನವು, ಮನವೇ ಪಾಪವು. ॥೧೩॥

ಮನ ಏವ ಮಹಾದುಃಖಂ ಮನ ಏವ ಶರೀರಕಂ ।
ಮನ ಏವ ಪ್ರಪಂಚಾಖ್ಯಂ ಮನ ಏವ ಕಲೇಬರಂ ॥೧೪॥

ಮನ ಏವ ಮಹಾಸತ್ಯಂ ಮನ ಏವ ಚತುರ್ಮುಖಃ ।
ಮನ ಏವ ಹರಿಸ್ಸಾಕ್ಷಾನ್ಮನ ಏವ ಶಿವಃ ಸ್ಮೃತಃ ॥೧೫॥

ಮನ ಏವೇಂದ್ರಜಾಲಾಖ್ಯಂ ಮನಸ್ಸಂಕಲ್ಪಮಾತ್ರಕಂ ।
ಮನ ಏವ ಮಹಾಪಾಪಂ ಮನ ಏವ ದುರಾತ್ಮವಾನ್ ॥೧೬॥

ಮನ ಏವ ಹಿ ಸರ್ವಾಖ್ಯಂ ಮನ ಏವ ಮಹದ್ಭಯಂ ।
ಮನ ಏವ ಪರಂ ಬ್ರಹ್ಮ ಮನ ಏವ ಹಿ ಕೇವಲಂ ॥೧೭॥

ಮನ ಏವ ಚಿದಾಕಾರಂ ಚಿದಾಕಾರಂ ಮನಾಯತೇ ।
ಚಿದೇವ ಪರಮಂ ರೂಪಂ ಚಿದೇವ ಹಿ ಪರಂ ಪದಂ ॥೧೮॥

ಪರಂ ಬ್ರಹ್ಮಾಹಮೇವಾದ್ಯ ಪರಂ ಬ್ರಹ್ಮಾಹಮೇವ ಹಿ ।
ಅಹಮೇವ ಹಿ ತೃಪ್ತಾತ್ಮಾ ಅಹಮಾನಂದವಿಗ್ರಹಃ ॥೧೯॥

---

ಮನವೇ ಮಹಾದುಃಖವು, ಮನವೇ ಸ್ಥೂಲಶರೀರವು, ಮನವೇ ಸೂಕ್ಷ್ಮ ಶರೀರವು, ಮನವೇ ಪ್ರಪಂಚವು. ॥೧೪॥

ಮನವೇ ಅಸತ್ಯವು, ಮನವೇ ಚತುರ್ಮುಖಬ್ರಹ್ಮನು, ಮನವೇ ಹರಿಯು, ಮನವೇ ಶಿವನು, ಎಲ್ಲರೂ ಮನಸ್ಸಿನ ಕಲ್ಪನೆಗಳು. ॥೧೫॥

ಮನವೇ ಇಂದ್ರಜಾಲವು, ಮನವೇ ಸಂಕಲ್ಪವು, ಮನವೇ ಮಹಾಪಾಪವು, ಮನಸ್ಸೇ ದುರಾತ್ಮವಾದುದು. ॥೧೬॥

ಎಲ್ಲವೂ ಎನ್ನುವುದು ಮನಸ್ಸೇ, ಮನವೇ ಮಹಾಭಯವು, ಮನಸ್ಸೇ ಪರಬ್ರಹ್ಮ, ಒಟ್ಟಿನಲ್ಲಿ ಎಲ್ಲವೂ ಮನವೇ. ॥೧೭॥

ಮನವೇ ಜ್ಞಾನಾಕಾರವು, ಜ್ಞಾನಾಕಾರವೇ ಮನವು, ಜ್ಞಾನಾಕಾರವೇ ಪರಮರೂಪವು, ಜ್ಞಾನವೇ ಪರಮಪದವಿಯು. ॥೧೮॥

ನಾನೇ ಪರಬ್ರಹ್ಮವಸ್ತುವು, ಪರಬ್ರಹ್ಮವಸ್ತುವು ನಾನೇ, ನಿತ್ಯತೃಪ್ತವಾದ ಆತ್ಮವು ನಾನು, ಆನಂದಮೂರ್ತಿಯು ನಾನು. ॥೧೯॥

ಅಹಂ ಬುದ್ಧಃ ಪ್ರಬುದ್ಧಾತ್ಮಾ ನಿತ್ಯನಿಶ್ಚಯನಿರ್ಮಲಃ ।
ಅಹಮೇವ ಹಿ ಶಾಂತಾತ್ಮಾ ಅಹಂ ಬ್ರಹ್ಮೈವ ಕೇವಲಂ ॥೨೦॥

ಅಹಮೇವ ಪ್ರಕಾಶಾತ್ಮಾ ಅಹಮಾನಂದವಿಗ್ರಹಃ ।
ಅಹಂ ನಿತ್ಯೋ ನ ಸಂದೇಹ ಅಹಂ ಬುದ್ಧಃ ಪ್ರಿಯಸ್ಸದಾ ॥೨೧॥

ಅಹಮೇವಾಹಮೇವೈಕೋ ಅಹಮೇವಾಖಿಲಾವೃತಃ ।
ಅಹಮೇವ ಸ್ವಯಂ ಸಿದ್ಧಂ ಅಹಮೇವಾನುಮೋದಕಃ ॥೨೨॥

ಅಹಮೇವ ತ್ವಮೇವಾಹಂ ಸರ್ವಾತ್ಮಾ ಸರ್ವವರ್ಜಿತಃ ।
ಅಹಮೇವ ಪರಂ ಬ್ರಹ್ಮ ಅಹಮೇವ ಪರಾತ್ಪರಃ ॥೨೩॥

ಅಹಂಕಾರಂ ನ ಮೇ ದುಃಖಂ ನ ಮೇ ದೋಷಂ ನ ಮೇ ಸುಖಂ ।
ನ ಮೇ ಬುದ್ಧಿರ್ನಮೇ ಚಿತ್ತಂ ನ ಮೇ ದೇಹೋ ನ ಮೇಂದ್ರಿಯಂ ॥೨೪॥

---

ಜ್ಞಾನಿಯು ನಾನು, ಜ್ಞಾನಸ್ವರೂಪನು ನಾನು, ನಿತ್ಯಜ್ಞಾನಸ್ವರೂಪನು ನಾನು, ನಿರ್ಮಲನು ನಾನು, ಶಾಂತಮೂರ್ತಿಯು ನಾನು, ನಾನೇ ಕೇವಲ ಬ್ರಹ್ಮ ವಸ್ತುವು. ॥೨೦॥

ನಾನು ಜ್ಞಾನವೆಂಬ ಜ್ಯೋತಿಯ ಬೆಳಕು, ಆನಂದರೂಪನು ನಾನು, ನಿತ್ಯನೂ, ಜ್ಞಾನಿಯೂ ನಾನು, ಜ್ಞಾನವು ನಾನು, ಎಲ್ಲರಿಗೂ ಅತಿ ಪ್ರಿಯನಾದ ಆತ್ಮನು ನಾನು. ॥೨೧॥

ನಾನು ಎನ್ನುವವನು ನಾನೇ, ನಾನೊರ್ವನೇ ಜನನಮರಣಗಳಿಲ್ಲದೇ ಸ್ಥಿರವಾಗಿರುವವನು, ನಾನು ಸ್ವಯಂ ಸಿದ್ಧನು, ಎಲ್ಲವನ್ನೂ ಪ್ರೇರಿಸುವವನು ನಾನು. ॥೨೨॥

ನಾನೇ ನೀನು, ನೀನೇ ನಾನು, ಎಲ್ಲರ ಆತ್ಮನೂ ನಾನು, ಆದರೆ ನನ್ನಲ್ಲಿ ಎಲ್ಲ ಎಂಬ ಬಹು ಭೇದವೂ ಇಲ್ಲ. ನಾನೇ ಪರಬ್ರಹ್ಮನು, ನಾನೇ ಸರ್ವೋತ್ತಮನು. ॥೨೩॥

ನನಗೆ ಅಹಂಕಾರವಿಲ್ಲ, ಸುಖದುಃಖಗಳಿಲ್ಲ. ದೋಷವಿಲ್ಲ. ಬುದ್ಧಿಯು ಇಲ್ಲ. ದೇಹವು ಇಲ್ಲ, ಇಂದ್ರಿಯಗಳು ಇಲ್ಲ. ॥೨೪॥

ನ ಮೇ ಗೋತ್ರಂ ನ ಮೇ ನೇತ್ರಂ ನ ಮೇ ಪಾತ್ರಂ ನ ಮೇ ತೃಣಂ ।
ನ ಮೇ ಜಪೋ ನ ಮೇ ಮಂತ್ರೋ ನ ಮೇ ಶ್ರೋತ್ರಂ ನ ಮೇ ಕ್ವಚಿತ್ ॥೨೫॥

ನ ಮೇ ಬಾಹ್ಯಂ ನ ಮೇ ಬುದ್ಧಿಸ್ಥಾನಂ ವಾಪಿ ನ ಮೇ ವಯಃ ।
ನ ಮೇ ತತ್ವಂ ನ ಮೇ ಲೋಕಃ ನ ಮೇ ಶಾಂತಿರ್ನ ಮೇ ಛಲಂ ॥೨೬॥

ನ ಮೇ ಕಾಮಃ ನ ಮೇ ಕೋಪಂ ಕೇವಲಂ ಬ್ರಹ್ಮಮಾತ್ರತಃ ।
ಕೇವಲಂ ಬ್ರಹ್ಮರೂಪತ್ವಾತ್ಕೇವಲಂ ಸ್ವಯಮೇವ ಹಿ ॥೨೭॥

ನ ಮೇ ರಾಗಂ ನ ಮೇ ಲೋಭಂ ನ ಮೇ ಸ್ತೋತ್ರಂ ನ ಮೇ ಸ್ತುತಿಃ ।
ನ ಮೇ ಮೋಹಂ ನ ಮೇ ತೃಷ್ಣಾ ನ ಮೇ ಸ್ನೇಹೋ ನ ಮೇ ಗುಣಃ ॥೨೮॥

ನ ಮೇ ಕೋಶಂ ನ ಮೇ ಬಾಲ್ಯಂ ನ ಮೇ ಯೌವನವಾರ್ಧಕೌ ।
ಸರ್ವಂ ಬ್ರಹ್ಮೈಕರೂಪತ್ವಾದೇಕಂ ಬ್ರಹ್ಮೇತಿ ನಿಶ್ಚಿತಂ ॥೨೯॥

ಬ್ರಹ್ಮಣ್ಯೋನ್ಯತ್ಪರಂ ನಾಸ್ತಿ ಬ್ರಹ್ಮಣೋನ್ಯನ್ನ ಕಿಂಚ ನ ।
ಬ್ರಹ್ಮಣೋನ್ಯದಿದಂ ನಾಸ್ತಿ ಬ್ರಹ್ಮಣೋನ್ಯದ್ವಯಂ ನ ಹಿ ॥೩೦॥

---

ನನಗೆ ಕುಲವಿಲ್ಲ, ಕಣ್ಣುಗಳಿಲ್ಲ, ಯೋಗ್ಯತೆಯೆಂಬುದಿಲ್ಲ. ಯಾವುದೂ ಇಲ್ಲ, ಜಪವಿಲ್ಲ, ಮಂತ್ರವಿಲ್ಲ, ಕಿವಿಗಳಿಲ್ಲ, ಎಲ್ಲಿಯೂ ಏನೂ ನನಗಿಲ್ಲವು. ॥೨೫॥

ನನಗೆ ಒಳಗು ಹೊರಗು ಎಂಬುದಿಲ್ಲ, ಬುದ್ಧಿಯಿಲ್ಲ, ವಯಸ್ಸು ಇಲ್ಲ, ತತ್ವವು ಇಲ್ಲ, ಲೋಕವು ಇಲ್ಲ, ಶಾಂತಿಯು ಇಲ್ಲ, ಚಲನೆಯು ಇಲ್ಲ. ॥೨೬॥

ನನಗೆ ಕಾಮವಿಲ್ಲ, ಕ್ರೋಧವಿಲ್ಲ, ನಿರ್ಗುಣವಾದ ನಿರ್ವಿಕಾರವಾದ ಶುದ್ಧವಾದ ಬ್ರಹ್ಮವಸ್ತುವೇ ನಾನಾದುದರಿಂದ ನನಗೆ ಭಿನ್ನವಾಗಿ ಯಾವುದೂ ಇಲ್ಲ. ॥೨೭॥

ನನಗೆ ರಾಗವಿಲ್ಲ, ಲೋಭವಿಲ್ಲ, ಸ್ತೋತ್ರವಿಲ್ಲ, ಸ್ತುತಿಸಲೂ ಬೇಕಾಗಿಲ್ಲ, ಮೋಹವು ನನಗಿಲ್ಲ, ಆಸೆಯು ನನಗಿಲ್ಲ, ಗುಣಗಳಿಲ್ಲ, ಭಂಡಾರವಿಲ್ಲ, ಬಾಲ್ಯವು ನನಗಿಲ್ಲ, ಯೌವನವು ನನಗಿಲ್ಲ, ಮುಪ್ಪು ನನಗಿಲ್ಲ, ಎಲ್ಲವೂ ಬ್ರಹ್ಮರೂಪವಾದುದರಿಂದ ಬ್ರಹ್ಮನ ಹೊರತು ಯಾವುದೂ ಇಲ್ಲ, ಆ ಬ್ರಹ್ಮನೇ ನಾನು. ॥೨೯॥

ಬ್ರಹ್ಮನ ಹೊರತಾಗಿ ಶ್ರೇಷ್ಠವಸ್ತುವೇ ಇಲ್ಲ, ನೀಚವಸ್ತುವೂ ಇಲ್ಲ, “ಇದು” ಎನ್ನುವ ವಸ್ತುವೂ ಇಲ್ಲ, “ನಾವು” ಎನ್ನುವ ವಸ್ತುವೂ ಇಲ್ಲ. ॥೩೦॥

ಆತ್ಮನೋಽನ್ಯತ್ಸದಾ ನಾಸ್ತಿ ಆತ್ಮೈವಾಹಂ ನ ಸಂಶಯಃ ।
ಆತ್ಮನೋಽನ್ಯತ್ಸುಖಂ ನಾಸ್ತಿ ಆತ್ಮನೋಽನ್ಯದಹಂ ನ ಚ ॥೩೧॥

ಗ್ರಾಹ್ಯಗ್ರಾಹಕಹೀನೋಽಹಂ ತ್ಯಾಗತ್ಯಾಜ್ಯವಿವರ್ಜಿತಃ ।
ನತ್ಯಾಜ್ಯಂ ನ ಚ ಮೇ ಗ್ರಾಹ್ಯಂ ನ ಬಂಧಂ ನ ಚ ಮುಕ್ತಿಕಂ ॥೩೨॥

ನ ಲೋಕಂ ನಚ ಮೇ ಹೀನಂ ನಚ ಶ್ರೇಷ್ಠಂ ಚ ದೂಷಣಂ ।
ನ ಮೇ ಬಲಂ ನ ಚಾಂಡಾಲಾ ನಮೇ ವಿಪ್ರಾದಿವರ್ಣಕಂ ॥೩೩॥

ನ ಮೇ ಪೀತಂ ನ ಮೇ ಹ್ರಸ್ವಂ ನ ಮೇ ಕ್ಷೀಣಂ ನ ಮೇ ಬಲಂ ।
ನ ಮೇ ಭುಕ್ತಿರ್ನಮೇ ಶಕ್ತಿರ್ನ ಮೇ ಬೇಧೋ ನ ಮೇ ಪೃಥಕ್ ॥೩೪॥

ಅಹಂ ಬ್ರಹ್ಮೈಕಮಾತ್ರತ್ವಾನ್ನಿತ್ಯತ್ವಾನ್ಯನ್ನ ಕಿಂಚನ ।
ನ ಮತಂ ನಚ ಮೇ ಮಿಥ್ಯಾ ನ ಮೇ ಸತ್ಯಂ ವಪುಃ ಕ್ವಚಿತ್ ॥೩೫॥

---

ಆತ್ಮನ ಹೊರತು ಯಾವುದೂ ಯಾವಾಗಲೂ ಇಲ್ಲವು, ನಾನೇ ಆತ್ಮನು, ಆತ್ಮನ ಹೊರತಾಗಿ ಸುಖವಿಲ್ಲವು, ಆತ್ಮನ ಹೊರತಾಗಿ ನಾನು ಎಂಬುದು ಇಲ್ಲ. ॥೩೧॥

ನಾನು ಗ್ರಹಿಸುವವನು ಅಲ್ಲ, ಗ್ರಹಿಸಲ್ಪಡುವ ವಸ್ತುವು ವಸ್ತುತಃ ಇಲ್ಲ. ಬಿಡುವಿಕೆಯು ನನ್ನಲ್ಲಿಲ್ಲ, ಬಿಡಲ್ಪಡುವವಸ್ತುವೇ ಪ್ರಪಂಚದಲ್ಲಿಲ್ಲವು. ಆದುದರಿಂದ ನನಗೆ ತ್ಯಾಜ್ಯವಸ್ತುವೂ ಗ್ರಾಹ್ಯವಸ್ತುವೂ ಇಲ್ಲವು. ಬಂಧನವೂ ಮುಕ್ತಿಯೂ ನನಗಿಲ್ಲ. ॥೩೨॥

ನನಗೆ ಹಿರಿಮೆಕಿರಿಮೆಗಳಿಲ್ಲ, ಹೊಗಳಿಕೆತೆಗಳಿಕೆಗಳಿಲ್ಲ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಹೊಲೆಯ-ಮೊದಲಾದ ಜಾತಿಭೇದಗಳೂ ನನಗಿಲ್ಲ. ॥೩೩॥

ನಾನು ಪಡೆಯಬೇಕಾದುದೆಂಬುದಿಲ್ಲ, ಅಪಚಯಕ್ಷಯಗಳು ನನಗಿಲ್ಲ, ಭೋಗವು ನನಗಿಲ್ಲ, ಶಕ್ತಿಯು ನನಗಿಲ್ಲ, ಭೇದವು ನನ್ನಲ್ಲಿಲ್ಲ. ॥೩೪॥

ನಾನು ಅದ್ವಿತೀಯಬ್ರಹ್ಮಸ್ವರೂಪನಾದುದರಿಂದ ಜಗತ್ತಿನಲ್ಲಿ ಬ್ರಹ್ಮನ ಹೊರತಾಗಿ ಯಾವ ವಸ್ತುವೂ ಇಲ್ಲದುದರಿಂದ ನಾನೊಬ್ಬನೇ ಸತ್ಯನು. ಮಿಕ್ಕೆಲ್ಲವು ಅಸತ್ಯ, ನನಗೆ ಅಸತ್ಯವಾದ ಶರೀರವೇ ಇಲ್ಲ. ॥೩೫॥

ನ ಮೇ ಶೀತಂ ನ ಮೇ ಚೋಷ್ಣಂ ನ ಮೇ ಕಾಲಂ ನ ಮೇ ಕ್ಷಣಂ ।
ನ ಮೇ ಮಂತ್ರಂ ನ ಮೇ ಶಾಸ್ತ್ರಂ ನ ಮೇ ವೇದಂ ನ ಮೇ ಗುರುಃ ॥೩೬॥

ಅಹಮೇವೈಕರೂಪತ್ವಾತ್ಸತ್ಯಂ ಸತ್ಯಂ ನ ಮೇ ಕ್ವಚಿತ್ ।
ಅಹಮಿತ್ಯಪಿ ನಾಸ್ತ್ಯೇವ ಬ್ರಹ್ಮ ಇತ್ಯಪಿ ನಾಮ ನ ॥೩೭॥

ಯದ್ಯದ್ಯದ್ಯತ್ಪ್ರಪಂಚೋಽಸ್ತಿ ಯದ್ಯದ್ಯದ್ಗುರೋರ್ವಚಃ ।
ತತ್ಸರ್ವಂ ಬ್ರಹ್ಮ ಏವಾಹಂ ತತ್ಸರ್ವಂ ಚಿನ್ಮಯಂ ಮತಂ ॥೩೮॥

ಚಿನ್ಮಯಂ ಚಿನ್ಮಯಂ ಬ್ರಹ್ಮ ಸನ್ಮಯಂ ಸನ್ಮಯಂ ಸದಾ ।
ಸ್ವಯಮೇವ ಸ್ವಯಂ ಬ್ರಹ್ಮ ಸ್ವಯಮೇವ ಸ್ವಯಂ ಪರಂ ॥೩೯॥

ಸ್ವಯಮೇವ ಸ್ವಯಂ ಮೋಕ್ಷಂ ಸ್ವಯಮೇವ ನಿರಂತರಂ ।
ಸ್ವಯಮೇವ ಹಿ ವಿಜ್ಞಾನಂ ಸ್ವಯಮೇವ ಹಿ ನಾಸ್ತ್ಯಕಂ ॥೪೦॥

---

ನನಗೆ ಶೀತ, ಉಷ್ಣ, ಸುಖದುಃಖ,–ಮೊದಲಾದ ದ್ವಂದ್ವಗಳು ಇಲ್ಲ, ಕಾಲಕ್ಷಣಗಳು ನನಗಿಲ್ಲ, ಮಂತ್ರವು ಶಾಸ್ತ್ರವು ನನಗಿಲ್ಲ, ವೇದವು ನನಗಿಲ್ಲ, ಗುರುವು ನನಗಿಲ್ಲ. ॥೩೬॥

ನಾನು ಓರ್ವನೇ ಸತ್ಯವಾದ ವಸ್ತುವು, ನನ್ನ ಹೊರತಾಗಿ ನಾನು ಎಂಬ ಹೆಸರೂ ಸತ್ಯವಲ್ಲ, ಬ್ರಹ್ಮ ಎಂಬ ಹೆಸರೂ ಸತ್ಯವಲ್ಲ. ॥೩೭॥

ಕಣ್ಣಿಗೆ ಕಾಣಿಸುವ ಪ್ರಪಂಚವೆಲ್ಲವೂ, ಗುರುಗಳ ತತ್ವೋಪದೇಶಗಳೆಲ್ಲವೂ ಸಹ ಬ್ರಹ್ಮವಸ್ತುವೇ, ಆ ಬ್ರಹ್ಮವಸ್ತುವೇ ನಾನು. ॥೩೮॥

ಜ್ಞಾನಸಾಕಾರವಾಗಿ ತೋರುವುದೆಲ್ಲವೂ ಬ್ರಹ್ಮವಸ್ತುವೇ, ಸತ್ಯರೂಪವಾಗಿ ತೋರುವುದೆಲ್ಲವೂ ಬ್ರಹ್ಮವಸ್ತುವೇ, ಒಟ್ಟಿನಲ್ಲಿ ಬ್ರಹ್ಮವಸ್ತುವೊಂದೇ ಸತ್ಯವು, ತಾನೇ ಜೀವ, ತಾನೇ ಬ್ರಹ್ಮ, ತಾನೇ ಪರಮೇಶ್ವರ ರೂಪಗಳಿಂದ ತೋರುವುದು. ॥೩೯॥

ಆ ಬ್ರಹ್ಮನು ತಾನೇ ಮೋಕ್ಷವು, ಮೋಕ್ಷವನ್ನು ಪಡೆಯುವವಸ್ತುವೂ ಅವನೇ, ಬ್ರಹ್ಮಜ್ಞಾನವೂ ಬ್ರಹ್ಮವೇ, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೪೦॥

ಸ್ವಯಮೇವ ಸದಾ ಸಾರಃ ಸ್ವಯಮೇವ ಸ್ವಯಂ ಪರಃ ।
ಸ್ವಯಮೇವ ಹಿ ಶೂನ್ಯಾತ್ಮಾ ಸ್ವಯಮೇವ ಮನೋಹರಃ ॥೪೧॥

ತೂಷ್ಣೀಮೇವಾಸನಂ ಸ್ನಾನಂ ತೂಷ್ಣೀಮೇವಾಸನಂ ಜಪಃ ।
ತೂಷ್ಣೀಮೇವಾಸನಂ ಪೂಜಾ ತೂಷ್ಣೀಮೇವಾಸನಂ ಪರಂ ॥೪೨॥

ವಿಚಾರ್ಯ ಮನಸಾ ನಿತ್ಯಮಹಂ ಬ್ರಹ್ಮೇತಿ ನಿಶ್ಚಿನು ।
ಅಹಂ ಬ್ರಹ್ಮ ನ ಸಂದೇಹ ಏವಂ ತೂಷ್ಣೀಂ ಸ್ಥಿತೋ ಜಯಃ ॥೪೩॥

ಸರ್ವಂ ಬ್ರಹ್ಮೈವ ನಾಸ್ತ್ಯನ್ಯತ್ಸರ್ವಂ ಜ್ಞಾನಮಯಂ ತಪಃ ।
ಸ್ವಯಮೇವ ಹಿ ನಾಸ್ತ್ಯೇವ ಸರ್ವಾತೀತಸ್ವರೂಪವಾನ್ ॥೪೪॥

ವಾಚಾತೀತಸ್ವರೂಪೋಽಹಂ ವಾಚಾ ಜಪ್ಯಮನರ್ಥಕಂ ।
ಮನಸಃ ಪರಮಾರ್ಥೋಽಯಮೇತಚ್ಛೇದಮತಂ ನ ಮೇ ॥೪೫॥

---

ಬ್ರಹ್ಮವಸ್ತುವೇ ಸಾರವಸ್ತುವು, ತಾನೇ ಪರಮಾತ್ಮನು, ಅದೇ ನಿರ್ಗುಣವಾದ ನಿರ್ವಿಕಾರವಾದ ಆತ್ಮವು, ಅದೇ ಎಲ್ಲರಿಗೂ ಅತಿಪ್ರಿಯವಾದ ವಸ್ತುವು.॥೪೧॥

ಬ್ರಹ್ಮವಸ್ತುವಾದ ನನಗೆ ಸ್ನಾನವೂ ಆಸನವೂ ಸುಮ್ಮನೇ. ಜಪವೂ ಸುಮ್ಮನೆ, ಪೂಜೆಯು ಸುಮ್ಮನೇ, ಬ್ರಹ್ಮವಸ್ತುವೇ ಎಲ್ಲವೂ ಆದುದರಿಂದ ಸ್ನಾನಾದಿಗಳು ಸುಮ್ಮನೇ ಅಂದರೆ ವ್ಯರ್ಥವು. ॥೪೨॥

ಆದುದರಿಂದ ಆತ್ಮತತ್ವವನ್ನು ವಿಚಾರಮಾಡಿ ನಾನೇ ಬ್ರಹ್ಮನೆಂದು ಅನುಸಂಧಾನಮಾಡಬೇಕು. ಹಾಗೆ ಧ್ಯಾನಿಸುವುದರಿಂದಲೇ ಬ್ರಹ್ಮಾನುಭವವು ಉಂಟಾಗಿ ಮುಕ್ತಿಯು ಕರಗತವಾಗುವುದು, ಅಂದರೆ ನೀನೇ ಬ್ರಹ್ಮನಾಗುವೆ. ॥೪೩॥

ಎಲ್ಲವೂ ಬ್ರಹ್ಮವಸ್ತುವು, ಅದರ ಹೊರತಾಗಿ ಯಾವುದೂ ಇಲ್ಲ. ಎಂದು ತಿಳಿದು ಅನುಸಂಧಾನಮಾಡುವುದೇ ತಪವು. "ಗುಣವಿಕಾರಗಳಿಲ್ಲದ ಪರಬ್ರಹ್ಮವಸ್ತುವೇ ನಾನು" — ಎಂದು ತಿಳಿದು ಅನುಸಂಧಾನಮಾಡುವುದೇ ನಿಜವಾದ ತಪಸ್ಸು. ॥೪೪॥

ನನ್ನ ಸ್ವರೂಪವೂ ವಾಕ್ಕಿಗೆ ಸಿಲುಕದಂತಹುದು, ಆದುದರಿಂದ ನನ್ನನ್ನು ಜಪಿಸುವುದೂ ಸಾಧ್ಯವಿಲ್ಲ, ಮನಸ್ಸಿಗೂ ಅಗೋಚರನು ನಾನು, ಆದುದರಿಂದ ಮನಸ್ಸಿನಿಂದ ನನ್ನನ್ನು ಧ್ಯಾನಿಸುವುದೂ ಅಸಾಧ್ಯವು. ॥೪೫॥

ಕುಣಪಂ ಸರ್ವಭೂತಾದಿ ಕುಣಪಂ ಸರ್ವಸಂಗ್ರಹಃ ।
ಅಸತ್ಯಂ ಸರ್ವದಾ ಲೋಕಂ ಅಸತ್ಯಂ ಸಕಲಂ ಜಗತ್ ॥೪೬॥

ಅಸತ್ಯಮನ್ಯದಸ್ತಿತ್ವಮಸತ್ಯಂ ನಾಸ್ತಿಭಾಷಣಂ ।
ಅಸತ್ಯಾಕಾರಮಸ್ತಿತ್ವಂ ಬ್ರಹ್ಮಮಾತ್ರಂ ಸದಾ ಸ್ವಯಂ ॥೪೭॥

ಅಸತ್ಯಂ ವೇದವೇದಾಂಗಮಸತ್ಯಂ ಶಾಸ್ತ್ರನಿಶ್ಚಯಃ ।
ಅಸತ್ಯಂ ಶ್ರವಣಂ ಹ್ಯೇತದಸತ್ಯಂ ಮನನಂ ಚ ತತ್ ॥೪೮॥

ಅಸತ್ಯಂ ಚ ನಿದಿಧ್ಯಾಸಃ ಸಜಾತೀಯಮಸತ್ಯಕಂ ।
ವಿಜಾತೀಯಮಸತ್ಪ್ರೋಕ್ತಂ ಸತ್ಯಂ ಸತ್ಯಂ ನ ಸಂಶಯಃ ॥೪೯॥

ಸರ್ವಂ ಬ್ರಹ್ಮ ಸದಾ ಬ್ರಹ್ಮ ಏಕಂ ಬ್ರಹ್ಮ ಚಿದವ್ಯಯಃ

ಚೇತೋವಿಲಾಸಜನಿತಂ ಕಿಲ ವಿಶ್ವಮೇತತ್
ವಿಶ್ವಾಧಿಕಸ್ಯ ಕೃಪಯಾ ಪರಿಪೂರ್ಣಭಾಕ್ ಸ್ಯಾತ್ ।

---

ಎಲ್ಲ ಪ್ರಾಣಿಗಳೂ, ಎಲ್ಲ ಸಂಗ್ರಹವೂ ಸಹ ಅಸತ್ಯವು, ಎಲ್ಲಲೋಕವೂ ಕ್ಷಣಿಕ, ಜಗತ್ತೇ ಅಸತ್ಯ, ಆತ್ಮನೊಬ್ಬನೇ ಸತ್ಯ. ॥೪೬॥

ಬ್ರಹ್ಮನ ಹೊರತಾಗಿ ಜೀವಾತ್ಮನಿರುವನೆನ್ನುವುದು ಅಸತ್ಯ, ಎಲ್ಲವೂ ಶೂನ್ಯವೆನ್ನುವ ನಾಸ್ತಿಕವಾದವು ಅಸತ್ಯ, ಬ್ರಹ್ಮನಿಗೆ ಆಕಾರವಿದೆಯೆನ್ನುವುದೂ ಅಸತ್ಯ, ಬ್ರಹ್ಮವಸ್ತುವೊಂದೇ ಸತ್ಯ, ಅದು ನಿರಾಕಾರವು, ನಿರ್ವಿಕಾರವು, ನಿರ್ಗುಣವು. ॥೪೭॥

ವೇದವೇದಾಂಗಗಳು ಅಸತ್ಯ, ಶಾಸ್ತ್ರಗಳು ಅಸತ್ಯ, ಶಾಸ್ತ್ರಪುರಾಣಶ್ರವಣವು ಅಸತ್ಯ. ಮನವು ಅಸತ್ಯ, ನಿದಿಧ್ಯಾಸನವು ಅಸತ್ಯ, ಸಮಾನತೆಯು ಅಸತ್ಯ, ಅಸಮಾನತೆಯು ಅಸತ್ಯ, ಭೇದವು ಅಸತ್ಯ, ಬ್ರಹ್ಮನೊಬ್ಬನೇ ಸತ್ಯ. ॥೪೮-೪೯॥

ಎಲ್ಲವೂ ಬ್ರಹ್ಮ, ಯಾವಾಗಲೂ ಇರುವುದು ಬ್ರಹ್ಮವಸ್ತುವೇ. ಅದು ಅದ್ವಿತೀಯವು, ವಿನಾಶವಿಲ್ಲದುದು, ಜ್ಞಾನಪ್ರಕಾಶಸ್ವರೂಪವು, ಆ ಬ್ರಹ್ಮವಸ್ತುವೇ ನಾನು. ॥೪೯॥

ಈ ಜಗತ್ತೆಲ್ಲವು ಮಾನವನ ಮನಸ್ಸಿನ ಭ್ರಮಾತ್ಮಕಕಲ್ಪನೆಯು. ವಸ್ತುತಃ ಇಲ್ಲ. ಸರ್ವೋತ್ತಮನಾದ ಪರಮೇಶ್ವರನ ಕೃಪೆಯಿಂದಲೂ ವೇದಾಂತಗಳಲ್ಲಿ

ನಾಸ್ತ್ಯನ್ಯತಃ ಶ್ರುತಿಶಿರೋತ್ಥಿತವಾಕ್ಯಬೋಧ
ಶಾಸ್ತ್ರಾನುಸಾರಿಕರಣೈರ್ಭವತೇ ವಿಮುಕ್ತ್ಯೈ ॥೫೦॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ
ಏಕೋನವಿಂಶೋಽಧ್ಯಾಯಃ

---

ಹೇಳುವ ಆತ್ಮತತ್ವಾನುಸಂಧಾನದಿಂದಲೂ ಮಾನವನು ಮುಕ್ತಿಯನ್ನೈದುವನು. ॥೫೦॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ವಿಂಶೋಽಧ್ಯಾಯಃ

ಶೃಣು ಕೇವಲಮತ್ಯಂತಂ ರಹಸ್ಯಂ ಪರಮಾದ್ಭುತಂ ।
ಇತಿ ಗುಹ್ಯತರಂ ಸದ್ಯೋ ಮೋಕ್ಷಪ್ರದಮಿದಂ ಸದಾ ॥೧॥

ಸುಲಭಂ ಬ್ರಹ್ಮವಿಜ್ಞಾನಂ ಸುಲಭಂ ಶುಭಮುತ್ತಮಂ ।
ಸುಲಭಂ ಬ್ರಹ್ಮನಿಷ್ಠಾನಾಂ ಸುಲಭಂ ಸರ್ವಬೋಧಕಂ ॥೨॥

ಸುಲಭಂ ಕೃತಕೃತ್ಯಾನಾಂ ಸುಲಭಂ ಸ್ವಯಮಾತ್ಮನಃ ।
ಸುಲಭಂ ಕರಣಾಭಾವಃ ಸುಲಭಂ ಬ್ರಹ್ಮಣಿ ಸ್ಥಿತಿಃ ॥೩॥

---

## ಇಪ್ಪತ್ತನೆಯ ಅಧ್ಯಾಯ

ಎಲೈ ನಿದಾಘಮುನಿಯೇ, ಕೇಳು. ಅತಿರಹಸ್ಯವಾದ, ಅತ್ಯಾಶ್ಚರ್ಯಕರವಾದ ಸದ್ಯಃ ಮುಕ್ತಿಯನ್ನುಂಟುಮಾಡುವಂತಹ ವಿಷಯವನ್ನು ಹೇಳುವೆನು, ಕೇಳು. ॥೧॥

ಬ್ರಹ್ಮನಲ್ಲಿ ಅನನ್ಯವಾದ ನಿಷ್ಠೆಯುಳ್ಳವರಿಗೆ ಅಂದರೆ "ನಾನೇ ಬ್ರಹ್ಮ"ನೆಂದು ದೃಢವಾಗಿ ಅನುಸಂಧಾನಮಾಡುವವರಿಗೆ ಮುಕ್ತಿಪ್ರದವಾದಂತಹ ಬ್ರಹ್ಮಜ್ಞಾನವು ಅತಿಸುಲಭವಾಗಿ ಉಂಟಾಗುವುದು. ॥೨॥

ಅಂತಹ ಬ್ರಹ್ಮಜ್ಞಾನವುಳ್ಳವರೇ ಕೃತಕೃತ್ಯರು, ಅವರಿಗೆ ಬ್ರಹ್ಮನಲ್ಲಿ ಅನನ್ಯವಾದ ನಿಷ್ಠೆಯೂ ಸ್ಥಿರವಾದ ಬ್ರಹ್ಮಭಾವವೂ ಲಭಿಸುವುದು. ॥೩॥

ಸುಲಭಂ ಚಿತ್ತಹೀನಾನಾಂ ಸ್ವಯಂ ತಚ್ಚ ಸ್ವಯಂ ಸುಖಂ ।
ಸ್ವಯಂ ಸಂಸಾರಹೀನಾನಾಂ ಚಿತ್ತಂ ಸಂಸಾರಮುಚ್ಯತೇ ॥೪॥

ಸ್ರಷ್ಟೈವೇದಂ ನ ಸಂಸಾರೋ ಬ್ರಹ್ಮೈವೇದಂ ಮನೋ ನ ಚ ।
ಬ್ರಹ್ಮೈವೇದಂ ಭಯಂ ನಾಸ್ತಿ ಬ್ರಹ್ಮೈವೇದಂ ನ ಕಿಂಚನ ॥೫॥

ಬ್ರಹ್ಮೈವೇದಮಸತ್ಸರ್ವಂ ಬ್ರಹ್ಮೈವೇದಂ ಪರಾಯಣಂ ।
ಬ್ರಹ್ಮೈವೇದಂ ಶರೀರಾಣಾಂ ಬ್ರಹ್ಮೈವೇದಂ ತೃಣಂ ನ ಚ ॥೬॥

ಬ್ರಹ್ಮೈವಾಸ್ಮಿ ನ ಚಾನ್ಯೋಽಸ್ಮಿ ಬ್ರಹ್ಮೈವೇದಂ ಜಗನ್ನ ಚ ।
ಬ್ರಹ್ಮೈವೇದಂ ವಿಯನ್ನಾಸ್ತಿ ಬ್ರಹ್ಮೈವೇದಂ ಕ್ರಿಯಾ ನ ಚ ॥೭॥

ಬ್ರಹ್ಮೈವೇದಂ ಸುಹಾತ್ಮಾ ನ ಬ್ರಹ್ಮೈವೇದಂ ಸದಾ ಪ್ರಿಯಂ ।
ಬ್ರಹ್ಮೈವೇದಂ ಜಗನ್ನಾಸ್ತಿ ಬ್ರಹ್ಮೈವಾಹಂ ಭಯಂ ನ ಹಿ ॥೮॥

---

ಮನವೇ ಸಂಸಾರವು, ಅಂತಹ ಸಂಸಾರವನ್ನು ಬಿಟ್ಟರೆ ಆತ್ಮಜ್ಞಾನವು ಸುಲಭವಾಗಿ ಲಭಿಸುವುದು, ಆದರಿಂದ ನಿತ್ಯಸುಖವು ಪ್ರಕಾಶಿಸುವುದು. ॥೪॥

ಈ ಸಂಸಾರವು ವಸ್ತುತಃ ಇಲ್ಲ, ಅದನ್ನು ಸೃಷ್ಟಿಸಿದ ಪರಬ್ರಹ್ಮನೋರ್ವನೇ ಸತ್ಯನು. ಆವನ ಹೊರತಾಗಿ ಮನವೂ ಇಲ್ಲ, ಹೀಗೆ ಎರಡನೆಯ ವಸ್ತುವೇ ಇಲ್ಲ ದುದರಿಂದ ಯಾವ ಭಯವೂ ಇಲ್ಲ. ॥೫॥

ಇದೆಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವೊಂದೇ ಮಾನವರಿಗೆ ಗತಿಯು, ಆದರ ಹೊರತಾಗಿ ಯಾವ ಶರೀರವೂ ಇಲ್ಲ, ಒಂದು ಹುಲ್ಲುಕಡ್ಡಿಯೂ ಇಲ್ಲ. ॥೬॥

ಬ್ರಹ್ಮನೇ ನಾನು, ಬೇರೆಯಲ್ಲ, ಈ ಜಗತ್ತು ಬ್ರಹ್ಮನ ಹೊರತಾಗಿ ಇಲ್ಲ, ಆಕಾಶವು ಇಲ್ಲ, ವಾಸ್ತವಿಕವಾಗಿ ಕಾರ್ಯಗಳೂ ಕ್ರಿಯೆಯೂ ಇಲ್ಲ. ॥೭॥

ಆತ್ಮವಸ್ತುವು ಎಲ್ಲರಿಗೂ ಪ್ರಿಯವಾಗಿದೆ, ನಾನು - ಎಂಬುವುದೇ ಆತ್ಮನು, ಆತ್ಮನೂ ಬ್ರಹ್ಮನೇ, ಆ ಬ್ರಹ್ಮನ ಹೊರತಾಗಿ ಜಗತ್ತಿಲ್ಲ, ಆದುದರಿಂದ ಯಾವ ಭಯವೂ ಇಲ್ಲ. ॥೮॥

ಬ್ರಹ್ಮೈವಾಹಂ ಸದಾ ಚಿತ್ತಂ ಬ್ರಹ್ಮೈವೇದಮಿದಂ ನ ಹಿ ।
ಬ್ರಹ್ಮೈವಾಹಂ ತು ಯನ್ಮಿಥ್ಯಾ ಬ್ರಹ್ಮೈವಾಹಮಿಯಂ ಭ್ರಮಾ ॥೯॥

ಬ್ರಹ್ಮೈವ ಸರ್ವಸಿದ್ಧಾಂತೋ ಬ್ರಹ್ಮೈವ ಮನಸಾಸ್ಪದಂ ।
ಬ್ರಹ್ಮೈವ ಸರ್ವಭವನಂ ಬ್ರಹ್ಮೈವ ಮುನಿಮಂಡಲಂ ॥೧೦॥

ಬ್ರಹ್ಮೈವ ಸರ್ವಂ ನಾಸ್ತ್ಯನ್ಯತ್ ಬ್ರಹ್ಮೈವ ಗುರುಪೂಜನಂ ।
ಬ್ರಹ್ಮೈವ ನಾನ್ಯತ್ಕಿಂಚಿತ್ತು ಬ್ರಹ್ಮೈವ ಸಕಲಂ ಸದಾ ॥೧೧॥

ಬ್ರಹ್ಮೈವ ತ್ರಿಗುಣಾಕಾರಂ ಬ್ರಹ್ಮೈವ ಹರಿರೂಪಕಂ ।
ಬ್ರಹ್ಮಣೋನ್ಯತ್ಪದಂ ನಾಸ್ತಿ ಬ್ರಹ್ಮಣೋನ್ಯತ್ಕ್ಷಣಂ ನ ಮೇ ॥೧೨॥

ಬ್ರಹ್ಮೈವಾಹಂ ನಾನ್ಯವಾರ್ತಾ ಬ್ರಹ್ಮೈವಾಹಂ ನ ಚ ಶ್ರುತಂ ।
ಬ್ರಹ್ಮೈವಾಹಂ ನ ಮೇ ನಾಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೧೩॥

---

ನಾನೇ ಬ್ರಹ್ಮನು, ಮನವೂ ಬ್ರಹ್ಮನೇ, ಅವನ ಹೊರತಾಗಿ ಇದೆಲ್ಲವೂ ಇಲ್ಲ, ಮಿಥ್ಯೆಯಾಗಿ ಕಾಣುವುದೆಲ್ಲವೂ ಬ್ರಹ್ಮನೇ, ಭ್ರಮೆಯೂ ಬ್ರಹ್ಮನೇ. ॥೯॥

ಎಲ್ಲ ಸಿದ್ಧಾಂತಗಳೂ ಬ್ರಹ್ಮನೇ, ಮನೋವಿಷಯವೂ ಬ್ರಹ್ಮನೇ, ಎಲ್ಲ ಆಗು ಹೋಗುಗಳೂ ಬ್ರಹ್ಮನೇ, ಮುನಿಗಳೂ ಬ್ರಹ್ಮವಸ್ತುವೇ. ॥೧೦॥

ಬ್ರಹ್ಮವಸ್ತುವಿನ ಹೊರತಾಗಿ ಯಾವುದೂ ಇಲ್ಲ, ಗುರುಸೇವೆಯೂ ಬ್ರಹ್ಮವಸ್ತುವೇ, ಯತ್ಕಿಂಚಿದ್ವಸ್ತುವೂ ಬ್ರಹ್ಮವಸ್ತುವೇ, ಎಲ್ಲವೂ ಬ್ರಹ್ಮವೇ. ॥೧೧॥

ಸತ್ವರಜಸ್ತಮೋಗುಣಗಳೂ ಬ್ರಹ್ಮವಸ್ತುವೇ, ಹರಿಯೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವಿನ ಹೊರತಾಗಿ ಯಾವ ಸ್ಥಾನವೂ ಇಲ್ಲ, ಯಾವ ಕಾಲವೂ ಇಲ್ಲ. ॥೧೨॥

ಬ್ರಹ್ಮನೇ ನಾನು. ಬ್ರಹ್ಮನ ಹೊರತಾಗಿ ಯಾವ ವಾರ್ತೆಯೂ ಇಲ್ಲ, ಯಾವ ಶ್ರವಣವೂ ಇಲ್ಲ, ಯಾವ ಭೇದವೂ ಇಲ್ಲ, ಎಲ್ಲವೂ ಅದ್ವಿತೀಯಬ್ರಹ್ಮಸ್ವರೂಪವು. ॥೧೩॥

ಬ್ರಹ್ಮೈವಾಹಂ ನ ಮೇ ಭೋಗೋ ಬ್ರಹ್ಮೈವಾಹಂ ನ ಮೇ ಪೃಥಕ್ ।
ಬ್ರಹ್ಮೈವಾಹಂ ಸತಂ ನಾಸ್ತಿ ಬ್ರಹ್ಮೈವ ಬ್ರಹ್ಮರೂಪಕಃ ॥೧೪॥

ಬ್ರಹ್ಮೈವ ಸರ್ವದಾ ಭಾತಿ ಬ್ರಹ್ಮೈವ ಸುಖಮುತ್ತಮಂ ।
ಬ್ರಹ್ಮೈವ ನಾನಾಕಾರತ್ವಾತ್ ಬ್ರಹ್ಮೈವಾಹಂ ಪ್ರಿಯಂ ಮಹತ್ ॥೧೫॥

ಬ್ರಹ್ಮೈವ ಬ್ರಹ್ಮಣಃ ಪೂಜ್ಯಂ ಬ್ರಹ್ಮೈವ ಬ್ರಹ್ಮಣೋ ಗುರುಃ ।
ಬ್ರಹ್ಮೈವ ಬ್ರಹ್ಮಮಾತಾ ತು ಬ್ರಹ್ಮೈವಾಹಂ ಪಿತಾ ಸುತಃ ॥೧೬॥

ಬ್ರಹ್ಮೈವ ಬ್ರಹ್ಮದೇವಂ ಚ ಬ್ರಹ್ಮೈವ ಬ್ರಹ್ಮ ತಜ್ಜಯಃ ।
ಬ್ರಹ್ಮೈವ ಧ್ಯಾನರೂಪಾತ್ಮಾ ಬ್ರಹ್ಮೈವ ಬ್ರಹ್ಮಣೋ ಗುಣಃ ॥೧೭॥

ಆತ್ಮೈವ ಸರ್ವಂ ನಿತ್ಯಾತ್ಮಾ ಆತ್ಮನೋಽನ್ಯನ್ನ ಕಿಂಚನ ।
ಆತ್ಮೈವ ಸತತಂ ಹ್ಯಾತ್ಮಾ ಆತ್ಮೈವ ಗುರುರಾತ್ಮನಃ ॥೧೮॥

---

ಬ್ರಹ್ಮನೇ ನಾನು, ನನಗೆ ಬೇರೆಯಾಗಿ ಯಾವ ಭೋಗವೂ ಇಲ್ಲ, ಭೇದವೂ ಇಲ್ಲ, ಬ್ರಹ್ಮನ ಹೊರತಾಗಿ ಸತ್ಯವಸ್ತುವು ಯಾವುದೂ ಇಲ್ಲ, ಬ್ರಹ್ಮರೂಪವೇ ನನ್ನ ರೂಪವು. ॥೧೪॥

ಬ್ರಹ್ಮವಸ್ತುವು ಯಾವಾಗಲೂ ಪ್ರಕಾಶಿಸುವುದು, ಬ್ರಹ್ಮವಸ್ತುವೇ ಉತ್ತಮ ಸುಖವು, ಬ್ರಹ್ಮವಸ್ತು ನಾನಾರೂಪಗಳಿಂದ ಪ್ರಕಾಶಿಸುವುದು, ಅದೇ ಎಲ್ಲರಿಗೂ ಪ್ರಿಯವಾದುದು. ॥೧೫॥

ಬ್ರಹ್ಮನಿಗೆ ಬ್ರಹ್ಮನೇ ದೇವರು. ಬ್ರಹ್ಮನೇ ಗುರುವು, ಬ್ರಹ್ಮನೇ ತಾಯಿಯು ಬ್ರಹ್ಮನೇ ತಂದೆಯು, ಬ್ರಹ್ಮನೇ ಪುತ್ರನು, ನಾನೇ ಬ್ರಹ್ಮನು. ॥೧೬॥

ಬ್ರಹ್ಮನೇ ಬ್ರಹ್ಮನಿಗೆ ಪೂಜ್ಯವಸ್ತುವು, ಬ್ರಹ್ಮನೇ ಜಯವು, ಬ್ರಹ್ಮನೇ ಧ್ಯಾನವು, ಬ್ರಹ್ಮನೇ ಬ್ರಹ್ಮನ ಗುಣವು. ॥೧೭॥

ಎಲ್ಲವೂ ಆತ್ಮನೇ, ಆತ್ಮನ ಹೊರತಾಗಿ ಏನೂ ಇಲ್ಲ. ಆತ್ಮವೇ ಎಲ್ಲೆಲ್ಲಿಯೂ ಪ್ರಕಾಶಿಸುತ್ತಿರುವುದು. ಆತ್ಮನೇ ಆತ್ಮನಿಗೆ ಗುರುವು. ॥೧೮॥

ಆತ್ಮಜ್ಯೋತಿರಹಂ ಭೂತಮಾತ್ಮೈವಾಸ್ತಿ ಸದಾ ಸ್ವಯಂ ।
ಸ್ವಯಂ ತತ್ತ್ವಮಸಿ ಬ್ರಹ್ಮ ಸ್ವಯಂ ಭಾಸಿ ಪ್ರಕಾಶಕಃ ॥೧೯॥

ಸ್ವಯಂ ಜೀವತ್ವಸಂಶಾಂತಃ ಸ್ವಯಮೀಶ್ವರರೂಪವಾನ್ ।
ಸ್ವಯಂ ಬ್ರಹ್ಮ ಪರಂ ಬ್ರಹ್ಮ ಸ್ವಯಂ ಕೇವಲಮವ್ಯಯಂ ॥೨೦॥

ಸ್ವಯಂ ನಾಶಂ ಚ ಸಿದ್ಧಾಂತಂ ಸ್ವಯಮಾತ್ಮಪ್ರಕಾಶಕಃ ।
ಸ್ವಯಂ ಪ್ರಕಾಶರೂಪಾತ್ಮಾ ಸ್ವಯಮತ್ಯಂತನಿರ್ಮಲಃ ॥೨೧॥

ಸ್ವಯಮೇವ ಹಿ ನಿತ್ಯಾತ್ಮಾ ಸ್ವಯಂ ಶುದ್ಧಃ ಪ್ರಿಯೋಽಪ್ರಿಯಃ ।
ಸ್ವಯಮೇವ ಸ್ವಯಂ ಛಂದಃ ಸ್ವಯಂ ದೇಹಾದಿವರ್ಜಿತಃ ॥೨೨॥

ಸ್ವಯಂ ದೋಷವಿಹೀನಾತ್ಮಾ ಸ್ವಯಮಾಕಾಶವತ್ ಸ್ಥಿತಃ ।
ಅಯಂ ಚೇದಂ ಚ ನಾಸ್ತ್ಯೇವ ಅಯಂಭೇದವಿವರ್ಜಿತಃ ॥೨೩॥

ಬ್ರಹ್ಮೈವ ಚಿತ್ತವದ್ಭಾತಿ ಬ್ರಹ್ಮೈವ ಶಿವವತ್ಸದಾ ।
ಬ್ರಹ್ಮೈವ ಬುದ್ಧಿವದ್ಭಾತಿ ಬ್ರಹ್ಮೈವ ಶಿವವತ್ಸದಾ ॥೨೪॥

---

ನಾನೇ ಆತ್ಮಪ್ರಕಾಶವು, ಆತ್ಮನೇ ಸದಾ ಇರುವವನು, ಆತ್ಮನೇ ಪರಮಾತ್ಮನು, ನೀನೇ ಆತ್ಮ, ಆತ್ಮನೇ ಸ್ವಪ್ರಕಾಶವಾದ ಬ್ರಹ್ಮನು. ॥೧೯॥

ಆತ್ಮನೇ ಜೀವನು, ಆತ್ಮನೇ ಈಶ್ವರನು, ಆತ್ಮನೇ ಬ್ರಹ್ಮನು, ಆತ್ಮನೇ ಪರಬ್ರಹ್ಮನು, ಆತ್ಮನು ಅದ್ವಿತೀಯನು, ಅವಿನಾಶಿಯು. ॥೨೦॥

ಆತ್ಮನೇ ನಾಶವು, ಆತ್ಮನೇ ಸಿದ್ಧಾಂತವು, ತಾನೇ ಪ್ರಕಾಶಕನು, ಪ್ರಕಾಶಸ್ವರೂಪನು ತಾನೇ, ಆತ್ಮನು ಅತ್ಯಂತ ನಿರ್ಮಲನು, ಇಂತಹ ಆತ್ಮನು ನಾನು. ॥೨೧॥

ಆತ್ಮನು ನಿತ್ಯನು, ಶುದ್ಧನು, ಎಲ್ಲರಿಗೂ ಪ್ರಿಯನು, ನಾಸ್ತಿಕರಿಗೆ ಅಪ್ರಿಯನು, ಜ್ಞಾನಸ್ವರೂಪನು, ಆತ್ಮನಿಗೆ ದೇಹಾದಿಗಳಿಲ್ಲವು. ॥೨೨॥

ಆತ್ಮನಿಗೆ ಯಾವ ದೋಷಗಳೂ ಇಲ್ಲ, ಗಗನದಂತೆ ಸರ್ವವ್ಯಾಪಿಯಾಗಿ ನಿರ್ಮಲನಾಗಿರುವನು. "ಇವನು, ಇದು"—ಎಂಬ ಭೇದಗಳು ಆತ್ಮನಿಗಿಲ್ಲ. ॥೨೩॥

ಬ್ರಹ್ಮವಸ್ತುವೇ ಮನಸ್ಸಿನಂತೆ (ನಾನು. ನೀನು-ಎಂದು ಜೀವರೂಪದಿಂದ) ಪ್ರಕಾಶಿಸುವುದು. ಬ್ರಹ್ಮನೇ ಶಿವನಂತೆ ಪ್ರಕಾಶಿಸುವನು, ಬುದ್ಧಿಯಂತೆ ಬೆಳಗುವನು. ಯಾವಾಗಲೂ ಮಂಗಳರೂಪವಾಗಿ ತೋರುವನು. ॥೨೪॥

ಬ್ರಹ್ಮೈವ ಕೃಶವದ್ಭಾತಿ ಬ್ರಹ್ಮೈವ ಸ್ಥೂಲವತ್ ಸ್ವಯಂ ।
ಬ್ರಹ್ಮೈವ ಸತತಂ ನಾನ್ಯದ್ಬ್ರಹ್ಮೈವ ಗುರುರಾತ್ಮನಃ ॥೨೫॥

ಆತ್ಮಜ್ಯೋತಿರಹಂ ಭೂತಮಹಂ ನಾಸ್ತಿ ಸದಾಸ್ವಯಂ ।
ಸ್ವಯಮೇವ ಪರಂ ಬ್ರಹ್ಮ ಸ್ವಯಮೇವ ಚಿದವ್ಯಯಃ ॥೨೬॥

ಸ್ವಯಮೇವ ಸ್ವಯಂ ಜ್ಯೋತಿಃ ಸ್ವಯಂ ಸರ್ವತ್ರ ಭಾಸತೇ ।
ಸ್ವಯಂ ಬ್ರಹ್ಮ ಸ್ವಯಂ ದೇಹಃ ಸ್ವಯಂ ಪೂರ್ಣಃ ಪರಂ ಪುಮಾನ್॥೨೭॥

ಸ್ವಯಂ ತತ್ತ್ವಮಸಿ ಬ್ರಹ್ಮ ಸ್ವಯಂ ಭಾಸಪ್ರಕಾಶಕಃ ।
ಸ್ವಯಂ ಜೀವತ್ವಸಂಶಾಂತಃ ಸ್ವಯಮೀಶ್ವರರೂಪವಾನ್ ॥೨೮॥

ಸ್ವಯಂಪ್ರಕಾಶರೂಪಾತ್ಮಾ ಸ್ವಯಮತ್ಯಂತನಿರ್ಮಲಃ ।
ಸ್ವಯಮೇವ ಹಿ ನಿತ್ಯಾತ್ಮಾ ಸ್ವಯಂ ಶುದ್ಧಃ ಪ್ರಿಯಾಪ್ರಿಯಃ ॥೨೯॥

---

ಬ್ರಹ್ಮವಸ್ತುವೇ ಕೃಶನಂತೆ ತೋರುವುದು, ಸ್ಥೂಲವಾಗಿ ಪ್ರಕಾಶಿಸುವುದು. ಬ್ರಹ್ಮವಸ್ತುವೇ ಯಾವಾಗಲೂ ಇರುವುದು, ಇನ್ನಾವುದೂ ಇಲ್ಲ, ಬ್ರಹ್ಮವಸ್ತುವೇ ಬ್ರಹ್ಮನಿಗೆ ಗುರುವು. ॥೨೫॥

ನಾನು ಆತ್ಮಜ್ಯೋತಿ, ಆದರೆ ನಾನು-ಎಂಬಂಶವು ನನ್ನಲ್ಲಿಲ್ಲ, ನಾನೇ ಪರ ಬ್ರಹ್ಮನು, ಜ್ಞಾನಮೂರ್ತಿಯು ನಾನು, ಅವಿನಾಶಿಯು ನಾನು. ॥೨೬॥

ಆತ್ಮನು ಸ್ವಯಂಜ್ಯೋತಿಯು, ಅಂದರೆ ಎಲ್ಲೆಡೆಯಲ್ಲೂ ತಾನೇ ತನ್ನಿಂದ ಪ್ರಕಾಶಿಸುವನು. ಆತ್ಮನೇ ಬ್ರಹ್ಮ, ಆತ್ಮನೇ ದೇಹ, ಪೂರ್ಣರೂಪನು, ಪರಮಪುರುಷನೇ ಆತ್ಮ. ॥೨೭॥

ತಾನೇ ಜೀವಸ್ವರೂಪನೂ ಬ್ರಹ್ಮಸ್ವರೂಪನೂ ಆಗಿರುವನು, ತಾನೇ ಸೂರ್ಯ-ಮೊದಲಾದ ತೇಜಸ್ಸುಗಳನ್ನು ಬೆಳಗಿಸುವನು, ಆತ್ಮನೇ ಈಶ್ವರನು.॥೨೮॥

ಆತ್ಮನು ಸ್ವಯಂಪ್ರಕಾಶನು, ಅತ್ಯಂತ ನಿರ್ಮಲನು, ನಿತ್ಯಸ್ವರೂಪನು, ಶುದ್ಧನು, ಎಲ್ಲರಿಗೂ ಪ್ರಿಯನು, ನಾಸ್ತಿಕರಿಗೆ ಅಪ್ರಿಯನು. ॥೨೯॥

ಸ್ವಯಂ ಬ್ರಹ್ಮ ಪರಂ ಬ್ರಹ್ಮ ಸ್ವಯಂ ಕೇವಲಮವ್ಯಯಃ ।
ಸ್ವಯಂ ನಾಶಶ್ಚ ಸಿದ್ಧಾಂತಃ ಸ್ವಯಮಾತ್ಮಪ್ರಕಾಶಕಃ ॥೩೦॥

ಸ್ವಯಮೇವ ಸ್ವಯಂ ಸ್ವಸ್ಥಃ ಸ್ವಯಂ ದೇಹಾದಿವರ್ಜಿತಃ ।
ಸ್ವಯಂ ದೋಷವಿಹೀನಾತ್ಮಾ ಸ್ವಯಮಾಕಾಶವತ್ ಸ್ಥಿತಃ ॥೩೧॥

ಅಖಂಡಃ ಪರಿಪೂರ್ಣೋಽಹಮಖಂಡರಸಪೂರಣಃ ।
ಅಖಂಡಾನಂದ ಏವಾಹಮಪರಿಚ್ಛಿನ್ನವಿಗ್ರಹಃ ॥೩೨॥

ಇತಿ ನಿಶ್ಚಿತಪೂರ್ಣಾತ್ಮಾ ಬ್ರಹ್ಮೈವ ನಪೃಥಕ್ ಸ್ವಯಂ ।
ಅಹಮೇವ ಹಿ ನಿತ್ಯಾತ್ಮಾ ಅಹಮೇವ ಹಿ ಶಾಶ್ವತಃ ॥೩೩॥

ಅಹಮೇವ ಹಿ ತದ್ಬ್ರಹ್ಮ ಬ್ರಹ್ಮೈವಾಹಂ ಜಗತ್ಪ್ರಭುಃ ।
ಬ್ರಹ್ಮೈವಾಹಂ ನಿರಾಭಾಸೋ ಬ್ರಹ್ಮೈವಾಹಂ ನಿರಾಮಯಃ ॥೩೪॥

---

ಆತ್ಮನೇ ಬ್ರಹ್ಮನು, ಆತ್ಮನೇ ಪರಬ್ರಹ್ಮನು, ಅದ್ವಿತೀಯನು, ಅವಿನಾಶಿಯು, ಆತ್ಮನು ನಾಶಸ್ವರೂಪನು, ಜಗತ್ತಿನಿಂದ ಶೂನ್ಯನು, ತನ್ನನ್ನು ತಾನೇ ಬೆಳಗುವನು. ॥೩೦॥

ಆತ್ಮನು ತನ್ನಲ್ಲಿಯೇ ತಾನಿರುವನು, ದೇಹಾದಿಗಳು ಆತ್ಮನಿಗಿಲ್ಲವು, ದೋಷಗಳಾವುವೂ ಇಲ್ಲವು, ಆಕಾಶದಂತೆ ಸರ್ವವ್ಯಾಪಿಯೂ ನಿರ್ಮಲನೂ ಆಗಿರುವನು.॥೩೧॥

ಕೊರತೆಯಿಲ್ಲದ ಪರಿಪೂರ್ಣನು ನಾನು, ಪೂರ್ಣರಸಮೂರ್ತಿಯು ನಾನು, ಪೂರ್ಣವಾದ ಆನಂದಮೂರ್ತಿಯು ನಾನು, ಕೊನೆಯಿಲ್ಲದ ಸ್ವರೂಪವುಳ್ಳವನು ನಾನು. ॥೩೨॥

ಇಂತಹ ಬ್ರಹ್ಮಜ್ಞಾನಸ್ವರೂಪನು ನಾನು, ಬ್ರಹ್ಮನೇ ನಾನು ಬೇರೆಯಲ್ಲ, ನಿತ್ಯಸ್ವರೂಪನು ನಾನು, ಯಾವಾಗಲೂ ಇರುವವನು ನಾನು. ॥೩೩॥

ಅಂತಹ ಬ್ರಹ್ಮನು ನಾನು, ಜಗತ್ತಿಗೆ ಪ್ರಭುವು ನಾನು, ಜಡನು ನಾನಲ್ಲ, ಯಾವ ಆತಂಕವೂ ಇಲ್ಲದ ಬ್ರಹ್ಮನು ನಾನು. ॥೩೪॥

ಬ್ರಹ್ಮೈವಾಹಂ ಚಿದಾಕಾಶಃ ಬ್ರಹ್ಮೈವಾಹಂ ನಿರಂತರಃ ।
ಬ್ರಹ್ಮೈವಾಹಂ ನಿರಾನಂದಃ ಬ್ರಹ್ಮೈವಾಹಂ ಸದಾತ್ಮವಾನ್ ॥೩೫॥

ಬ್ರಹ್ಮೈವಾಹಮನಂತಾತ್ಮಾ ಬ್ರಹ್ಮೈವಾಹಂ ಸುಖಂ ಪರಂ ।
ಬ್ರಹ್ಮೈವಾಹಂ ಮಹಾಮೌನೀ ಸರ್ವವೃತ್ತಾಂತವರ್ಜಿತಃ ॥೩೬॥

ಬ್ರಹ್ಮೈವಾಹಮಿದಂ ಮಿಥ್ಯಾ ಬ್ರಹ್ಮೈವಾಹಂ ಜಗನ್ನ ಹಿ ।
ಬ್ರಹ್ಮೈವಾಹಂ ನ ದೇಹೋಽಸ್ತಿ ಬ್ರಹ್ಮೈವಾಹಂ ಮಹಾದ್ವಯಃ ॥೩೭॥

ಬ್ರಹ್ಮೈವ ಚಿತ್ತವದ್ಭಾತಿ ಬ್ರಹ್ಮೈವ ಶಿವವತ್ಸದಾ ।
ಬ್ರಹ್ಮೈವ ಬುದ್ಧಿವದ್ಭಾತಿ ಬ್ರಹ್ಮೈವ ಜಡವತ್ ಸ್ಥಿತಂ ॥೩೮॥

ಬ್ರಹ್ಮೈವೋಂಕಾರವತ್ಸರ್ವಂ ಬ್ರಹ್ಮೈವೋಂಕಾರರೂಪವತ್ ।
ಬ್ರಹ್ಮೈವ ನಾದವದ್ಬ್ರಹ್ಮ ನಾಸ್ತಿ ಭೇದೋ ನ ಚಾದ್ವಯಂ ॥೩೯॥

---

ಜ್ಞಾನಮೂರ್ತಿಯಾದ ಬ್ರಹ್ಮನು ನಾನು, ವ್ಯಾಪಕವಾದ ಬ್ರಹ್ಮನು ನಾನು, ಆನಂದವಿಲ್ಲದ ಆನಂದಮೂರ್ತಿಯು ನಾನು, ಸದಾ ಪ್ರಕಾಶವುಳ್ಳ ಆತ್ಮನು ನಾನು. ॥೩೫॥

ಕೊನೆಯಿಲ್ಲದ ಸ್ವರೂಪವುಳ್ಳ ಬ್ರಹ್ಮವಸ್ತುವೇ ನಾನು, ಪರಮಸುಖಸ್ವರೂಪವಾದ ಬ್ರಹ್ಮವಸ್ತುವು ನಾನು, ಯಾವ ವೃತ್ತಾಂತವೂ ಇಲ್ಲವಾದಕಾರಣವೇ ಮೌನವಾದ ಬ್ರಹ್ಮವಸ್ತುವು ನಾನು. ॥೩೬॥

ನಾನೇ ಬ್ರಹ್ಮನು, ಈ ಜಗತ್ತೆಲ್ಲವೂ ಅಸತ್ಯ, ಈ ದೇಹವು ವಸ್ತುತಃ ನನಗಿಲ್ಲ, ಅದ್ವಿತೀಯಸ್ವರೂಪನಾದ ಬ್ರಹ್ಮನೇ ನಾನು. ॥೩೭॥

ಬ್ರಹ್ಮವಸ್ತುವೇ ಚಿತ್ತದಂತೆ ತೋರುವುದು, ಶಿವನಂತೆ ಪ್ರಕಾಶಿಸುವುದು, ಬುದ್ಧಿಯಂತೆ ಕಾಣುವುದು, ಜಡವಸ್ತುವಿನಂತೆ ನಾನಾಮುಖವಾಗಿ ತೋರುವುದು. ॥೩೮॥

ಎಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವು ಓಂಕಾರಸ್ವರೂಪವು, ಬ್ರಹ್ಮವಸ್ತುವೇ ಓಂಕಾರಸ್ವರಸ್ವರೂಪವು, ಭೇದವೂ ಇಲ್ಲ. ಅಭೇದವೂ ಇಲ್ಲ. ॥೩೯॥

ಸತ್ಯಂ ಸತ್ಯಂ ಪುನಸ್ಸತ್ಯಂ ಬ್ರಹ್ಮಣೋನ್ಯನ್ನ ಕಿಂಚನ।
ಬ್ರಹ್ಮೈವ ಸರ್ವಮಾತ್ಮೈವ ಬ್ರಹ್ಮೈವ ನ ಚ ಕಿಂಚನ ॥೪೦॥

ಸರ್ವಂ ಮಿಥ್ಯಾಯು ವಚಸೇ ದೃಶ್ಯತ್ವಾದ್ಘಟವತ್ಸದಾ।
ಪಂಚಾನನಾಯು ಪತಯೇ ಯತಯೇ ವೀತರಾಗಿಣೇ ॥೪೧॥

ಚಾಮುರಾಯು ಶರಣ್ಯಾಯು ವಸಾಮಾಂಸಪ್ರಿಯಾಯು ಚ।
ಪನ್ನಗಾಭರಣಾಯಾಥ ಸನ್ನಗೋರ್ಧ್ವನಿಕೇತನೇ ॥೪೨॥

ಸತ್ಯಂ ಸತ್ಯಂ ನ ಸಂದೇಹಶ್ಚಿನ್ಮಾತ್ರತ್ವಾದಹಂ ಸದಾ।
ಬ್ರಹ್ಮೈವ ಶುದ್ಧರೂಪತ್ವಾದ್ರುಗ್ರೂಪತ್ವಾತ್ಸ್ವಯಂ ಮಹತ್ ॥೪೩॥

ಅಹಮೇವ ಪರಂ ಬ್ರಹ್ಮ ಅಹಮೇವ ಪರಾತ್ಪರಃ।
ಅಹಮೇವ ಮನೋತೀತ ಅಹಮೇವ ಜಗತ್ಪರಃ ॥೪೪॥

---

ಇದು ಸತ್ಯವು, ಪುನಃ ಹೇಳುವೆನು, ಬ್ರಹ್ಮನ ಹೊರತಾಗಿ ಏನೂ ಇಲ್ಲ. ಇದು ಸತ್ಯ, ಎಲ್ಲವೂ ಬ್ರಹ್ಮವಸ್ತುವೇ, ಆತ್ಮನೇ ಬ್ರಹ್ಮವಸ್ತುವು, ಬ್ರಹ್ಮನೇ ಆತ್ಮನು. ॥೪೦॥

ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ-ಗಳೆಂಬ ಐದು ಮುಖಗಳುಳ್ಳ, ಮಹಾವಿರಕ್ತನಾದ ರಕ್ಷಕನಾದ ನಾಗಭೂಷಣನಾದ ಕೈಲಾಸನಿಲಯನಾದ ಶ್ರೀಶಿವನನ್ನು ಆರಾಧಿಸಿ ಅವನ ರೂಪವನ್ನೇ ಹೊಂದಿ ಸಾರೂಪ್ಯಮುಕ್ತಿಯನ್ನು ಪಡೆದವರಿಗೆ "ಈ ಜಗತ್ತೆಲ್ಲವೂ ವಿನಾಶಿ, ಎದುರಿಗೆ ಕಾಣುತ್ತಿರುವುದರಿಂದ ಅದು ಮಡಕೆಯಂತೆ ತೋರುವುದು. ಯಾವಾವುದು ಕಾಣುವುದೋ ಅವೆಲ್ಲವೂ ವಿನಾಶಿ, ಉದಾಹರಣೆಗೆ ಮಡಕೆಯು ಕಾಣುವುದು ಅದು ವಿನಾಶವನ್ನೈದುವುದು, ಅದರಂತೆ ಈ ಜಗತ್ತೂ ಕಾಣಿಸುತ್ತಿರುವುದರಿಂದ ವಿನಾಶಿ" ಎಂಬ ತತ್ವವು ಗೋಚರವಾಗುವುದು. ॥೪೧-೪೨॥

ಕೇವಲ ಚೈತನ್ಯರೂಪನೂ ತೇಜೋರೂಪನೂ ಆದುದರಿಂದ ನಾನೇ ಬ್ರಹ್ಮವಸ್ತುವು, ಇದರಲ್ಲಿ ಸಂದೇಹವಿಲ್ಲ. ॥೪೩॥

ನಾನೇ ಪರಬ್ರಹ್ಮನು, ನಾನೇ ಸರ್ವೋತ್ತಮನು, ನಾನೇ ಪರಮೇಶ್ವರನು, ನಾನೇ ಮನಸ್ಸಿಗೂ ನಿಲುಕದ ಪರಮಾತ್ಮನು. ॥೪೪॥

ಅಹಮೇವ ಹಿ ನಿತ್ಯಾತ್ಮಾ ಸರ್ವಂ ಮಿಥ್ಯಾ ಸ್ವಭಾವತಃ ।
ಆನಂದೋಽಹಂ ನಿರಾಧಾರೋ ಬ್ರಹ್ಮೈವ ನ ಚ ಕಿಂಚನ ॥೪೫॥

ನಾನ್ಯತ್ಕಿಂಚಿದಹಂ ಬ್ರಹ್ಮ ನಾನ್ಯತ್ಕಿಂಚಿಚ್ಚಿದವ್ಯಯಃ ।
ಆತ್ಮನೋಽನ್ಯತ್ಪರಂ ತುಚ್ಛಂ ಆತ್ಮನೋಽನ್ಯದಿದಂ ನ ಹಿ ॥೪೬॥

ಆತ್ಮನೋಽನ್ಯನ್ನಮೇ ದೇಹಮಾತ್ಮೈವಾಹಂ ನ ಮೇ ಮಲಂ ।
ಆತ್ಮನ್ಯೇವಾತ್ಮನಾ ಚಿತ್ತಮಾತ್ಮೈವಾಹಂ ನ ತತ್ಪೃಥಕ್ ॥೪೭॥

ಆತ್ಮೈವಾಹಮಹಂ ಶೂನ್ಯಮಾತ್ಮೈವಾಹಂ ಸದಾ ನ ಮೇ ।
ಆತ್ಮೈವಾಹಂ ಗುಣೋ ನಾಸ್ತಿ ಆತ್ಮೈವ ನ ಪೃಥಕ್ ಕ್ವಚಿತ್ ॥೪೮॥

ಅತ್ಯಂತಾಭಾವ ಏವ ತ್ವಮತ್ಯಂತಾಭಾವಮೀದೃಶಂ ।
ಅತ್ಯಂತಾಭಾವ ಏವೇದಮತ್ಯಂತಾಭಾವಮಣ್ವಪಿ ॥೪೯॥

---

ನಾನೇ ನಿತ್ಯಸ್ವರೂಪನು, ನನ್ನ ಹೊರತಾದುದೆಲ್ಲವೂ ಅನಿತ್ಯ, ಆನಂದ ಸ್ವರೂಪನು ನಾನು, ನನಗೆ ಯಾವ ಆಧಾರವೂ ಇಲ್ಲವು. ॥೪೫॥

ನಾನೇ ಬ್ರಹ್ಮವಸ್ತುವು, ನಾಶವಿಲ್ಲದವನು ನಾನು, ನನ್ನ ಹೊರತಾಗಿ ಇರುವುದೆಲ್ಲವೂ ಅಸತ್ಯವು, ಆತ್ಮನ ಹೊರತಾಗಿ ಯಾವುದೂ ಇಲ್ಲವು. ॥೪೬॥

ಆತ್ಮನಾದ ನನಗೆ ದೇಹವು ಇಲ್ಲವು. ದೇಹವಿಲ್ಲದುದರಿಂದ ಆ ದೇಹಸಂಬಂಧವಾದ ಯಾವ ಕೊಳೆಯೂ ಇಲ್ಲ, ಆತ್ಮನಲ್ಲಿಯೇ ಆತ್ಮನಾಗಿ ನಾನಿರುವೆನು, ನಾನು ಆತ್ಮನ ಹೊರತು ಬೇರೆಯಲ್ಲ. ॥೪೭॥

ಯಾವ ಅನಿತ್ಯವಿಕಾರಗಳೂ ಇಲ್ಲದ ಆತ್ಮನು ನಾನು. ನನ್ನಲ್ಲಿ ಯಾವ ಗುಣಗಳೂ ಇಲ್ಲವು. ಯಾವ ಭೇದವೂ ಇಲ್ಲ. ॥೪೮॥

ನೀನು ಅತ್ಯಂತಾಭಾವನು, ಅಂದರೆ ನಿನ್ನಲ್ಲಿ ಯಾವ ಅನಿತ್ಯಭೇದಗಳೂ ಇಲ್ಲ. ಇದರಂತೆ ಈ ಪ್ರಪಂಚವೆಲ್ಲವೂ ಅತ್ಯಂತಾಭಾವವೇ ಅಂದರೆ ಯಾವಾಗಲೂ ಈ ಪ್ರಪಂಚವು ಇರುವುದಲ್ಲ. ॥೪೯॥

ಆತ್ಮೈವಾಹಂ ಪರಂ ಬ್ರಹ್ಮ ಸರ್ವಂ ಮಿಥ್ಯಾ ಜಗತ್ತ್ರಯಂ ।
ಅಹಮೇವ ಪರಂ ಬ್ರಹ್ಮ ಅಹಮೇವ ಪರೋ ಗುರುಃ ॥೫೦॥

ಜೀವಭಾವಂ ಸದಾಽಸತ್ಯಂ ಶಿವಸದ್ಭಾವಮೀದೃಶಂ ।
ವಿಷ್ಣುತ್ವಭಾವನಾ ಭ್ರಾಂತಿಃ ಸರ್ವಂ ಶಶವಿಷಾಣವತ್ ॥೫೧॥

ಅಹಮೇವ ಸದಾ ಪೂರ್ಣ ಅಹಮೇವ ನಿರಂತರಂ ।
ನಿತ್ಯತೃಪ್ತೋ ನಿರಾಕಾರೋ ಬ್ರಹ್ಮೈವಾಹಂ ನ ಸಂಶಯಃ ॥೫೨॥

ಅಹಮೇವ ಪರಾನಂದ ಅಹಮೇವ ಕ್ಷಣಾತಿಗಃ ।
ಅಹಮೇವ ತ್ವಮೇವಾಹಂ ತ್ವಂ ಚಾಹಂ ನಾಸ್ತಿ ನಾಸ್ತಿ ಹಿ ॥೫೩॥

ವಾಚಾಮಗೋಚರೋಽಹಂ ವೈ ವಾಙ್ಮನೋ ನಾಸ್ತಿ ಕಲ್ಪಿತಂ ।
ಅಹಂ ಬ್ರಹ್ಮೈವ ಸರ್ವಾತ್ಮಾ ಅಹಂ ಬ್ರಹ್ಮೈವ ನಿರ್ಮಲಃ ॥೫೪॥

---

ಆತ್ಮನಾದ ನಾನೇ ಪರಬ್ರಹ್ಮನು ಆತ್ಮನ ಹೊರತಾಗಿರುವ ಜಗತ್ತೆಲ್ಲವೂ ಸುಳ್ಳು, ನಾನೇ ಗುರುವು. ॥೫೦॥

ಆತ್ಮನಿಗೆ ಜೀವತ್ವವು ಅಸತ್ಯ, ಶಿವತ್ವವು ಅಸತ್ಯ, ವಿಷ್ಣುತ್ವವು ಅಸತ್ಯ, ಎಲ್ಲವೂ ಮೊಲದ ಕೊಂಬಿನಂತೆ ಸುಳ್ಳು. ॥೫೧॥

ನಾನೇ ಯಾವಾಗಲೂ ಪೂರ್ಣವಾಗಿರುವ ಸ್ವರೂಪನು, ವ್ಯಾಪಕನು, ಸದಾ ತೃಪ್ತನು, ಆಕಾರವಿಲ್ಲದ ಬ್ರಹ್ಮಸ್ವರೂಪನು, ಈ ವಿಷಯದಲ್ಲಿ ಸಂಶಯವಿಲ್ಲ. ॥೫೨॥

ನಾನೇ ಆನಂದಘನನಾದ ಆತ್ಮನು, ನಾನು ಕಾಲಕ್ಕೆ ನಿಲುಕದ ಬ್ರಹ್ಮವಸ್ತುವು. ನಾನೇ ನೀನು, ನೀನೇ ನಾನು, ಆತ್ಮನ ಹೊರತಾಗಿ ನಾನೂ ಇಲ್ಲ. ನೀನೂ ಇಲ್ಲ. ॥೫೩॥

ವಾಕ್ಕಿಗೆ ನಾನು ನಿಲುಕದವನು, ವಸ್ತುತಃ ವಾಕ್ಕಾಗಲೀ ಮನಸ್ಸಾಗಲೀ ಇಲ್ಲ, ನಾನು ಸರ್ವಸ್ವರೂಪನಾದ ನಿರ್ಮಲನಾದ ಬ್ರಹ್ಮಸ್ವರೂಪನು. ॥೫೪॥

ಅಹಂ ಬ್ರಹ್ಮೈವ ಚಿನ್ಮಾತ್ರಂ ಅಹಂ ಬ್ರಹ್ಮೈವ ನಿತ್ಯಶಃ ।
ಇದಂ ಚ ಸರ್ವದಾ ನಾಸ್ತಿ ಅಹಮೇವ ಸದಾ ಸ್ಥಿರಃ ॥೫೫॥

॥ ಸೂತ ಉವಾಚ ॥

ಇದಂ ಸುಖಮಹಂ ಬ್ರಹ್ಮ ಇದಂ ಸುಖಮಹಂ ಜಡಂ ।
ಇದಂ ಬ್ರಹ್ಮ ನ ಸಂದೇಹಃ ಸತ್ಯಂ ಸತ್ಯಂ ಪುನಃ ಪುನಃ ॥೫೬॥

ಇತ್ಯಾತ್ಮವೈಭವಂ ಪ್ರೋಕ್ತಂ ಸರ್ವಲೋಕೇಷು ದುರ್ಲಭಂ ।
ಸಕೃಚ್ಛ್ರವಣಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೫೭॥

ಶಾಂತಿದಾಂತಿಪರಮಾ ಭವತಾಂತಾಃ
ಸ್ವಾಂತಭಾಂತಮನಿಶಂ ಶಶಿಕಾಂತಂ ।
ಅಂತಕಾಂತಕಮಹೋ ಕಲಯಂತೋ
ವೇದಮೌಳಿವಚನೈಃ ಕಿಲ ಶಾಂತಾಃ ॥೫೮॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ವಿಂಶೋಽಧ್ಯಾಯಃ

---

ನಾನು ಚೈತನ್ಯಸ್ವರೂಪವಾದ ನಿತ್ಯವಾದ ಬ್ರಹ್ಮವಸ್ತುವು, ಈ ಜಗತ್ತೆಲ್ಲವೂ ಅಸತ್ಯ, ನಾನೇ ಸದಾ ಇರುವವನು. ॥೫೫॥

ಈ ಜಗತ್ತು ಜಡವಾದುದು, ನಾನು ಸುಖಸ್ವರೂಪನಾದ ಬ್ರಹ್ಮನು, ಈ ಜಗತ್ತು ಬ್ರಹ್ಮನ ಹೊರತಾಗಿ ಇಲ್ಲ. ಇದು ನಿಶ್ಚಯವಾದ ಮಾತು. ॥೫೬॥

ಎಲೈ ಮುನಿಯೇ, ಹೀಗೆ ನಿನಗೆ ಅತಿದುರ್ಲಭವಾದ ಆತ್ಮವೈಭವವನ್ನು ವಿವರಿಸಿರುವೆನು. ಇದನ್ನು ಒಂದುಬಾರಿ ಕೇಳಿದವನೂ ಸಹ ಬ್ರಹ್ಮನಾಗುವನು. ಮುಕ್ತಿಯನ್ನೈದುವನು ॥೫೭॥

ಎಂದು ಸೂತಮುನಿಗಳು ಹೇಳುತ್ತಾ—ಎಲೈ ಮುನಿಗಳಿರಾ ವೇದಾಂತಗಳ ಸಿದ್ಧಾಂತವಾದೀ ಆತ್ಮವೈಭವವನ್ನು ತಿಳಿದು ಶಮದಮಾದಿಗಳಿಂದ ಕೂಡಿ ಜ್ಞಾನಿಗಳು ಮೃತ್ಯುಂಜಯನಾದ ಪರಶಿವನನ್ನು ತಮ್ಮಾತ್ಮನನ್ನಾಗಿ ಚಿಂತಿಸುತ್ತಾ ಮುಕ್ತಿಯನ್ನೈದುವರು. ಸಂಸಾರಿಗಳು ಸಂಸಾರದಿಂದ ಬಿಡುಗಡೆ ಹೊಂದಲು ಇದೇ ಸುಲಭ ಮಾರ್ಗ ಎಂದು ಸಕಲ ಋಷಿಗಳಿಗೂ ಬೋಧಿಸಿದರು. ॥೫೮॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

ಶಂಕರಾಖ್ಯೇ

ಷಷ್ಠಾಂಶೇ

## ಏಕವಿಂಶೋಽಧ್ಯಾಯಃ

॥ ಋಭುರುವಾಚ ॥

ಮಹಾರಹಸ್ಯಂ ವಕ್ಷ್ಯಾಮಿ ವೇದಾಂತೇಷ್ವಪಿ ಗೋಪಿತಂ ।
ಯಸ್ಯ ಶ್ರವಣಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೧॥

ಸಚ್ಚಿದಾನಂದಮಾತ್ರೋಽಹಂ ಸರ್ವಂ ಸಚ್ಚಿನ್ಮಯಂ ತತಂ ।
ತದೇವ ಬ್ರಹ್ಮ ಸಂಪಶ್ಯನ್ ಬ್ರಹ್ಮೈವ ಭವತಿ ಸ್ವಯಂ ॥೨॥

ಅಹಂ ಬ್ರಹ್ಮ ಇದಂ ಬ್ರಹ್ಮ ನಾನ್ಯದ್ಬ್ರಹ್ಮ ನ ಸಂಶಯಃ ।
ಸತ್ಯಂ ಬ್ರಹ್ಮ ಸದಾ ಬ್ರಹ್ಮ ಅಹಂ ಬ್ರಹ್ಮೈವ ಕೇವಲಂ ॥೩॥

---

## ಇಪ್ಪತ್ತೊಂದನೆಯ ಅಧ್ಯಾಯ

ಎಲೈ ನಿದಾಘಮುನಿಯೆ, ಈಗೊಂದು ರಹಸ್ಯವಾದ ತತ್ವವನ್ನು ಹೇಳುವೆನು, ಅದನ್ನು ಕೇಳಿದಮಾತ್ರದಿಂದ ಮಾನವನು ಬ್ರಹ್ಮನೇ ಆಗುವನು. ಎಂದು ಋಭುಮುನಿಯು ಮುಂದುವರಿದು ಹೀಗೆಂದನು. ॥೧॥

"ನಾನು ಸತ್ಯಸ್ವರೂಪನು, ಜ್ಞಾನಸ್ವರೂಪನು, ಆನಂದಮೂರ್ತಿಯು, ಪ್ರಪಂಚವೆಲ್ಲವೂ ಸತ್ಯಜ್ಞಾನಾನಂದಗಳಿಂದ ತುಂಬಿದೆ." ಹೀಗೆ ತಿಳಿಯುವುದೇ ಬ್ರಹ್ಮಜ್ಞಾನವು, ಹೀಗೆ ನಿಶ್ಚಯವಾಗಿ ತಿಳಿದವನು ಬ್ರಹ್ಮನೇ ಆಗುವನು. ॥೨॥

ನಾನು ಬ್ರಹ್ಮನು, ಇದು ಬ್ರಹ್ಮ, ಸತ್ಯವು ಬ್ರಹ್ಮ, ಯಾವಾಗಲೂ ಇರುವುದು ಬ್ರಹ್ಮನು, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೩॥

ಗುರುರ್ಬ್ರಹ್ಮ ಗುಣೋ ಬ್ರಹ್ಮ ಸರ್ವಂ ಬ್ರಹ್ಮಾಪರೋಽಸ್ಮ್ಯಹಂ ।
ನಾಂತಂ ಬ್ರಹ್ಮ ಅಹಂ ಬ್ರಹ್ಮ ಶಮರೂಪಪರೋಽಸ್ಮ್ಯಹಂ ॥೪॥

ವೇದವೇದ್ಯಂ ಪರಂ ಬ್ರಹ್ಮ ವಿದ್ಯಾ ಬ್ರಹ್ಮ ವಿಶೇಷತಃ ।
ಆತ್ಮಾ ಬ್ರಹ್ಮ ಅಹಂ ಬ್ರಹ್ಮ ಆದ್ಯಂತಂ ಬ್ರಹ್ಮ ಯೋಽಸ್ಮ್ಯಹಂ ॥೫॥

ಸತ್ಯಂ ಬ್ರಹ್ಮ ಸದಾ ಬ್ರಹ್ಮ ಅನ್ಯನ್ನಾಸ್ತಿ ಸದಾ ಪರಂ ।
ಅಹಂ ಬ್ರಹ್ಮತ್ವಹಂ ನಾಸ್ತಿ ಅಹಂಕಾರಪರಂ ನ ಹಿ ॥೬॥

ಅಹಂ ಬ್ರಹ್ಮ ಇದಂ ನಾಸ್ತಿ ಅಯಮಾತ್ಮಾ ಮಹಾನ್ ಸದಾ ।
ವೇದಾಂತವೇದ್ಯೋ ಬ್ರಹ್ಮಾತ್ಮಾ ಅಪರಂ ಶಶಶೃಂಗವತ್ ॥೭॥

ಭೂತಂ ನಾಸ್ತಿ ಭವಿಷ್ಯನ್ನ ಬ್ರಹ್ಮೈವ ಸ್ಥಿರತಾಂ ಗತಃ ।
ಚಿನ್ಮಯೋಽಹಂ ಜಡಂ ತುಚ್ಛಂ ಚಿನ್ಮಾತ್ರಂ ದೇಹನಾಶನಂ ॥೮॥

---

ಗುರುವೂ ಬ್ರಹ್ಮ, ಗುಣವೂ ಬ್ರಹ್ಮ, ಎಲ್ಲವೂ ಬ್ರಹ್ಮ, ಬ್ರಹ್ಮ ವಸ್ತುವಿಗೆ ಕೊನೆಯಿಲ್ಲ, ಶಾಂತವಾದುದು ಬ್ರಹ್ಮ, ಅಂತಹ ಬ್ರಹ್ಮವಸ್ತುವೇ ನಾನು. ॥೪॥

ವೇದಗಳು ಸ್ತುತಿಸುವುದೂ ಬ್ರಹ್ಮನನ್ನು, ವಿದ್ಯೆಯೂ ಬ್ರಹ್ಮ; ಆತ್ಮನೇ ಬ್ರಹ್ಮ, ನಾನೇ ಬ್ರಹ್ಮ, ಆದಿಯೂ ಬ್ರಹ್ಮ, ಅಂತ್ಯವೂ ಬ್ರಹ್ಮ. ॥೫॥

ಸತ್ಯವು ಬ್ರಹ್ಮ, ತ್ರಿಕಾಲವೂ ಬ್ರಹ್ಮ, ಬ್ರಹ್ಮವಸ್ತುವಿಗಿಂತ ಬೇರೆಯಾದ ವಸ್ತುವೇ ಇಲ್ಲ. ನಾನೇ ಬ್ರಹ್ಮ, ಆದರೆ ಬ್ರಹ್ಮನ ಹೊರತಾಗಿ ನಾನು ಎಂಬ ಅಹಂಕಾರವು ಇಲ್ಲ. ॥೬॥

ನಾನೇ ಬ್ರಹ್ಮ, ನನ್ನ ಹೊರತಾಗಿ ಇದು ಎನ್ನುವುದಿಲ್ಲ. "ಇವನು"—ಎನ್ನುವವನೇ ಆತ್ಮ, ಆತ್ಮನೇ ಬ್ರಹ್ಮ, ವೇದಾಂತಗಳು ಆ ಬ್ರಹ್ಮನನ್ನೇ ಹೇಳುವುವು, ಬ್ರಹ್ಮನ ಹೊರತಾಗಿರುವುದೆಲ್ಲವೂ ಅಸತ್ಯ. ॥೭॥

ಭೂತವೂ ಇಲ್ಲ. ಭವಿಷ್ಯತ್ತೂ ಇಲ್ಲ. ಜ್ಞಾನಪ್ರಕಾಶಮೂರ್ತಿಯಾದ ಬ್ರಹ್ಮ ವಸ್ತುವೊಂದೇ ಇರುವುದು. ಅದರ ಹೊರತಾಗಿ ಕಾಣುವ ಜಡವಸ್ತುವೆಲ್ಲವೂ ಅಸತ್ಯ, ಬ್ರಹ್ಮನಿಗೆ ಜ್ಞಾನವೇ ಶರೀರವು. ॥೮॥

ಚಿತ್ತಂ ಕಿಂಚಿತ್ಕ್ವಚಿಚ್ಚಾಪಿ ಚಿತ್ತಂ ದೂರೋಹಮಾತ್ಮಕಃ ।
ಸತ್ಯಂ ಜ್ಞಾನಮನಂತಂ ಯನ್ನಾನ್ಯಂತಂ ಜಡದುಃಖಕಂ ॥೯॥

ಆತ್ಮಾ ಸತ್ಯಮನಂತಾತ್ಮಾ ದೇಹಮೇವ ನ ಸಂಶಯಃ ।
ನಾತರ್ಾಪ್ಯಸಚ್ಛ್ರುತಂ ತನ್ನ ಅಹಮೇವ ಮಹೋಮಹಃ ॥೧೦॥

ಏಕಸಂಖ್ಯಾಪ್ಯಸದ್ಬ್ರಹ್ಮ ಸತ್ಯಮೇವ ಸದಾಪ್ಯಹಂ ।
ಸರ್ವಮೇವಮಸತ್ಯಂ ಚ ಉತ್ಪನ್ನತ್ವಾತ್ಪರಾತ್ಸದಾ ॥೧೧॥

ಸರ್ವಾವಯವಹೀನೋಽಪಿ ನಿತ್ಯತ್ವಾತ್ಪರಮೋಹ್ಯಹಂ ।
ಸರ್ವಂ ನ ಮೇ ದೃಶ್ಯಂ ಕಿಂಚಿತ್ ಸರ್ವಂ ಬ್ರಹ್ಮೈವ ಕೇವಲಂ ॥೧೨॥

---

"ಮನಸ್ಸು" ಆತ್ಮನನ್ನು ಅಲ್ಪನನ್ನಾಗಿಯೂ, ಎಲ್ಲಿಯೊ ಒಂದೆಡೆಯಲ್ಲಿ ಮಾತ್ರ ಇರುವವನನ್ನಾಗಿಯೂ ಕಲ್ಪಿಸುವುದು, ಅದು ಮನಸ್ಸಿನ ಭ್ರಮೆ, ಆತ್ಮನು ಸತ್ಯಜ್ಞಾನಾನಂದಸ್ವರೂಪನು, ನಾಶವಿಲ್ಲದವನು. ॥೯॥

ಆತ್ಮನು ಸತ್ಯ ಮತ್ತು ಅದ್ವಿತೀಯನು. ಇಂತಹ ಆತ್ಮನಿಗೆ ಭ್ರಮೆಯಿಂದ ಅನೇಕ ದೇಹಭೇದಗಳೊದಗುವಂತೆ ಕಾಣುವುದು. ಆತ್ಮನಿಗಿಂತಲೂ ಮಹತ್ತಾದ ವ್ಯಕ್ತಿಯು ಇಲ್ಲ. ಅಂತಹ ಆತ್ಮನೇ ನಾನು. ॥೧೦॥

ನಾನು ಓರ್ವನೇ ಆದರೂ "ಒಂದು" ಎಂಬ ಸಂಖ್ಯೆಯು ನನ್ನಲ್ಲಿಲ್ಲ. ನಾನೋರ್ವನೇ ಸತ್ಯನು, ಉತ್ಪತ್ತಿಯಿಲ್ಲದುದರಿಂದ ಮಿಕ್ಕುದೆಲ್ಲವೂ ಅಸತ್ಯ, ಜನಿಸುವುದರಿಂದ ಯಾವಾವುದು ಜನಿಸುವುದೋ ಅದೆಲ್ಲವೂ ಅಸತ್ಯ. ಉದಾಹರಣೆ ಮಡಕೆ. ಮಡಕೆಯು ಜನಿಸುತ್ತದೆ, ಪುನಃ ನಾಶವಾಗುವುದರಿಂದ ಅದು ಅಸತ್ಯವೂ ಆಗಿದೆ. ಅದರಂತೆ ಈ ಜಗತ್ತೆಲ್ಲವೂ ಅಸತ್ಯ. ॥೧೧॥

ನನಗೆ ಯಾವ ಅವಯವಗಳೂ ಇಲ್ಲದುದರಿಂದ ನಾನು ನಿತ್ಯನು. ಮತ್ತು ಆಕಾಶದಂತೆ ಮಹಾವ್ಯಾಪಕನು. ಆಕಾಶಕ್ಕೆ ಅವಯವಗಳಿಲ್ಲ. ಅದು ನಿತ್ಯವಾಗಿದೆ ಮತ್ತು ವ್ಯಾಪಕವಾಗಿದೆ. ಕಾಣಿಸುವ ವಸ್ತುಗಳಾವುವೂ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ. ಆ ಬ್ರಹ್ಮವಸ್ತುವೇ ನಾನು. ॥೧೨॥

ಆಗ್ರಹಂ ಚ ನ ಮೇ ಕಿಂಚಿತ್ ಚಿನ್ಮಯತ್ವಾದ್ವದಾಮ್ಯಹಂ ।
ಇದಮಿತ್ಯಪಿ ನಿರ್ದೇಶೋ ನ ಕ್ವಚಿತ್ ನ ಕ್ವಚಿತ್ ಸದಾ ॥೧೩॥

ನಿರ್ಗುಣಬ್ರಹ್ಮ ಏವಾಹಂ ಸುಗುರೋರುಪದೇಶತಃ ।
ವಿಜ್ಞಾನಂ ಸಗುರುರ್ಬ್ರಹ್ಮ ಅಹಂ ವಿಜ್ಞಾನವಿಗ್ರಹಃ ॥೧೪॥

ನಿರ್ಗುಣೋಽಸ್ಮಿ ನಿರಂಶೋಽಸ್ಮಿ ಭವೋಽಸ್ಮಿ ಭರಣೋಽಸ್ಮ್ಯಹಂ ।
ದೇವೋಽಸ್ಮಿ ದ್ರವ್ಯಪೂರ್ಣೋಽಸ್ಮಿ ಶುದ್ಧೋಽಸ್ಮಿ ರಹಿತೋಽಸ್ಮ್ಯಹಂ॥೧೫॥

ರಸೋಽಸ್ಮಿ ರಸಹೀನೋಽಸ್ಮಿ ತುರ್ಯೋಽಸ್ಮಿ ಶುಭಭಾವನಃ ।
ಕಾರ್ಯೋಽಸ್ಮಿ ಕಾರ್ಯಹೀನೋಽಸ್ಮಿ ನಿತ್ಯಂ ನಿರ್ಮಲವಿಗ್ರಹಃ ॥೧೬॥

ಆಚಾರಫಲಹೀನೋಽಸ್ಮಿ ಅಹಂ ಬ್ರಹ್ಮಾಸ್ಮಿ ಕೇವಲಂ ।
ಇದಂ ಸರ್ವಂ ಪರಂ ಬ್ರಹ್ಮ ಅಯಮಾತ್ಮಾ ನ ವಿಸ್ಮಯಃ ॥೧೭॥

---

ಅದ್ವಿತೀಯನಾದ ನನಗೆ ಯಾವ ಆಗ್ರಹವೂ ಇಲ್ಲ. ‘ ಇದು ’, ‘ ಇವನು ’ ಎಂಬ ವ್ಯವಹಾರವೂ ಇಲ್ಲ. ॥೧೩॥

ಗುರುವಿನ ಉಪದೇಶದ ಮಹಿಮೆಯಿಂದ ನಾನು ನಿರ್ಗುಣಬ್ರಹ್ಮನಾಗಿರುವೆನು. “ ಅಹಂ ಬ್ರಹ್ಮಾಸ್ಮಿ ” ಎಂದು ಮುಂತಾದ ವೇದಾಂತವಾಕ್ಯಜ್ಞಾನವೇ ಅಂದರೆ ಬ್ರಹ್ಮಜ್ಞಾನವೇ ನನ್ನ ಗುರುವು. ಜ್ಞಾನಸ್ವರೂಪನು ನಾನು. ॥೧೪॥

ಗುಣಗಳಿಲ್ಲದವನು ನಾನು, ಅವಯುವಗಳಿಲ್ಲದವನು ನಾನು, ಜಗನ್ಮಯನೂ ಜಗದ್ರಕ್ಷನೂ ನಾನು, ದೇವನು ನಾನು, ದ್ರವ್ಯವುಳ್ಳವನು ನಾನು, ಶುದ್ಧನು ನಾನು, ಶೂನ್ಯನು ನಾನು. ॥೧೫॥

ರಸಸ್ವರೂಪನು ನಾನು, ಆದರೆ ನನ್ನಲ್ಲಿ ಯಾವ ರಸವೂ ಇಲ್ಲ. ದೇಹಾತೀತ ನಾದ ಮಂಗಳಮೂರ್ತಿಯು ನಾನು, ಕಾರ್ಯಸ್ವರೂಪನು ನಾನು, ಆದರೆ ನನ್ನಲ್ಲಿ ಯಾವ ಕಾರ್ಯಗಳೂ ಇಲ್ಲ. ಸದಾ ನಿರ್ಮಲನು ನಾನು. ॥೧೬॥

ನನಗೆ ಯಾವ ಆಚಾರವೂ ಇಲ್ಲ, ಫಲವೂ ಇಲ್ಲ. ನಾನು ಶುದ್ಧಬ್ರಹ್ಮನು, ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ, ಆತ್ಮನೂ ಬ್ರಹ್ಮನೇ. ॥೧೭॥

ಪೂರ್ಣಾಪೂರ್ಣಸ್ವರೂಪಾತ್ಮಾ ನಿತ್ಯಂ ಸರ್ವಾತ್ಮವಿಗ್ರಹಃ ।
ಪರಮಾನಂದತತ್ವಾತ್ಮಾ ಪರಿಚ್ಛಿನ್ನಂ ನ ಹಿ ಕ್ವಚಿತ್ ॥೧೮॥

ಏಕಾತ್ಮಾ ನಿರ್ಮಲಾಕಾರ ಅಹಮೇವೇತಿ ಭಾವಯ ।
ಅಹಂಭಾವನಯಾ ಯುಕ್ತ ಅಹಂ ಭಾವೇನ ಸಂಯುತಃ ॥೧೯॥

ಶಾಂತಂ ಭಾವಯ ಸರ್ವಾತ್ಮಾ ಶಾಮ್ಯತ್ಯಂತಂ ಮನೋಮಲಃ ।
ದೇಹೋಽಹಮಿತಿ ಸಂತ್ಯಜ್ಯ ಬ್ರಹ್ಮಾಹಮಿತಿ ನಿಶ್ಚಿನು ॥೨೦॥

ಬ್ರಹ್ಮೈವಾಹಂ ಬ್ರಹ್ಮಮಾತ್ರಂ ಬ್ರಹ್ಮಣೋಽನ್ಯನ್ನ ಕಿಂಚನ ।
ಇದಂ ನಾಹಮಿದಂ ನಾಹಮಿದಂ ನಾಹಂ ಸದಾಸ್ಮರ ॥೨೧॥

ಅಹಂ ಸೋಽಹಮಹಂ ಸೋಽಹಮಹಂ ಬ್ರಹ್ಮೇತಿ ಭಾವಯ ।
ಚಿದಹಂ ಚಿದಹಂ ಬ್ರಹ್ಮ ಚಿದಹಂ ಚಿದಹಂ ವದ ॥೨೨॥

---

ಪೂರ್ಣನು ನಾನು, ಅಪೂರ್ಣವಸ್ತುವಿನ ಸತ್ತೆಯು ನಾನು, ಎಲ್ಲ ಆತ್ಮವೂ ನಾನೇ, ನಿತ್ಯಾನಂದಸ್ವರೂಪನು ನಾನು, ಭಿನ್ನಭಿನ್ನವಾದ ವಿನಾಶಿಯಾದ ಈ ಜಗತ್ತು ಇಲ್ಲವೇ ಇಲ್ಲವು. ॥೧೮॥

“ನಾನು ಓರ್ವನು, ನಿರ್ಮಲನು, ನನ್ನ ಹೊರತು ಯಾವ ವಸ್ತುವೂ ಇಲ್ಲ ನಾನೇ ಬ್ರಹ್ಮ” ಎಂದು ಬ್ರಹ್ಮಭಾವವನ್ನು ಅನುಸಂಧಾನಮಾಡು. ಅದರಿಂದ ಮನಸ್ಸಿನ ಕೊಳೆಯೆಲ್ಲವೂ ದೂರವಾಗಿ ದೇಹವೇ ನಾನೆಂಬ ದೇಹಾತ್ಮಭಾವವು ತೊಲಗಿ ಬ್ರಹ್ಮಜ್ಞಾನವು ಉದಯಿಸುವುದು, ನೀನು ಮುಕ್ತನಾಗುವೆ. ॥೨೦॥

“ನಾನೇ ಬ್ರಹ್ಮನು, ಬ್ರಹ್ಮನೇ ನಾನು, ಬ್ರಹ್ಮನ ಹೊರತಾಗಿ ಏನೂ ಇಲ್ಲವು. ಈ ದೇಹವು ನಾನಲ್ಲ, ಈ ಜಗತ್ತೂ ನಾನಲ್ಲ” ಎಂದು ಚಿಂತಿಸು. ॥೨೧॥

“ನಾನು ಆ ಬ್ರಹ್ಮ, ಆ ಬ್ರಹ್ಮನೇ ನಾನು,” ಎಂದು ಅನುಸಂಧಾನಮಾಡು, “ಜ್ಞಾನಮೂರ್ತಿಯು ನಾನು, ನಾನೇ ಜ್ಞಾನಮೂರ್ತಿಯು” ಎಂದು ಭಾವಿಸು. ॥೨೨॥

ನೇದಂ ನೇದಂ ಸದಾ ನೇದಂ ನ ತ್ವನ್ನಾಹಂ ಚ ಭಾವಯ ।
ಸರ್ವಂ ಬ್ರಹ್ಮ ನ ಸಂದೇಹಃ ಸರ್ವಂ ವೇದಂ ನ ಕಿಂಚನ ॥೨೩॥

ಸರ್ವಂ ಶಬ್ದಾರ್ಥಭವನಂ ಸರ್ವಲೋಕಭಯಂ ನ ಚ ।
ಸರ್ವಂ ತೀರ್ಥಂ ನ ಸತ್ಯಂ ಚ ಸರ್ವದೇವಾಲಯಂ ನಹಿ ॥೨೪॥

ಪ್ರಾಕೃತಸ್ಮರಣಂ ತ್ಯಾಜ್ಯಂ ಬ್ರಹ್ಮಸ್ಮರಣಮಾಹರಂ ।
ತತಸ್ತದಪಿ ಸಂತ್ಯಜ್ಯ ನಿಜರೂಪಸ್ಥಿರೋ ಭವ ॥೨೫॥

ಸ್ಥಿರರೂಪಂ ಪರಿತ್ಯಜ್ಯ ಆತ್ಮಮಾತ್ರಂ ಭವತ್ಯಸೌ ।
ತ್ಯಾಗತ್ವಮಪಿ ಸಂತ್ಯಜ್ಯ ಭೇದಮಾತ್ರಂ ಸದಾ ತ್ಯಜ ॥೨೬॥

ಸ್ವಯಂ ನಿಜಂ ಸಮಾವೃತ್ಯ ಸ್ವಯಮೇವ ಸ್ವಯಂ ತ್ಯಜ ।
ಇದಮಿತ್ಯಂಗುಲೇ ದೃಷ್ಟಂ ಇದಮಸ್ತಮಚೇತಸಂ ॥೨೭॥

---

ಈ ಜಗತ್ತು ಯಾವಾಗಲೂ ಇಲ್ಲ, ನಾನು ನೀನು ಎಂಬುದೂ ಇಲ್ಲ, ಯಾವ ವೇದಗಳೂ ಇಲ್ಲ, ಎಲ್ಲೆಲ್ಲೂ ಬ್ರಹ್ಮಸ್ವರೂಪವೊಂದೇ ಇರುವುದು. ಆ ಬ್ರಹ್ಮವಸ್ತುವೇ ನಾನು ಎಂದು ಭಾವಿಸು. ॥೨೩॥

ಬ್ರಹ್ಮವಸ್ತುವಿನ ಹೊರತಾಗಿ ಯಾವ ಶಬ್ದಾರ್ಥವೂ ಇಲ್ಲ, ಯಾವ ಭಯವೂ ಇಲ್ಲ, ತೀರ್ಥಕ್ಷೇತ್ರದೇವಾಲಯಗಳೆಂಬುವುವೂ ಇಲ್ಲ, ಎಲ್ಲವೂ ಅಸತ್ಯ. ॥೨೪॥

ಅಸತ್ಯವಸ್ತುಗಳ ಧ್ಯಾನವನ್ನು ಬಿಟ್ಟು ಬ್ರಹ್ಮವಸ್ತುವೊಂದನ್ನೇ ಧ್ಯಾನಿಸು, ಆಮೇಲೆ ನಿನ್ನ ನಿಜರೂಪವಾದ ಸ್ವರೂಪದಲ್ಲಿಯೇ ಸ್ಥಿರವಾಗಿ ನಿಲ್ಲುವೆ. ॥೨೫॥

ಅನಂತರ ನಿನ್ನ ನಿಜಸ್ವರೂಪವು ಬ್ರಹ್ಮಸ್ವರೂಪವೇ ಎಂಬ ಜ್ಞಾನವುದಯಿಸಿ ಸಕಲ ಭೇದಗಳೂ ಮಾಯವಾಗುವುವು ॥೨೬॥

ತಾನು ತನ್ನದು-ಎಂಬುದನ್ನೂ ಇದು, ಇವು-ಎಂಬುದನ್ನೂ ನಡೆಸುವ ವ್ಯವಹಾರವು ಜಡವಸ್ತುಗಳನ್ನುದ್ದೇಶಿಸುವುವೆಂದು ತಿಳಿ. ॥೨೭॥

ಇದಂ ವಾಕ್ಯಂ ಚ ವಾಕ್ಯೇನ ವಾಚಾಪಿ ಪರಿವೇದನಂ ।
ಸರ್ವಂ ಭ್ರಾಂತಂ ನ ಸಂದೇಹಃ ಸರ್ವಂ ನಾಸ್ತಿ ನ ಸಂಶಯಃ ॥೨೮॥

ಸರ್ವಂ ತುಚ್ಛಂ ನ ಸಂದೇಹಃ ಸರ್ವಂ ಮಾಯಾ ನ ಸಂಶಯಃ ।
ಸರ್ವಂ ಚಿತ್ತಂ ನ ಸಂದೇಹಃ ಸರ್ವಂ ಬ್ರಹ್ಮ ನ ಸಂಶಯಃ ॥೨೯॥

ಬ್ರಹ್ಮೈವಾಹಂ ನ ಸಂದೇಹಃ ಬ್ರಹ್ಮೈವೇದಂ ನ ಸಂಶಯಃ ।
ಬ್ರಹ್ಮಾನ್ಯದ್ಭಾತಿ ಚೇನ್ಮಿಥ್ಯಾ ಸರ್ವಂ ಮಿಥ್ಯಾ ಪರಾವರೌ ॥೩೦॥

ನ ದೇಹಂ ಪಂಚಭೂತಂ ವಾ ನ ಚಿತ್ತಂ ಭ್ರಾಂತಿಮಾತ್ರಕಂ ।
ನ ಚ ಬುದ್ಧೀಂದ್ರಿಯಾಭಾವಂ ನ ಮುಕ್ತಿರ್ಬ್ರಹ್ಮಮಾತ್ರಕಂ ॥೩೧॥

ನಿಮಿಷಂ ನ ಚ ಶಂಕಾಪಿ ನ ಸಂಕಲ್ಪಂ ತದಸ್ತಿ ಚೇತ್ ।
ಅಹಂಕಾರಮಸದ್ವಿದ್ಧಿ ಅಭಿಮಾನಂ ತದಸ್ತಿ ಚೇತ್ ॥೩೨॥

---

"ಇದು" ಎಂಬ ಮಾತೂ ಸಹ ಮಾತಿನ ವ್ಯವಹಾರವೂ ಸಹ ಭ್ರಾಂತಿಜನ್ಯವಾದುದು, ಆದುದರಿಂದ ಅಂತಹ ವ್ಯವಹಾರವೆಲ್ಲವೂ ಅಸತ್ಯ. ॥೨೮॥

ಎಲ್ಲವೂ ಅಸತ್ಯ, ಇದೆಲ್ಲವೂ ಮಾಯೆ, ಇದೆಲ್ಲವೂ ಮನಸ್ಸಿನ ಬರಿಯ ಕಲ್ಪನೆಗಳು, ಎಲ್ಲವೂ ಬ್ರಹ್ಮವಸ್ತುವೇ, ಅದರ ಹೊರತಾಗಿ ಏನೂ ಇಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ. ॥೨೯॥

ಬ್ರಹ್ಮವಸ್ತುವೇ ನಾನು, ಇದೆಲ್ಲವೂ ಬ್ರಹ್ಮವಸ್ತುವೇ, ಅದರ ಹೊರತಾಗಿ ಕಾಣುವ ಯಾವ ಚಿಕ್ಕದೊಡ್ಡವಸ್ತುಗಳೆಲ್ಲವೂ ಅಸತ್ಯ. ॥೩೦॥

ದೇಹವಾಗಲೀ ಪಂಚಭೂತಗಳಾಗಲೀ ಎಲ್ಲವೂ ಭ್ರಾಂತಿಯ ಕಲ್ಪನೆಗಳು. ಬುದ್ಧಿಯೂ ಇಲ್ಲ. ಇಂದ್ರಿಯಗಳೂ ಇಲ್ಲ, ಇಲ್ಲ ಎನ್ನುವುದೂ ಇಲ್ಲ, ಮುಕ್ತಿಯೂ ಇಲ್ಲ, ಬಂಧನವೂ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು. ॥೩೧॥

ನಿಮಿಷವೂ ಇಲ್ಲ, ಸಂದೇಹವೂ ಇಲ್ಲ, ಸಂದೇಹವಿದ್ದರೆ ತಾನೆ ನಿಶ್ಚಯವೆನ್ನುವುದು? ಅಹಂಕಾರವು ಇಲ್ಲ. ಅಹಂಕಾರವಿದ್ದರೆ ತಾನೆ ಅಭಿಮಾನವಿರುವುದು? ಆದುದರಿಂದ ನಿಶ್ಚಯವೂ ಇಲ್ಲ, ಅಭಿಮಾನವೂ ಇಲ್ಲ. ॥೩೨॥

ನ ಚಿತ್ತಸ್ಮರಣಂ ತಚ್ಚೇನ್ನ ದೇಹೋ ನ ಜರಾಯುದಿ ।
ಪ್ರಾಣೋ ಯದ್ದೀಯತೇ ಶಾಸ್ತಿ ಘ್ರಾಣೋ ಯದಿಹ ಗಂಧಕಂ॥೩೩॥

ಚಕ್ಷುರ್ಯದಿ ಹಿ ಭೂತಸ್ಯ ಶ್ರೋತ್ರಂ ಚ ಶ್ರವಭಾವನಂ ।
ತ್ವಗಸ್ತಿ ಚೇತ್ ಸ್ಪರ್ಶಸತ್ತಾ ಜಿಹ್ವಾ ಚೇದ್ರಸಸಂಗ್ರಹಃ ॥೩೪॥

ಜೀವೋಸ್ತಿ ಚೇಜ್ಜೀವನಂ ಚ ಪಾದಂ ಚೇತ್ಪಾದಚಾರಣಂ ।
ಹಸ್ತೌ ಯದಿ ಕ್ರಿಯಾಸತ್ತಾ ಸ್ರಷ್ಟಾ ಚೇತ್ ಸೃಷ್ಟಿಸಂಭವಃ ॥೩೫॥

ರಕ್ಷ್ಯಂ ಚೇದ್ರಕ್ಷಕೋ ವಿಷ್ಣುಃ ಭಕ್ಷ್ಯಂ ಚೇದ್ಭಕ್ಷಕಃ ಶಿವಃ ।
ಸರ್ವಂ ಬ್ರಹ್ಮ ನ ಸಂದೇಹಃ ಸರ್ವಂ ಬ್ರಹ್ಮೈವ ಕೇವಲಂ ॥೩೬॥

ಪೂಜ್ಯಂ ಚೇತ್ಪೂಜನಂ ಚಾಸ್ತಿ ಭಾಸ್ಯಂ ಚೇದ್ಭಾಸಕಃ ಶಿವಃ ।
ಸರ್ವಂ ಮಿಥ್ಯಾ ನ ಸಂದೇಹಃ ಸರ್ವಂ ಚಿನ್ಮಾತ್ರಮೇವ ಹಿ ॥೩೭॥

---

ಆತ್ಮನ ಹೊರತಾಗಿ ಚಿತ್ತವೆಂಬುದಿಲ್ಲ, ಆದುದರಿಂದ ಸ್ಮರಣವೂ ಇಲ್ಲ. ಆತ್ಮನಿಗೆ ದೇಹವೇ ಇಲ್ಲ, ಆದುದರಿಂದ ಆ ದೇಹಸಂಬಂಧವಾದ ಮುಪ್ಪೂ ಇಲ್ಲ. ಪ್ರಾಣವು ಇಲ್ಲದುದರಿಂದ ಜನನಮರಣಗಳು ಇಲ್ಲ, ನಾಸಿಕವಿಲ್ಲದುದರಿಂದ ವಾಸನೆಯೂ ಇಲ್ಲ, ಕಣ್ಣಿಲ್ಲದುದರಿಂದ ರೂಪವೂ ಇಲ್ಲ, ಕಿವಿಯಿಲ್ಲದುದರಿಂದ ಕೇಳುವುದೂ ಇಲ್ಲ, ಚರ್ಮವಿಲ್ಲದುದರಿಂದ ಸ್ಪರ್ಶವು ಇಲ್ಲ, ನಾಲಿಗೆಯಿಲ್ಲದುದರಿಂದ ರುಚಿಯೂ ಇಲ್ಲ. ॥೩೩-೩೪॥

ಜೀವವಿದ್ದರೆ ತಾನೇ ಆತ್ಮನಿಗೆ ಜೀವನವು. ಜೀವವೂ ಇಲ್ಲ, ಜೀವನವೂ ಇಲ್ಲ, ಕಾಲಿದ್ದರೆ ತಾನೇ ಓಡಾಡುವುದು? ಕಾಲೂ ಇಲ್ಲ, ಸಂಚಾರವೂ ಇಲ್ಲ, ಕೈಗಳಿದ್ದರೆ ತಾನೆ ಕೆಲಸಮಾಡುವುದು, ಕೈಗಳೂ ಇಲ್ಲ, ಕೆಲಸವೂ ಇಲ್ಲ, ಸೃಷ್ಟಿಯಿದ್ದರೆ ತಾನೇ ಸೃಷ್ಟಿಸುವವನು? ಸೃಷ್ಟಿಯೂ ಇಲ್ಲ, ಸೃಷ್ಟಿಸುವವನೂ ಇಲ್ಲ. ॥೩೫

ರಕ್ಷಿಸಲ್ಪಡುವ ವಸ್ತುವಿದ್ದರೆ ತಾನೇ ರಕ್ಷಿಸುವ ವಿಷ್ಣುವು ಬೇಕು. ಸಂಹರಿಸಲ್ಪಡುವ ವಸ್ತುವಿದ್ದರೆ ತಾನೆ ಸಂಹರಿಸುವ ರುದ್ರನಿರುವುದು? ಆದುದರಿಂದ ರಕ್ಷಕನೆಂಬುವ ವಿಷ್ಣುವೂ ಸಂಹಾರಕರ್ತನೆನ್ನುವ ಶಿವನೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ, ಬ್ರಹ್ಮವಸ್ತುವೊಂದೇ ಇರುವುದು. ॥೩೬॥

ಪೂಜ್ಯವಸ್ತುವಿದ್ದರೆ ತಾನೇ ಪೂಜೆಯೆನ್ನುವುದು? ಪ್ರಕಾಶಿಸಲ್ಪಡುವ ವಸ್ತು

ಅಸ್ತಿ ಚೇತ್ಕಾರಣಂ ಸತ್ಯಂ ಕಾರ್ಯಂ ಚೈವ ಭವಿಷ್ಯತಿ ।
ನಾಸ್ತಿ ಚೇನ್ನಾಸ್ತಿ ಹೀನೋಽಹಂ ಬ್ರಹ್ಮೈವಾಹಂ ಪರಾಯಣಂ ॥೩೮॥

ಅತ್ಯಂತದುಃಖಮೇತದ್ಧಿ ಅತ್ಯಂತಂ ಸುಖಮವ್ಯಯಂ ।
ಅತ್ಯಂತಂ ಜನ್ಮಮಾತ್ರಂ ಚ ಅತ್ಯಂತಂ ರಣಸಂಭವಂ ॥೩೯॥

ಅತ್ಯಂತಂ ಮಲಿನಂ ಸರ್ವಂ ಅತ್ಯಂತಂ ನಿರ್ಮಲಂ ಪರಂ ।
ಅತ್ಯಂತಂ ಕಶ್ಮಲಂ ದುಷ್ಟಂ ಅತ್ಯಂತಂ ನಿರ್ಮಲಂ ತ್ವಹಂ ॥೪೦॥

ಅತ್ಯಂತಂ ಸರ್ವದಾದೋಷಂ ಅತ್ಯಂತಂ ಸರ್ವದಾ ಗುಣಂ ।
ಅತ್ಯಂತಂ ಸರ್ವದಾ ಶುಭ್ರಂ ಅತ್ಯಂತಂ ಸರ್ವದಾ ಮಲಂ ॥೪೧॥

ಅತ್ಯಂತಂ ಸರ್ವದಾ ಚಾಹಂ ಅತ್ಯಂತಂ ಸರ್ವದಾ ಇದಂ ।
ಅತ್ಯಂತಂ ಸರ್ವದಾ ಬ್ರಹ್ಮ ಅತ್ಯಂತಂ ಸರ್ವದಾ ಜಗತ್ ॥೪೨॥

---

ವಿದ್ದರೆ ತಾನೇ ಪ್ರಕಾಶಪಡಿಸುವ ವಸ್ತುವಿರುವುದು, ಯಾವುದೂ ಇಲ್ಲ, ಎಲ್ಲವೂ ಬ್ರಹ್ಮ. ॥೩೭॥

ಕಾರಣವು ಸತ್ಯವಾಗಿದ್ದರೆ ತಾನೇ ಕಾರ್ಯವು ಸತ್ಯವಾಗಿರುವುದು ? ಆದುದರಿಂದ ಕಾರಣವೂ ಇಲ್ಲ ಕಾರ್ಯವೂ ಇಲ್ಲ, ಕಾರ್ಯಕಾರಣಗಳಿಲ್ಲದ ಬ್ರಹ್ಮವು ನಾನು. ॥೩೮॥

ಈ ಜಗತ್ತೆಲ್ಲವೂ ದುಃಖಮಯವಾಗಿದೆ, ಜನನಮರಣಗಳಿಂದ ತುಂಬಿದೆ. ಆದರೆ ಬ್ರಹ್ಮವಸ್ತುವು ಕೇವಲ ಸುಖಸ್ವರೂಪವು. ಅದಕ್ಕೆ ಜನನ ಮರಣಗಳಿಲ್ಲ, ಅಂತಹ ಬ್ರಹ್ಮವಸ್ತುವೇ ನಾನು. ॥೩೯॥

ಜಗತ್ತೆಲ್ಲವೂ ಬರಿಯ ಕಲ್ಮಷಗಳಿಂದ ತುಂಬಿದೆ. ದೋಷಗಳಿಂದ ದುಷ್ಟವಾಗಿದೆ. ಆದರೆ ಬ್ರಹ್ಮವಸ್ತುವು ಅತ್ಯಂತ ನಿರ್ಮಲವಾಗಿದೆ. ದೋಷಗಳು ಅದಕ್ಕಿಲ್ಲವೇ ಇಲ್ಲ, ಅಂತಹ ಬ್ರಹ್ಮವಸ್ತುವೇ ನಾನು. ॥೪೦॥

ಜಗತ್ತಿನಲ್ಲಿ ಗುಣಯುಕ್ತವಾದ ವಸ್ತುವೆನ್ನುವುದೂ ದೋಷಯುಕ್ತವಾಗಿದೆ. ಶುಭ್ರವೆನಿಸಿಕೊಳ್ಳುವ ವಸ್ತುವೂ ಸಹ ಕೊಳೆಯಿಂದ ಕೂಡಿಯೇ ಇದೆ. ಬ್ರಹ್ಮವಸ್ತುವು ಸದಾ ಶುಭ್ರವು, ನಿರ್ಗುಣವಾದುದು. ॥೪೧॥

ನಾನು ಯಾವಾಗಲೂ ಬ್ರಹ್ಮಸ್ವರೂಪನು, ಈ ಜಗತ್ತೆಲ್ಲವೂ ಸಹ ಬ್ರಹ್ಮನ ಹೊರತಾಗಿಲ್ಲ, ಅದಕ್ಕೆ ಕೊನೆಯೆಂಬುದೇ ಇಲ್ಲ, ಆದಿಯೂ ಇಲ್ಲ. ॥೪೨॥

ಏತಾವದುಕ್ತಮುಭಯಂ ದ್ವಯಭೇದಂ ನ ಕಿಂಚನ ।
ಸದಸದ್ವಾಪಿ ನಾಸ್ತ್ಯೇವ ಸದಸದ್ವಾಪಿ ವಾಕ್ಯಕಂ ॥೪೩॥

ನಾಸ್ತಿ ನಾಸ್ತಿ ನ ಸಂದೇಹೋ ಬ್ರಹ್ಮೈವಾಹಂ ನ ಸಂಶಯಃ ।
ಕಾರಣಂ ಕಾರ್ಯರೂಪಂ ವಾ ಸರ್ವಂ ನಾಸ್ತಿ ನ ಸಂಶಯಃ ॥೪೪॥

ಕರ್ತಾ ಭೋಕ್ತಾ ಕ್ರಿಯಾವಾಪಿ ನ ಭೋಜ್ಯಂ ಭೋಗತೃಪ್ತತಾ ।
ಸರ್ವಂ ಬ್ರಹ್ಮ ನ ಸಂದೇಹಃ ಸರ್ವಶಬ್ದೋ ನ ವಾಸ್ತವಂ ॥೪೫॥

ಭೂತಂ ಭವಿಷ್ಯಂ ವಾ ತಂತುಕಾರ್ಯಂ ವಾ ನಾಸ್ತಿ ಸರ್ವದಾ ।
ಸದಸದ್ಭೇದಭೇದಂ ವಾ ನ ಗುಣಾಗುಣಭಾಗಿನಃ ॥೪೬॥

ನಿರ್ಮಲಂ ವಾ ಮಲಂ ವಾಪಿ ನಾಸ್ತಿ ನಾಸ್ತಿ ಚ ಕಿಂಚನ ।
ಭಾಷ್ಯಂ ವಾ ಭಾಷಣಂ ವಾಪಿ ನಾಸ್ತಿ ನಾಸ್ತಿ ಚ ಕಿಂಚನ ॥೪೭॥

---

ಹೀಗೆ ಆತ್ಮನ ಹೊರತಾಗಿ ಬೇರೆ ಯಾವ ವಸ್ತುವೂ ಇಲ್ಲದುದರಿಂದ ಆತ್ಮನಿಗೆ ಯಾವ ಭಯವೂ ಇಲ್ಲ, ಎರಡು ವಸ್ತುಗಳಿದ್ದರೆ ತಾನೇ ಒಂದರಿಂದ ಮತ್ತೊಂದಕ್ಕೆ ಭಯವೊದಗುವುದು ? ಆತ್ಮನ ಹೊರತಾಗಿ ಸತ್ಯವೂ ಇಲ್ಲ, ಅಸತ್ಯವೂ ಇಲ್ಲ. ॥೪೩॥

ಆದುದರಿಂದ ಬ್ರಹ್ಮನ ಹೊರತಾಗಿ ಕಾರಣವೂ ಇಲ್ಲ, ಕಾರ್ಯವೂ ಇಲ್ಲ. ಕಾರ್ಯರೂಪದಿಂದಿರುವ ಉಪಾದಾನಕಾರಣವೂ ಇಲ್ಲ, ಇಂತಹ ಬ್ರಹ್ಮವಸ್ತುವೇ ನಾನು. ಇದರಲ್ಲಿ ಸಂಶಯವಿಲ್ಲ. ॥೪೪॥

ಕರ್ತೃವೂ ಇಲ್ಲ, ಕ್ರಿಯೆಯೂ ಇಲ್ಲ, ಕಾರ್ಯವೂ ಇಲ್ಲ, ಭೋಗ್ಯವಸ್ತುವೂ ಇಲ್ಲ, ಭೋಗಿಸುವವನೂ ಇಲ್ಲ, ತೃಪ್ತಿಯೂ ಇಲ್ಲ, ಎಲ್ಲವೂ ಬ್ರಹ್ಮವಸ್ತುವೇ. ಎಲ್ಲವೂ ಎಂಬ ಶಬ್ದವೂ ಇಲ್ಲ, ಅರ್ಥವೂ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದರಿಂದ "ಎಲ್ಲವೂ"ಎಂಬ ಅನೇಕ ವಾಚಕ ಶಬ್ದವೂ ಇಲ್ಲ, ವ್ಯವಹಾರವೂ ಇಲ್ಲ. ॥೪೫॥

ಭೂತಭವಿಷ್ಯದ್ವರ್ತಮಾನಗಳೆನ್ನುವ ವ್ಯವಹಾರವು ಇಲ್ಲ, ಕಾರ್ಯವು ಇಲ್ಲ, ಸತ್ಯ, ಅಸತ್ಯ-ಎನ್ನುವ ಭೇದವೂ ಇಲ್ಲ. ಭೇದಕಾರಣವು ಇಲ್ಲ. ಗುಣ, ದುರ್ಗುಣ-ಎನ್ನುವ ಭೇದವು ಇಲ್ಲ. ಭೇದಕಾರಣವು ಇಲ್ಲ. ॥೪೬॥

ನಿರ್ಮಲತೆಯು ಇಲ್ಲ, ಕೊಳೆಯು ಇಲ್ಲ, ಮಾತನಾಡಿಸುವುದೂ ಇಲ್ಲ, ಮಾತನಾಡುವುದೂ ಇಲ್ಲ, ಬರವಣಿಗೆಯೂ ಇಲ್ಲ, ವಿವರಣವೂ ಇಲ್ಲ. ॥೪೭॥

ಪ್ರಬಲಂ ದುರ್ಬಲಂ ವಾಪಿ ಅಹಂ ಚ ತ್ವಂ ಚ ವಾ ಕ್ವಚಿತ್ ।
ಗ್ರಾಹ್ಯಮಗ್ರಾಹ್ಯಕಂ ವಾಪಿ ಉಪೇಕ್ಷ್ಯಂ ನಾತ್ಮನಃ ಕ್ವಚಿತ್ ॥೪೮॥

ತೀರ್ಥಂ ವಾ ಸ್ನಾನರೂಪಂ ವಾ ದೇವೋ ವಾ ದೇವಪೂಜನಂ ।
ಜನ್ಮ ವಾ ಮರಣಂ ಹೇತುರ್ನಾಸ್ತಿ ನಾಸ್ತಿ ನ ಕಿಂಚನ ॥೪೯॥

ಸತ್ಯಂ ವಾಽಸತ್ಯರೂಪಂ ವಾ ನಾಸ್ತಿ ನಾಸ್ತಿ ನ ಕಿಂಚನ ।
ಭಾಷ್ಯಂ ವಾ ಭಾಷಣಂ ವಾಪಿ ನಾಸ್ತಿ ನಾಸ್ತಿ ನ ಕಿಂಚನ ॥೫೦॥

ಮಾತರಃ ಪಿತರೋ ವಾಪಿ ದೇಹೋ ವಾ ನಾಸ್ತಿ ಕಿಂಚನ ।
ದೃಗ್ರೂಪಂ ದೃಶ್ಯರೂಪಂ ವಾ ನಾಸ್ತಿ ನಾಸ್ತಿ ನ ಕಿಂಚನ ॥೫೧॥

ಮಾಯಾಕಾರ್ಯಂ ಚ ಮಾಯಾ ವಾ ನಾಸ್ತಿ ನಾಸ್ತಿ ನ ಕಿಂಚನ ।
ಜ್ಞಾನಂ ವಾಜ್ಞಾನಭೇದಂ ವಾ ನಾಸ್ತಿ ನಾಸ್ತಿ ನ ಕಿಂಚನ ॥೫೨॥

ಸರ್ವಪ್ರಪಂಚಹೇಯತ್ವಂ ಪ್ರೋಕ್ತಂ ಪ್ರಕರಣಂ ಚ ತೇ ।
ಯಃ ಶೃಣೋತಿ ಸಕೃದ್ವಾಪಿ ಆತ್ಮಾಕಾರಂ ಪ್ರಪದ್ಯತೇ ॥೫೩॥

---

ದುರ್ಬಲ-ಬಲಿಷ್ಠ-ಗಳೆನ್ನುವ ವಸ್ತುಗಳೂ ಇಲ್ಲ, ನಾನು-ನೀನು ಎನ್ನುವುದೂ ಇಲ್ಲ. ಯೋಗ್ಯ-ಅಯೋಗ್ಯ ಎನ್ನುವುದೂ ಇಲ್ಲ, ಆದರ-ಅನಾದರಗಳೂ ಇಲ್ಲ. ॥೪೮॥

ತೀರ್ಥವೂ ಇಲ್ಲ, ಸ್ನಾನವೂ ಇಲ್ಲ, ದೇವರು ಇಲ್ಲ, ದೇವರಪೂಜೆಯು ಇಲ್ಲ. ಜನನವು ಇಲ್ಲ, ಮರಣವು ಇಲ್ಲ, ಜನನಮರಣಗಳಿಗೆ ಕಾರಣವು ಇಲ್ಲ. ॥೪೯॥

ಸತ್ಯವು ಇಲ್ಲ, ಅಸತ್ಯವು ಇಲ್ಲ, ಭಾಷ್ಯವು ಇಲ್ಲ, ಭಾಷಣವು ಇಲ್ಲ. ॥೫೦॥

ತಾಯಿಯು ಇಲ್ಲ, ತಂದೆಯು ಇಲ್ಲ, ನೋಟವು ಇಲ್ಲ, ನೋಡುವುದೂ ಇಲ್ಲ, ನೋಟಕ್ಕೆವಿಷಯವೂ ಇಲ್ಲ, ಬ್ರಹ್ಮನ ಹೊರತಾಗಿ ಪ್ರಪಂಚದಲ್ಲಿ ಏನೂ ಇಲ್ಲ. ॥೫೧॥

ಮಾಯೆಯು ಕಾರ್ಯವೆನ್ನುವ ಈ ಜಗತ್ತು ಇಲ್ಲ, ಮಾಯೆಯೂ ಇಲ್ಲ, ಜ್ಞಾನವೂ ಇಲ್ಲ, ಜ್ಞಾನಭೇದ (ಅಜ್ಞಾನ)ವೂ ಇಲ್ಲ. ॥೫೨॥

ಎಲೈ ನಿದಾಘಮುನಿಯೇ, ಹೀಗೆ ನಿನಗೆ ಪ್ರಪಂಚವೆಲ್ಲವೂ ಹೇಯ, ಅಂದರೆ ವಸ್ತುತಃ ಇಲ್ಲ, ಬ್ರಹ್ಮವಸ್ತುವೊಂದೇ ಇರುವುದು ಎಂಬ ವಿಷಯವನ್ನು ವಿವರಿಸಿರು

॥ ಸ್ಕಂದ ಉವಾಚ ॥

ಮಾಯಾ ಸಾ ತ್ರಿಗುಣಾ ಗಣಾಧಿಪಗುರೋರೇಣಾಂಕಚೂಡಾಮಣೇಃ
ಪಾದಾಂಭೋಜಸಮರ್ಚನೇನ ವಿಲಯಂ ಯಾತ್ಯೇವ ನಾಸ್ತ್ಯನ್ಯಥಾ ।
ವಿದ್ಯಾ ಹೃದ್ಯತಮಾ ಸುವಿದ್ಯುದಿವ ಸಾ ಭಾತ್ಯೇವ ಹೃತ್ಪಂಕಜೇ
ಯಸ್ಯಾನಲ್ಪತಪೋಭಿರುಗ್ರಕರುಣಾದ್ಯುಕ್ತ್ತಸ್ಯ ಮುಕ್ತಿಃ ಸ್ಥಿರಾ ॥೫೪॥

ಇತಿ ಶ್ರೀಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ
ಏಕವಿಂಶತಿತಮೋಧ್ಯಾಯಃ

---

ವೆನು, ಈ ಗಹನತತ್ವವನ್ನು ಒಂದು ಬಾರಿ ಕೇಳಿದರೂ ಮುಕ್ತಿಯು ದೊರೆಯುವುದು. ॥೫೩॥

ಮಾಯೆಯು ಸತ್ತ್ವರಜಸ್ತಮೋಗುಣಗಳಿಂದ ತುಂಬಿದ್ದು ಅಸತ್ಯವಾದೀ ಜಗತ್ತನ್ನು ತೋರಿಸುತ್ತಿರುವುದು. ಚಂದ್ರಶೇಖರನಾದ ಗಣೇಶ ಪಿತನಾದ ಶಿವನನ್ನು ಭಕ್ತಿಯಿಂದ ಆರಾಧಿಸಿದರೆ ಆ ಮಾಯೆಯು ಕೂಡಲೇ ನಾಶವಾಗುವುದು, ಮತ್ತು ವಿದ್ಯುತ್ತಿನ ಪ್ರಭೆಯಂತೆ ಹೃದಯಕಮಲದಲ್ಲಿ ಬ್ರಹ್ಮಜ್ಞಾನಪ್ರಭೆಯು ಆಗ ಮೂಡುವುದು. ಆ ಪರಮೇಶ್ವರನ ಅನುಗ್ರಹದಿಂದ ಕೂಡಲೇ ಮುಕ್ತಿಯು ಸುಲಭವಾಗಿ ಕರಗತವಾಗುವುದು. ಇದೇ ಸತ್ಯವಾದದ್ದು. ಎಂದು ಋಭುಮುನಿಯು ನುಡಿದನು.॥೫೪॥

ಇಲ್ಲಿಗೆ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ದ್ವಾವಿಂಶತಿತಮೋಽಧ್ಯಾಯಃ

॥ ಋಭುರುವಾಚ ॥

ವಕ್ಷ್ಯೇ ಬ್ರಹ್ಮಮಯಂ ಸರ್ವಂ ನಾಸ್ತಿ ಸರ್ವಂ ಜಗನ್ಮೃಷಾ ।
ಅಹಂ ಬ್ರಹ್ಮ ನ ಮೇ ಚಿಂತಾ ಅಹಂ ಬ್ರಹ್ಮ ನ ಮೇ ಜಡಂ ॥೧॥

ಅಹಂ ಬ್ರಹ್ಮ ನ ಮೇ ದೋಷೋ ಅಹಂ ಬ್ರಹ್ಮ ನ ಮೇ ಫಲಂ ।
ಅಹಂ ಬ್ರಹ್ಮ ನ ಮೇ ವಾರ್ತಾ ಅಹಂ ಬ್ರಹ್ಮ ನ ಮೇ ದ್ವಯಂ ॥೨॥

ಅಹಂ ಬ್ರಹ್ಮ ನ ಮೇ ನಿತ್ಯಮಹಂ ಬ್ರಹ್ಮ ನ ಮೇ ಗತಿಃ ।
ಅಹಂ ಬ್ರಹ್ಮ ನ ಮೇ ಮಾತಾ ಅಹಂ ಬ್ರಹ್ಮ ನ ಮೇ ಪಿತಾ ॥೩॥

---

## ಇಪ್ಪತ್ತೆರಡನೆಯ ಅಧ್ಯಾಯ

ಎಲೈ ನಿದಾಘಮುನಿಯೇ ಕೇಳು. ಈಗ "ಎಲ್ಲವೂ ಬ್ರಹ್ಮಮಯವಾದುದು, ಜಗತ್ತೆಂಬುದೇ ಇಲ್ಲ, ಕಾಣಿಸುವುದೆಲ್ಲವೂ ಅಸತ್ಯ" ವೆಂಬುದನ್ನು ಹೇಳುವೆನು. ನಾನೇ ಬ್ರಹ್ಮನು, ನನಗಾವ ಚಿಂತೆಯೂ ಇಲ್ಲ, ನಾನು ಜಡನಲ್ಲ, ಜಡವಸ್ತುವು ನನಗಿಲ್ಲ.॥೧॥

ನಾನೇ ಬ್ರಹ್ಮನು ನನಗೆ ಯಾವ ದೋಷವೂ ಇಲ್ಲ, ನಾನೇ ಬ್ರಹ್ಮ, ನನಗಾವ ಫಲವೂ ಇಲ್ಲ, ನನಗಾವ ವಾರ್ತೆಯೂ ಇಲ್ಲ, ನನಗಾವ ಭೇದವೂ ಇಲ್ಲ. ॥೨॥

ನಾನೇ ಬ್ರಹ್ಮನು, ನನ್ನ ಹೊರತಾಗಿ ನಿತ್ಯವಸ್ತುವೆಂಬುದಿಲ್ಲ, ನನಗಾವ ಗತಿಯೂ ಇಲ್ಲ, ನನಗೆ ತಾಯಿಯು ಇಲ್ಲ, ತಂದೆಯು ಇಲ್ಲ. ॥೩॥

ಅಹಂ ಬ್ರಹ್ಮ ನ ಮೇ ಕಿಂಚಿತ್ ಅಹಂ ಬ್ರಹ್ಮ ನ ಮೇ ಮಹೀ ।
ಅಹಂ ಬ್ರಹ್ಮ ನ ಮೇ ಸೋಽಯಮಹಂ ವೈಶ್ವಾನರೋ ನ ಹಿ ॥೪॥

ಅಹಂ ಬ್ರಹ್ಮ ಚಿದಾಕಾಶಮಹಂ ಬ್ರಹ್ಮ ನ ಸಂಶಯಃ ।
ಅಹಂ ಬ್ರಹ್ಮ ನ ಸಂದೇಹ ಅಹಮೇವ ಪರಾಯಣಂ ॥೫॥

ಅಹಮೇವ ಸದಾ ಬ್ರಹ್ಮ ಅಹಮೇವ ಪರಾತ್ಪರಃ ।
ಸಿದ್ಧಚ್ಚೈತನ್ಯಮೇವಾಹಂ ಶುದ್ಧಬ್ರಹ್ಮ ನ ಸಂಶಯಃ ॥೬॥

ಸರ್ವಾಂತರೋಽಹಂ ಪೂರ್ಣಾತ್ಮಾ ಸರ್ವಾಂತರಮನೋಽಂತರಂ ।
ಅಹಮೇವ ಶರೀರಾಂತರಹಮೇವ ಸ್ಥಿರಃ ಸದಾ ॥೭॥

ಏವಂ ವಿಜ್ಞಾನವಾನ್ ಮುಕ್ತೋ ಏವಂ ಮೋಕ್ಷಂ ಸುದುರ್ಲಭಂ ।
ಅನೇಕಶತಸಹಸ್ರೇಷು ಏಕ ಏವ ವಿಮುಕ್ತವಾನ್ ॥೮॥

ತಸ್ಯ ದರ್ಶನಮಾತ್ರೇಣ ಪಿತರಸ್ತೃಪ್ತಿಮಾಗತಾಃ ।
ಜ್ಞಾನಿನೋ ದರ್ಶನಂ ಪುಣ್ಯಂ ಸರ್ವತೀರ್ಥಾವಗಾಹನಂ ॥೯॥

---

ನಾನೇ ಬ್ರಹ್ಮನು, ನನ್ನ ಹೊರತಾಗಿ ಏನೂ ಇಲ್ಲ, ಭೂಮಿಯೂ ಇಲ್ಲ, "ಅವನು, ಇವನು-ಎಂಬುವ ವ್ಯವಹಾರಗಳೂ ಇಲ್ಲ, ನಾನು ಅಗ್ನಿಯಲ್ಲ. ॥೪॥

ಜ್ಞಾನಾಕಾಶಸ್ವರೂಪನಾದ ಬ್ರಹ್ಮನು ನಾನು, ಇದರಲ್ಲಿ ಸಂಶಯವಿಲ್ಲ, ನಾನೇ ಎಲ್ಲಕ್ಕೂ ಆಧಾರನು, ಗತಿಯು. ॥೫॥

ನಾನು ಯಾವಾಗಲೂ ಬ್ರಹ್ಮನು, ನಾನೇ ಸರ್ವೋತ್ತಮನು, ಸದಾ ಸಿದ್ಧವಾಗಿರುವ ಚೈತನ್ಯರೂಪನು ನಾನು, ಶುದ್ಧಬ್ರಹ್ಮನು ನಾನು. ॥೬॥

ನಾನು ಎಲ್ಲೆಡೆಯಲ್ಲೂ ಅಂತರ್ಯಾಮಿಯಾಗಿರುವೆನು, ಅತಿ ಅಂತರಂಗವಾದ ಮನಸ್ಸಿನಲ್ಲೂ ನಾನಿರುವೆನು, ಎಲ್ಲ ಶರೀರಗಳಲ್ಲೂ ನಾನೇ ಇರುವೆನು. ॥೭॥

ಮೇಲೆ ಹೇಳಿದಂತಹ ಜ್ಞಾನವುಳ್ಳವನು ಮುಕ್ತನಾಗುವನು, ಇಂತಹ ಜ್ಞಾನಿಯು ಅನೇಕ ಕೋಟಿ ಜನಗಳಲ್ಲಿ ಓರ್ವನು ಮಾತ್ರ ಆಗಬಲ್ಲನು. ॥೮॥

ಇಂತಹ ಜ್ಞಾನಿಯ ದರ್ಶನಮಾಡಿದರೂ ಸಾಕು. ಅವನ ಪಿತೃಗಳು ತೃಪ್ತಿ ಹೊಂದುವರು. ಜ್ಞಾನಿಯ ದರ್ಶನವು ಪುಣ್ಯಕರವಾದುದು ಸಕಲ ತೀರ್ಥಗಳಲ್ಲೂ, ಸ್ನಾನಮಾಡಿದಷ್ಟು ಪವಿತ್ರತಮವಾದುದು. ॥೯॥

ಜ್ಞಾನಿನಂ ಚಾರ್ಚನೇನ್ನೈವ ಜೀವನ್ಮುಕ್ತೋ ಭವೇನ್ನರಃ ।
ಜ್ಞಾನಿನೋ ಭೋಜನೇ ದಾನೇ ಸದ್ಯೋ ಮೋಕ್ಷೋ ಭವೇತ್ಪರಃ ॥೧೦॥

ಅಹಂ ಬ್ರಹ್ಮ ನ ಸಂದೇಹ ಅಹಮೇವ ಗುರುಃ ಪರಃ ।
ಅಹಂ ಶಾಂತೋಽಸ್ಮಿ ಬುದ್ಧೋಽಸ್ಮಿ ಅಹಮೇವ ಗುಣಾಂತರಃ ॥೧೧॥

ಗುಣಾತೀತೋ ಜನಾತೀತಃ ಪರಾತೀತೋ ಮನಃಪರಃ ।
ಪರತಃ ಪರತೋಽತೀತೋ ಬುದ್ಧ್ಯಧೀನೋ ನಸಾತ್ಪರಃ ॥೧೨॥

ಭಾಸಾತೀತೋ ಮನಾತೀತೋ ವೇದಾತೀತೋ ವಿದಃ ಪರಃ ।
ಶರೀರಾದೇಶ್ಚ ಪರತೋ ಜಾಗ್ರತ್ಸ್ವಪ್ನಸುಷುಪ್ತಿತಃ ॥೧೩॥

ಅವ್ಯಕ್ತಾತ್ಪರತೋಽತೀತಃ ಇತ್ಯೇವಂ ಜ್ಞಾನನಿಶ್ಚಯಃ ।
ಕಶ್ಚಿದೇತತ್ಪರಿತ್ಯಜ್ಯ ಸರ್ವಂ ಸಂತ್ಯಜ್ಯ ಮೂಕವತ್ ॥೧೪॥

---

ಜ್ಞಾನಿಯನ್ನರ್ಚಿಸಿದವನೂ ಜೀವನ್ಮುಕ್ತನಾಗುವನು, ಜ್ಞಾನಿಗೆ ಭೋಜನವನ್ನು ನೀಡಿದರೂ ದಾನಾದಿಗಳನ್ನಿತ್ತರೂ ಸದ್ಯಃ ಮುಕ್ತನಾಗುವನು. ॥೧೦॥

ನಾನು ಬ್ರಹ್ಮನು, ಇದರಲ್ಲಿ ಸಂದೇಹವಿಲ್ಲ, ನಾನೇ ಪರಮಗುರುವು, ನಾನು ಶಾಂತನು, ಪ್ರಬುದ್ಧನು, ಎಲ್ಲ ಗುಣಗಳಲ್ಲೂ ನಾನಿರುವೆನು. ॥೧೧॥

ಗುಣಗಳನ್ನು ಮೀರಿದ ನಿರ್ಗುಣನು ನಾನು, ಎಲ್ಲಕ್ಕಿಂತಲೂ ವಿಜಾತೀಯನು ನಾನು, ಮನಸ್ಸಿಗಿಂತ ಬೇರೆಯಾದವನು ನಾನು, ಬುದ್ಧಿಗೆ ನಾನು ಅಧೀನವಲ್ಲವು, ಬುದ್ಧಿಗೂ ಅಗೋಚರನು ನಾನು. ॥೧೨॥

ನನ್ನನ್ನು ಸೂರ್ಯಾದಿ ಯಾವ ವಸ್ತುಗಳೂ ಪ್ರಕಾಶಪಡಿಸಲಾರವು, ಮನವು ತಿಳಿಯಲಾರದು, ವೇದವು ತಿಳಿಸಲಾರದು, ಶರೀರವು ನಾನಲ್ಲ, ಜಾಗ್ರತ್ಸ್ವಪ್ನಸುಷುಪ್ತಿಗಳೂ ನಾನಲ್ಲ, ಅವು ನನಗಿಲ್ಲ. ॥೧೩॥

ವ್ಯಕ್ತವಲ್ಲದ ಮಾಯೆಗೂ ನಾನು ಅಧೀನನಲ್ಲ-ಅದೇ ನಿಜವಾದ ಜ್ಞಾನವು, ಹೀಗೆ ಜ್ಞಾನಿಯಾಗಿ ಯಾವನು ಎಲ್ಲವನ್ನೂ ಬಿಟ್ಟು ಮೂಕನಂತೆ ಪರಬ್ರಹ್ಮವಸ್ತುವನ್ನು ಚಿಂತಿಸುವನೋ ಅವನು ಕೂಡಲೇ ಮುಕ್ತನಾಗುವನು. ॥೧೪॥

ಜ್ಞಾನಿನೋ ಮಹಿಮಾ ಕಿಂಚಿದಣುಮಾತ್ರಮಪಿ ಸ್ಫುಟಂ । ॥೧೫॥
ಹರಿಣಾಪಿ ಹರೇಣಾಪಿ ಬ್ರಹ್ಮಣಾಪಿ ಗುರೋರಪಿ ।
ನ ಶಕ್ಯತೇ ವರ್ಣಯಿತುಂ ಕಲ್ಪಕೋಟಿಶತೈರಪಿ ॥೧೬॥

ಅಹಂ ಬ್ರಹ್ಮೇತಿ ಯದ್ಜ್ಞಾನಂ ತ್ರಿಷು ಲೋಕೇಷು ದುರ್ಲಭಂ ।
ವಿವೇಕಿನಂ ಮಹಾತ್ಮಾನಂ ಬ್ರಹ್ಮಮಾತ್ರೇಣಾವಸ್ಥಿತಂ ॥೧೭॥

ದ್ರಷ್ಟುಂ ಚ ಭಾಷಿತುಂ ವಾಪಿ ದುರ್ಲಭಂ ಪಾದಸೇವನಂ ।
ಕದಾಚಿತ್ಪಾದತೀರ್ಥೇನ ಸ್ನಾತಶ್ಚೇತ್ ಬ್ರಹ್ಮ ಏವ ಸಃ ॥೧೮॥

ಸರ್ವಂ ಮಿಥ್ಯಾ ನಸಂದೇಹಃ ಸರ್ವಂ ಬ್ರಹ್ಮೈವ ಕೇವಲಂ ।
ಏತತ್ಪ್ರಕರಣಂ ಪ್ರೋಕ್ತಂ ಸರ್ವಸಿದ್ಧಾಂತಸಂಗ್ರಹಂ ॥೧೯॥

ದುರ್ಲಭಂ ಯಃಪಠೇದ್ಭಕ್ತ್ಯಾ ಬ್ರಹ್ಮ ಸಂಪದ್ಯತೇ ನರಃ ।
ವಕ್ಷ್ಯೇ ಬ್ರಹ್ಮಮಯಂ ಸರ್ವಂ ನಾನ್ಯತ್ಸರ್ವಂ ಜಗನ್ಮೃಷಾ ॥೨೦॥

---

ಅಂತಹ ಜ್ಞಾನಿಯ ಮಹಿಮೆಯನ್ನು ಸ್ವಲ್ಪಮಾತ್ರವೂ ಸಹ ವರ್ಣಿಸಲ ಸಾಧ್ಯವು. ಹರಿಯಾಗಲೀ ಹರನಾಗಲೀ ಬ್ರಹ್ಮನಾಗಲೀ ಕೋಟಿಕಲ್ಪಗಳಿಂದಲೂ ಅವನನ್ನು ವರ್ಣಿಸಲಾರರು. ॥೧೫-೧೬॥

"ನಾನೇ ಬ್ರಹ್ಮನು" ಎಂಬ ಅನುಭವವು ಸಾಮಾನ್ಯರಿಗೆ ಸುಲಭವಲ್ಲ, ಕೋಟಿ-ಜನ್ಮಗಳ ಪುಣ್ಯವಶದಿಂದ ಬಂದೀತು, ಇಂತಹ ಜ್ಞಾನಿಯಾದ ಮಹಾತ್ಮನನ್ನು ನೋಡುವುದೂ ಮಾತನಾಡಿಸುವುದೂ ಪಾದಸೇವೆಯೂ ಸಹ ದುರ್ಲಭವು. ಅದೃಷ್ಟ ವಶಾತ್ ಜ್ಞಾನಿಯ ಪಾದೋದಕ ಸ್ಪರ್ಶವು ಲಭಿಸಿದರೆ ಮಾನವನು ಕೂಡಲೇ ಮುಕ್ತನಾಗುವನು. ॥೧೭-೧೮॥

ಎಲ್ಲವೂ ಮಿಥ್ಯೆ, ಬ್ರಹ್ಮವಸ್ತುವೊಂದೇ ಸತ್ಯವಾಗಿ ಇರುವುದು-ಎಂಬ ವಿಷಯ ವನ್ನು ಎಲ್ಲ ಸಿದ್ಧಾಂತಗಳ ಸಾರವನ್ನು ಸಂಗ್ರಹಿಸಿ ನಿರೂಪಿಸಿರುವೆನು. ॥೧೯॥

ಅತಿಮಹತ್ತಾದ ಈ ವಿಷಯವನ್ನು ಭಕ್ತಿಯಿಂದ ಪಠಿಸುವವನೂ ಸಹ ಬ್ರಹ್ಮ ನಾಗುವನು, ಈಗ "ಎಲ್ಲವೂ ಬ್ರಹ್ಮಮಯವು, ಬ್ರಹ್ಮನ ಹೊರತಾಗಿ ಕಾಣುವುದೆಲ್ಲವೂ ಸುಳ್ಳು" ಎಂಬ ವಿಷಯವನ್ನು ಮತ್ತೆ ನಿರೂಪಿಸುವೆನು. ॥೨೦॥

ಬ್ರಹ್ಮೈವ ಜಗದಾಕಾರಂ ಬ್ರಹ್ಮೈವ ಪರಮಂ ಪದಂ ।
ಅಹಮೇತತ್ಪರಂ ಬ್ರಹ್ಮ ಅಹಮಿತ್ಯಪಿ ವರ್ಜಿತಃ ॥೨೧॥

ಸರ್ವವರ್ಜಿತಚಿನ್ಮಾತ್ರಂ ಸರ್ವವರ್ಜಿತಚೇತನಃ ।
ಸರ್ವವರ್ಜಿತಶಾಂತಾತ್ಮಾ ಸರ್ವಮಂಗಳವಿಗ್ರಹಃ ॥೨೨॥

ಅಹಂ ಬ್ರಹ್ಮ ಪರಂ ಬ್ರಹ್ಮ ಅಸನ್ನೇದಂ ನ ಮೇ ನಮೇ ।
ನ ಮೇ ಭೂತಂ ಭವಿಷ್ಯಚ್ಚ ನ ಮೇ ವರ್ಣಂ ನ ಸಂಶಯಃ ॥೨೩॥

ಬ್ರಹ್ಮೈವಾಹಂ ನ ಮೇ ತುಚ್ಛಂ ಅಹಂ ಬ್ರಹ್ಮ ಪರಂ ತಪಃ ।
ಬ್ರಹ್ಮರೂಪಮಿದಂ ಸರ್ವಂ ಬ್ರಹ್ಮರೂಪಮನಾಮಯಂ ॥೨೪॥

ಬ್ರಹ್ಮೈವ ಭಾತಿ ಭೇದೇನ ಬ್ರಹ್ಮೈವ ನ ಪರಃ ಪರಃ ।
ಆತ್ಮೈವ ದ್ವೈತವದ್ಭಾತಿ ಆತ್ಮೈವ ಪರಮಂ ಪದಂ ॥೨೫॥

---

ಬ್ರಹ್ಮವಸ್ತುವೇ ಜಗತ್ತಿನ ರೂಪವಾಗಿ ತೋರುವುದು, ಬ್ರಹ್ಮವಸ್ತುವೇ ಪರಮಪದವು, ಆ ಬ್ರಹ್ಮವಸ್ತುವು ನಾನು, ಆದರೆ ನಾನು-ಎಂಬುದೂ ನನಗಿಲ್ಲ. ॥೨೧

ಯಾವ ವಿಕಾರಗಳೂ ಇಲ್ಲದ ಚೈತನ್ಯವು ನಾನು, ಜ್ಞಾನಮೂರ್ತಿಯು ನಾನು, ಶಾಂತಸ್ವರೂಪನು ನಾನು, ಸರ್ವಮಂಗಳರೂಪನು ನಾನು. ॥೨೨॥

ನಾನೇ ಬ್ರಹ್ಮವಸ್ತುವು, ಅಸತ್ಯವಾದೀ ವಸ್ತುಗಳಾವುವೂ ನನಗಿಲ್ಲ, ಭೂತ ಭವಿಷ್ಯತ್ತುಗಳೆಂಬುವೂ ನನಗಿಲ್ಲ, ಜಾತಿಕುಲಗೋತ್ರಗಳು ನನಗಿಲ್ಲ. ॥೨೩॥

ಬ್ರಹ್ಮವಸ್ತುವೇ ನಾನು ನನ್ನ ಹೊರತಾಗಿರುವುದೆಲ್ಲವೂ ಅಸತ್ಯ. ಜ್ಞಾನ ಸ್ವರೂಪನು ನಾನು, ಈ ಜಗತ್ತೆಲ್ಲವೂ ಬ್ರಹ್ಮಸ್ವರೂಪವು. ಬ್ರಹ್ಮನ ಹೊರತಾಗಿ ಯಾವುದೂ ಇಲ್ಲ. ಬ್ರಹ್ಮಸ್ವರೂಪವು ಅವಿನಾಶಿಯಾದುದು. ॥೨೪॥

ಬ್ರಹ್ಮವಸ್ತುವೇ ಮಾಯೆಯಿಂದ ಅನೇಕ ವಿಧವಾಗಿ ತೋರುವುದು, ಬ್ರಹ್ಮ ವಸ್ತುವೇ ಆತ್ಮನು, ಆತ್ಮನೇ ಮಾಯೆಯಿಂದ ಭಿನ್ನಭಿನ್ನವಾಗಿ ತೋರುವನು. ॥೨೫॥

ಬ್ರಹ್ಮೈವ ಭೇದರಹಿತೋ ಭೇದ ಏವ ಮಹದ್ಭಯಂ ।
ಆತ್ಮೈವಾಹಂ ನಿರ್ಮಲೋಽಹಮಾತ್ಮೈವ ಭುವನತ್ರಯಂ ॥೨೬॥

ಆತ್ಮೈವ ನಾನ್ಯತ್ಸರ್ವತ್ರ ಸರ್ವಂ ಬ್ರಹ್ಮೈವ ನಾಯಕಃ ।
ಅಹಮೇವ ಸದಾ ಭಾತಿ ಬ್ರಹ್ಮೈವಾಸ್ಮಿ ಪರೋಽಸ್ಮ್ಯಹಂ ॥೨೭॥

ನಿಶ್ಚಯೋಽಸ್ಮಿ ಪರಂ ಬ್ರಹ್ಮ ಸತ್ಯೋಽಸ್ಮಿ ಸಕಲೋಽಸ್ಮ್ಯಹಂ ।
ಅಕ್ಷರೋಽಸ್ಮಿ ಪರಂ ಬ್ರಹ್ಮ ಶಿವೋಽಸ್ಮಿ ಶಿಖರೋಽಸ್ಮ್ಯಹಂ ॥೨೮॥

ನಿರ್ಮಲೋಽಸ್ಮಿ ಪರಂ ಬ್ರಹ್ಮ ಕಾರ್ಯಾಕಾರ್ಯವಿವರ್ಜಿತಃ ।
ಸದಾ ಶುದ್ಧೈಕರೂಪೋಽಸ್ಮಿ ಸದಾ ಚೈತನ್ಯಮಾತ್ರಕಃ ॥೨೯॥

ಸದಾ ಸಮಾನರೂಪೋಽಸ್ಮಿ ಸದಾ ಸತ್ತಾಪ್ರಕಾಶಕಃ ॥೩೦॥

ಅಕ್ಷರೋಽಸ್ಮಿ ಪರಂ ಬ್ರಹ್ಮ ಶಿವೋಽಸ್ಮಿ ಶಿಖರೋಽಸ್ಮ್ಯಹಂ ।
ಸದಾ ಸಿದ್ಧಾಂತಶುದ್ಧೋಽಸ್ಮಿ ಸದಾ ಪಾವನಮಂಗಳಃ ॥೩೧॥

---

ಬ್ರಹ್ಮನಿಗೆ ಯಾವ ಭೇದವೂ ಇಲ್ಲ. ಭೇದವೇ ಮಹಾ ಭಯವು. ಆತ್ಮನು ನಾನು, ನಿರ್ಮಲನು, ಆತ್ಮನೇ ಮೂರುಲೋಕಗಳು. ॥೨೬॥

ಎಲ್ಲೆಡೆಯಲ್ಲೂ ಆತ್ಮನೇ ಇರುವವನು, ಇನ್ನಾರೂ ಇಲ್ಲ. ಆತ್ಮನೇ ಬ್ರಹ್ಮ, ಬ್ರಹ್ಮವಸ್ತುವೇ ನಾನು, ಸರ್ವಶ್ರೇಷ್ಠನು ನಾನು. ॥೨೭॥

ನಾನೇ ಪರಬ್ರಹ್ಮನು, ಸರ್ವರೂಪನು ನಾನು, ಸತ್ಯನು, ನಾಶವಿಲ್ಲದ ಪರಬ್ರಹ್ಮನು ನಾನು, ಮಂಗಳಸ್ವರೂಪನು ನಾನು, ಈ ಇಂದ್ರಿಯಗಳಿಗೆ ನಿಲುಕದ ವ್ಯಾಪಕವಾದ ಮಹಾಸ್ವರೂಪನು ನಾನು. ॥೨೮॥

ನಿರ್ಮಲನಾದ ಪರಬ್ರಹ್ಮನು ನಾನು, ಕಾರ್ಯ ಮತ್ತು ಅಕಾರ್ಯಗಳು ನನಗಿಲ್ಲ. ॥೨೯॥

ಎಲ್ಲರಲ್ಲಿಯೂ ಒಂದೇ ವಿಧವಾಗಿರುವೆನು, ಎಲ್ಲ ಅಸತ್ಯವಸ್ತುಗಳ ಸತ್ತೆಯು ನಾನು. ಶುದ್ಧನು ನಾನು, ಪರಮಪವಿತ್ರನು ನಾನು, ಮಂಗಳಮೂರ್ತಿಯು ನಾನು. ನಾಶರಹಿತನೂ, ಶಾಂತನೂ, ಬ್ರಹ್ಮವಸ್ತುವೂ ನಾನೇ. ॥೩೦-೩೧॥

ಏವಂ ನಿಶ್ಚಿತವಾನ್ ಮುಕ್ತ ಏವಂ ನಿತ್ಯಪರೋ ವರಃ ।
ಏವಂ ಭಾವನಯಾ ಯುಕ್ತಃ ಪರಂ ಬ್ರಹ್ಮೈವ ಸರ್ವದಾ ॥೩೨॥

ಏವಂ ಬ್ರಹ್ಮಾತ್ಮವಾನ್ ಜ್ಞಾನೀ ಬ್ರಹ್ಮಾಹಮಿತಿ ನಿಶ್ಚಯಃ ।
ಸ ಏವ ಪುರುಷೋಲೋಕೇ ಬ್ರಹ್ಮಾಹಮಿತಿ ನಿಶ್ಚಿತಃ ॥೩೩॥

ಸ ಏವ ಪುರುಷೋ ಜ್ಞಾನೀ ಜೀವನ್ಮುಕ್ತಃ ಸ ಆತ್ಮವಾನ್ ।
ಬ್ರಹ್ಮೈವಾಹಂ ಮಹಾನಾತ್ಮಾ ಸಚ್ಚಿದಾನಂದವಿಗ್ರಹಃ ॥೩೪॥

ನಾಹಂ ಜೀವೋ ನ ಮೇ ದೇಹೋ ನಾಹಂ ಚಿಂತಾ ನ ಮೇ ಮನಃ ।
ನಾಹಂ ಮಾಂಸಂ ನಮೇಽಸ್ಥೀನಿ ನಾಹಂಕಾರಕಲೇಬರಃ ॥೩೫॥

ನ ಪ್ರಮಾತಾ ನಮೇಯಂ ವಾ ನಾಹಂ ಸರ್ವಪರೋಽಸ್ಮ್ಯಹಂ ।
ಸರ್ವದಾ ಬ್ರಹ್ಮಮಾತ್ರೋಽಹಂ ನ ರಸೋಽಹಂ ಸದಾಶಿವಃ ॥೩೬॥

---

ಹೀಗೆ ನಿಶ್ಚಯವುಳ್ಳವನು, ನಿತ್ಯವೂ ಹೀಗೆ ಅನುಸಂಧಾನಮಾಡುವವನು, ಹೀಗೆ ಸದಾ ಭಾವಿಸುವವನು ತಪ್ಪದೇ ಬ್ರಹ್ಮನಾಗುವನು. ॥೩೨॥

"ಬ್ರಹ್ಮವಸ್ತುವೇ ನಾನು" ಎಂದು ನಿಶ್ಚಯವುಳ್ಳವನೇ ಜ್ಞಾನಿಯು. ಅವನೇ ಲೋಕದಲ್ಲಿ ಉತ್ತಮ ಪುರುಷನು. "ಬ್ರಹ್ಮವು ನಾನು" ಎನ್ನುವುದೇ ನಿಜವಾದ ಜ್ಞಾನವು. ಮಿಕ್ಕುದೆಲ್ಲ ಜ್ಞಾನಾಭಾಸವು. ॥೩೩॥

ಹೀಗೆ ಬ್ರಹ್ಮಾತ್ಮಾನುಭವವುಳ್ಳವನೇ ಜ್ಞಾನಿಯು, ಜೀವನ್ಮುಕ್ತನು, ನಾನು ಸತ್ಯಜ್ಞಾನಾನಂದಸ್ವರೂಪವಾದ ಬ್ರಹ್ಮವಸ್ತುವು. ॥೩೪॥

ನಾನು ಜೀವನಲ್ಲ, ನನಗೆ ದೇಹವಿಲ್ಲ, ದೇಹವು ನಾನಲ್ಲ, ಮನವು ನನಗಿಲ್ಲ ನಾನು ಮಾಂಸವಲ್ಲ, ಮಾಂಸವು ನನಗಿಲ್ಲ, ಎಲುಬುಗಳೂ ನನಗಿಲ್ಲ, ಅಹಂಕಾರವು ನನಗಿಲ್ಲ, ಸೂಕ್ಷ್ಮಕಾರಣದೇಹಗಳೂ ನನ್ನಲ್ಲಿಲ್ಲ. ॥೩೫॥

ನಾನು ಪ್ರಮಾಣಿಸುವವನಲ್ಲ, ಪ್ರಮಾಣವು ನನಗಿಲ್ಲ, ಪ್ರಮಾಣವಿಷಯವು ಇಲ್ಲ, ರಸವು ನಾನಲ್ಲ. ಯಾವಾಗಲೂ ಬ್ರಹ್ಮಸ್ವರೂಪನು ನಾನು. ॥೩೬॥

ನ ಪ್ರಾಣೋಽಹಂ ನ ಗಂಧೋಽಹಂ ನ ಚಿಹ್ನೋಽಯಂ ನ ಮೇ ಪ್ರಿಯಃ ।
ನಾಹಂ ಜೀವೋ ರಸೋ ನಾಹಂ ವರುಣೋ ನ ಚ ಗೋಲಕಃ ॥೩೭॥

ಬ್ರಹ್ಮೈವಾಹಂ ನ ಸಂದೇಹೋ ನಾಮರೂಪೇ ನ ಕಿಂಚನ ।
ನ ಶ್ರೋತ್ರೋಽಹಂ ನ ಶಬ್ದೋಽಹಂ ನ ದಿಶೋಽಹಂ ನ ಸಾಕ್ಷಿಕಃ ॥೩೮॥

ನಾಹಂ ನತ್ವಂ ನಚ ಸ್ವರ್ಗೋ ನಾಹಂ ವಾಯುರ್ನ ಸಾಕ್ಷಿಕಃ ।
ವಾಯುರ್ನಾಹಂ ವಿಸರ್ಗೋ ನ ನ ಮೃತ್ಯುರ್ನಚ ಸಾಕ್ಷಿಕಃ ॥೩೯॥

ಗುಹ್ಯಂ ನಾಹಂ ನಚಾನಂದೋ ನ ಪ್ರಜಾ ಪತಿದೇವತಾ ।
ಸರ್ವಂ ಮಿಥ್ಯಾ ನ ಸಂದೇಹಃ ಸರ್ವಂ ಬ್ರಹ್ಮೈವ ಕೇವಲಂ ॥೪೦॥

ನಾಹಂ ಮನೋ ನ ಸಂಕಲ್ಪೋ ನ ಚಂದ್ರೋ ನಚ ಸಾಕ್ಷಿಕಃ ।
ವಾಯುರ್ನಾಹಂ ವಿಸರ್ಗೋನ ಸರ್ವಂ ಬ್ರಹ್ಮೈವ ಕೇವಲಂ ॥೪೧॥

---

ಪ್ರಾಣವು ನಾನಲ್ಲ. ಗಂಧವು ನಾನಲ್ಲ, ಯಾವ ಚಿಹ್ನವೂ ನನಗಿಲ್ಲ, ಬೇಕಾದವನು ಬೇಡದವನು-ಎನ್ನುವುದೂ ನನಗಿಲ್ಲ, ಜೀವನು ನಾನಲ್ಲ, ರಸವು ನಾನಲ್ಲ ವರುಣನು ನಾನಲ್ಲ, ಕಣ್ಣುಗುಡ್ಡೆಯು ನಾನಲ್ಲ. ॥೩೭॥

"ಬ್ರಹ್ಮವಸ್ತುವೇ ನಾನು" ಸಂಶಯವಿಲ್ಲ, ಹೆಸರು ರೂಪಗಳು ನನಗಿಲ್ಲ-ಕಿವಿಯು ನಾನಲ್ಲ, ಶಬ್ದವು ನಾನಲ್ಲ, ದಿಕ್ಕುಗಳು ನಾನಲ್ಲ, ಸಾಕ್ಷಿಯು ನಾನಲ್ಲ. ॥೩೮॥

ನಾನೂ ಇಲ್ಲ, ನೀನೂ ಇಲ್ಲ, ಸ್ವರ್ಗವೂ ಇಲ್ಲ. ವಾಯುವು ನಾನಲ್ಲ, ಸಾಕ್ಷಿಯೂ ನಾನಲ್ಲ, ವಿಸರ್ಗವು ನಾನಲ್ಲ, ಮೃತ್ಯುವು ನಾನಲ್ಲ, ಇವುಗಳಿಗೆ ಸಾಕ್ಷಿಯು ನಾನಲ್ಲ. ॥೩೯॥

ಜನನೇಂದ್ರಿಯವು ನಾನಲ್ಲ, ಅವುಗಳ ಆನಂದವು ನಾನಲ್ಲ, ಪತಿಯನ್ನನುಸರಿಸುವ ಪತ್ನಿಯು ನಾನಲ್ಲ, ತಂದೆಯನ್ನನುಸರಿಸುವ ಮಕ್ಕಳೂ ನಾನಲ್ಲ, ಎಲ್ಲವೂ ಮಿಥ್ಯೆ, ಎಲ್ಲವೂ ಬ್ರಹ್ಮವಸ್ತುವು,—ಈ ವಿಷಯದಲ್ಲಿ ಸಂದೇಹವಿಲ್ಲ. ॥೪೦॥

ನಾನು ಮನಸ್ಸಲ್ಲ, ಸಂಕಲ್ಪವಲ್ಲ, ಚಂದ್ರನಲ್ಲ, ವಾಯುವಲ್ಲ, ವಿಸರ್ಗವಲ್ಲ ಇವೆಲ್ಲಕ್ಕೆ ಸಾಕ್ಷಿಯೂ ಅಲ್ಲ, ಅದ್ವಿತೀಯಬ್ರಹ್ಮನು ನಾನು. ॥೪೧॥

ನಾಹಂ ಬುದ್ಧೀಂದ್ರಿಯೋ ಬ್ರಹ್ಮಾ ನಾಹಂ ನಿಶ್ಚಯರೂಪವಾನ್ ।
ನಾಹಂಕಾರಮಹಂರುದ್ರೋ ನಾಭಿಮಾನೋ ನ ಸಾಕ್ಷಿಕಃ ॥೪೨॥

ಚಿತ್ತಂ ನಾಹಂ ವಾಸುದೇವೋ ಧಾರಣಾ ನಾಹಮೀಶ್ವರಃ ।
ನಾಹಂ ವಿಶ್ವೋ ನ ಜಾಗ್ರದ್ವಾ ಸ್ಥೂಲದೇಹೋ ನ ಮೇ ಕ್ವಚಿತ್॥೪೩॥

ನ ಪ್ರಾತಿಭಾಸಿಕೋ ಜೀವೋ ನಚಾಹಂ ವ್ಯಾವಹಾರಿಕಃ ।
ನ ಪಾರಮಾರ್ಥಿಕೋ ಜೀವೋ ನಾಹಮನ್ನಮಯೋ ಜಡಃ ॥೪೪॥

ನ ಪ್ರಾಣಮಯಕೋಶೋಽಹಂ ನ ಮನೋಮಯಕೋಶವಾನ್ ।
ನ ವಿಜ್ಞಾನಮಯಃ ಕೋಶೋ ನಾನಂದಮಯಕೋಶವಾನ್ ॥೪೫॥

ಬ್ರಹ್ಮೈವಾಹಂ ನ ಸಂದೇಹೋ ನಾಮರೂಪಂ ನ ಕಿಂಚನ ।
ಏತಾವದುಕ್ತ್ವಾ ಸಕಲಂ ನಾಮರೂಪದ್ವಯಾತ್ಮಕಂ ॥೪೬॥

---

ಬುದ್ಧಿಯು ನಾನಲ್ಲ, ಬ್ರಹ್ಮನು ನಾನಲ್ಲ, ನಿಶ್ಚಯವು ನಾನಲ್ಲ, ಅಹಂಕಾರವು ನಾನಲ್ಲ, ರುದ್ರನು ನಾನಲ್ಲ, ಅಭಿಮಾನವು ನಾನಲ್ಲ, ಇವೆಲ್ಲಕ್ಕೆ ಸಾಕ್ಷಿಯೂ ನಾನಲ್ಲ. ॥೪೨॥

ಚಿತ್ತವು ನಾನಲ್ಲ. ಹರಿಯು ನಾನಲ್ಲ, ಧಾರಣಾಶಕ್ತಿಯು ನಾನಲ್ಲ. ಈಶ್ವರನು ನಾನಲ್ಲ, ಜಗತ್ತು ನಾನಲ್ಲ, ಜಾಗ್ರದವಸ್ಥೆಯು ನಾನಲ್ಲ. ಸ್ಥೂಲದೇಹವು ನನಗಿಲ್ಲ. ॥೪೩॥

ಪ್ರಾತಿಭಾಸಿಕನಾದ ಸ್ವಪ್ನಾವಸ್ಥೆಯುಳ್ಳ ಜೀವನು ನಾನಲ್ಲ. ವ್ಯವಹಾರಾವಸ್ಥೆಯವನೂ ಅಲ್ಲ, ಪಾರಮಾರ್ಥಿಕ ಜೀವನು ಅಲ್ಲ, ಜಡವಾದ ಅನ್ನಮಯಕೋಶವೂ ಅಲ್ಲ. ॥೪೪॥

ಪ್ರಾಣಮಯ ಮನೋಮಯ ವಿಜ್ಞಾನಮಯ ಆನಂದಮಯಕೋಶಗಳು ನಾನಲ್ಲ. ॥೪೫॥

ಬ್ರಹ್ಮವಸ್ತುವೇ ನಾನು, ಸಂದೇಹವಿಲ್ಲ, ನಾಮರೂಪಗಳು ಅಸತ್ಯವೆಂದು ತಿಳಿದು ಎಲೈ ಮುನಿಯೆ, ನಾಮರೂಪಾತ್ಮಕವಾದೀ ಪ್ರಪಂಚವನ್ನು ಒಣಕಟ್ಟಿಗೆ ಮಣ್ಣಿನ ಹೆಂಟೆಗಳಂತೆ ಅಸಾರವೆಂದು ಬಗೆದು ತ್ಯಜಿಸಿ ವಿರಕ್ತನಾಗು ॥೪೬॥

ಸರ್ವಂ ಕ್ಷಣೇನ ವಿಸ್ಮೃತ್ಯ ಕಾಷ್ಠಲೋಷ್ಠಾದಿವತ್ ತ್ಯಜ ।
ಏತತ್ಸರ್ವಮಸನ್ನಿತ್ಯಂ ಸದಾ ವಂಧ್ಯಾಕುಮಾರವತ್ ॥೪೭॥

ಶಶಶೃಂಗವದೇವೇದಂ ಶಶಶೃಂಗವದೇವ ತತ್ ।
ಆಕಾಶಪುಷ್ಪಸದೃಶಂ ಯಥಾ ಮರುಮರೀಚಿಕಾ ॥೪೮॥

ಗಂಧರ್ವನಗರೇ ಯದ್ವದಿಂದ್ರಜಾಲವದೇವ ಹಿ । .
ಅಸತ್ಯಮೇವ ಸತತಂ ಪಂಚರೂಪಕಮಿಷ್ಯತೇ ॥೪೯॥

ಶಿಷ್ಯೋಪದೇಶಕಾಲೇಽಪಿ ದ್ವೈತಂ ನ ಪರಮಾರ್ಥತಃ ।
ಮಾತಾಮೃತೇ ರೋದನಾಯದ್ರವ್ಯಂ ದತ್ವಾಽಹ್ವಯೇಜ್ಜನಾನ್ ॥೫೦॥

ತೇಷಾಂ ರೋದನಮಾಭಂ ಯತ್ಕೇವಲಂ ದ್ರವ್ಯವಂಚನಂ ।
ತದ್ವದ್ದ್ವೈತಂ ಮಯಾ ಪ್ರೋಕ್ತಂ ಸರ್ವಂ ವಿಸ್ಮೃತ್ಯ ಕುಡ್ಯವತ್ ॥೫೧॥

---

ನಿದಾಘಮುನಿಯೇ, ಈ ಜಗತ್ತೆಲ್ಲವೂ ಬಂಜೆಯ ಮಗನಂತೆ ಮಿಥ್ಯಾಭೂತವಾದದ್ದು. ಮೊಲದ ಕೊಂಬಿನಂತೆ ಸತ್ತಾರಹಿತವಾದದ್ದು. ಗಗನಕುಸುಮದಂತೆ ಅಪ್ರಸಿದ್ಧವಾದುದು. ಬಿಸಿಲ್ಗುದುರೆಯಂತೆ ಭ್ರಾಂತಿದಾಯಕವಾದುದು. ಇಂದ್ರಜಾಲದಿಂದ ಕಾಣುವ ಗಂಧರ್ವನಗರದಂತೆ ಯಾವಾಗಲೂ ಅಸತ್ಯವಾದುದು. ಈ ಪ್ರಪಂಚವು ಮೇಲೆ ಹೇಳಿದ ಐದುವಸ್ತುಗಳಂತೆ ಸದಾ ತೋರಿಬರುತ್ತಾ ಅಜ್ಞಾನಿಗಳಿಗೆ ಸುಖದಾಯಕವಾಗಿ ಕಂಡುಬರುತ್ತಿರುವುದು. ॥೪೭-೪೮-೪೯॥

ಗುರುವು ಶಿಷ್ಯನಿಗೆ ವೇದಾಂತ ತತ್ವವನ್ನು ಉಪದೇಶಿಸುವಿಕೆಯೂ ದ್ವೈತವೇ. ಅದು ಪಾರಮಾರ್ಥಿಕವಲ್ಲ. ಏಕೆಂದರೆ ಅಲ್ಲಿ ಗುರುವು ಬೇರೆ, ಶಿಷ್ಯನು ಬೇರೆ, ಉಪದೇಶವು ಬೇರೆ ಎಂದಿದ್ದರೆ ಪರಮಾರ್ಥವಾಗುತ್ತಿತ್ತು. ಹಾಗಿಲ್ಲ. ಪರಮಾತ್ಮನೋರ್ವನೇ ಇರುವುದರಿಂದ ಗುರುಶಿಷ್ಯಾದಿಭೇದಗಳು ನಿಜವಾಗಿಯೂ ಇಲ್ಲ, ತಾಯಿಯು ಮೃತಳಾದರೆ ದುಡ್ಡುಕೊಟ್ಟು ಬೇರೆಯವರಿಂದ ಅಳಿಸುವ ಪದ್ಧತಿಯುಂಟು. ಆದರೂ ಕೂಲಿಗಾಗಿ ಅಳುವವರು, ನಿಜವಾಗಿ ಅಳುವರೆ ? ಇಲ್ಲ. ದ್ರವ್ಯವು ಅವರನ್ನು ಅಳಿಸುವುದು. ಅದರಂತೆ ನಾನು ತತ್ವಪ್ರತಿಪಾದನೆಗಾಗಿ ನಿನಗೆ ಅನೇಕವಿಧಗಳನ್ನು ಹೇಳಿರುವೆನು. ಹೇಳುವಾಗ ಬೇರೆ ಬೇರೆ ಹೆಸರಿನಿಂದ ಬೇರೆ ಬೇರೆ ವಸ್ತುಗಳನ್ನು

ಅಹಂ ಬ್ರಹ್ಮೇತಿ ನಿಶ್ಚಿತ್ಯ ಅಹಮೇವೇತಿ ಭಾವಯ ।
ಅಹಮೇವ ಸುಖಂ ಚೇತಿ ಅಹಮೇವ ನ ಚಾಪರಃ ॥೫೨॥

ಅಹಂ ಚಿನ್ಮಾತ್ರಮೇವೇತಿ ಬ್ರಹ್ಮೈವೇತಿ ವಿನಿಶ್ಚಿನು ।
ಅಹಂ ನಿರ್ಮಲಶುದ್ಧೇತಿ ಅಹಂ ಜೀವವಿಲಕ್ಷಣಃ ॥೫೩॥

ಅಹಂ ಸರ್ವಾತ್ಮಾ ಬ್ರಹ್ಮೈವ ಅಹಮಿತ್ಯವಭಾಸಕಃ ।
ಅಹಮೇವ ಹಿ ಚಿನ್ಮಾತ್ರಮಹಮೇವ ಹಿ ನಿರ್ಗುಣಃ ॥೫೪॥

ಸರ್ವಾಂತರ್ಯಾಮ್ಯಹಂ ಬ್ರಹ್ಮ ಚಿನ್ಮಾತ್ರೋಽಹಂ ಸದಾಶಿವಃ ।
ನಿತ್ಯಮಂಗಲರೂಪಾತ್ಮಾ ನಿತ್ಯಂ ಮೋಕ್ಷಮಯಃ ಪುಮಾನ್ ॥೫೫॥

---

ನಿರೂಪಿಸಿರುವೆನು. ವಸ್ತುತಃ ಅವು ಬೇರೆಯಲ್ಲ. ನಾನು ಹೇಳಿದಂತೆ ಅವೆಲ್ಲವನ್ನೂ ಬೇರೆ ಬೇರೆಯಾಗಿ ಭಾವಿಸಬೇಡ. ಅನೇಕ ವಸ್ತುಗಳು ಒಟ್ಟಾಗಿ ಸೇರಿ ಒಂದು ಗೋಡೆಯೆನಿಸಿರುವಂತೆ, ಪ್ರಪಂಚವೆಲ್ಲಾ ಒಂದು ಬ್ರಹ್ಮವಸ್ತುವೆಂದು ಭಾವಿಸಿ ಬ್ರಹ್ಮಜ್ಞಾನಿಯಾಗು. ಆಗ ನಿನಗೆ ಅವೆಲ್ಲವೂ ಮರೆತುಹೋಗಿ " ಅಹಂ ಬ್ರಹ್ಮಾಸ್ಮಿ " ಎಂಬ ಮುಖ್ಯತತ್ತ್ವವು ಸ್ಫುರಿಸುವುದು. ॥೫೦-೫೧-೫೨॥

ನಾನು ಕೇವಲ ಜ್ಞಾನಮೂರ್ತಿಯು, ನಿರ್ಮಲನು. ಜೀವನು ನಾನಲ್ಲ, ಎಂದು ನಿಶ್ಚಯಿಸು. ನನ್ನಲ್ಲಿ ಸತ್ತ್ವರಜಸ್ತಮೋರೂಪಗಳಾದ ಯಾವ ಗುಣ ವಿಕಾರವೂ ಇಲ್ಲವೆಂದು ದೃಢವಾಗಿ ನಂಬು. ॥೫೩॥

ನಾನು ಎಲ್ಲ ಶರೀರಗಳಲ್ಲೂ ಆತ್ಮನಾಗಿ ತೋರಿ ''ನಾನು'' ''ನಾನು'' ಎಂದು ವ್ಯವಹರಿಸಲ್ಪಡುವೆನು. ವಸ್ತುತಃ ನಾನು ನಿರ್ಗುಣನು, ವ್ಯವಹಾರಕ್ಕೆ ಅಯೋಗ್ಯನು. ಜ್ಞಾನಸ್ವರೂಪನು. ಆದರೂ ನನ್ನ ಸ್ವರೂಪವನ್ನು ಅಜ್ಞಾನಿಗಳು ನಾನಾರೀತಿ ಅರಿಯುವರು. ॥೫೪॥

ಸರ್ವಾಂತರ್ಯಾಮಿಯಾದ ಬ್ರಹ್ಮವಸ್ತುವು ನಾನು. ಸದಾ ಮಂಗಳರೂಪನು ನಾನು, ಮುಕ್ತಿಸ್ವರೂಪನು ನಾನು, ಎಂದು ನಿಶ್ಚಯಿಸಿ ನಿನ್ನಾತ್ಮನಲ್ಲಿ ನೀನು ಲೀನನಾ ನಾಗಿದ್ದು ಬ್ರಹ್ಮಾತ್ಮಾನುಭವವನ್ನು ಅನುಭವಿಸು. ನಾಮರೂಪಗಳೆಲ್ಲವೂ ಅಸತ್ಯ

ಏವಂ ನಿಶ್ಚಿತ್ಯ ಸತತಂ ಸ್ವಾತ್ಮಾನಂ ಸ್ವಯಮಾಸ್ಥಿತಃ ।
ಬ್ರಹ್ಮೈವಾಹಂ ನ ಸಂದೇಹೋ ನಾಮರೂಪಂ ನ ಕಿಂಚನ ॥೫೬॥

ಏತದ್ರೂಪಪ್ರಕರಣಂ ಸರ್ವವೇದೇಷು ದುರ್ಲಭಂ ।
ಯಃ ಶೃಣೋತಿ ಸಕೃದ್ವಾಪಿ ಬ್ರಹ್ಮೈವ ಭವತಿ ಸ್ವಯಂ ॥೫೭॥

ತಂ ವೇದಾದಿವಚೋಭಿರೀಡಿತಮಹಾಯೋಗೈಶ್ಚಯೋಗೈರ್ವ್ರತೈಃ
ದಾನೈಶ್ಚಾನಶನೈರ್ಯಮಾದಿನಿಯಮೈಸ್ತಂ ವೇದಿಷಂತೋ ದ್ವಿಜಾಃ ।
ತಸ್ಯಾನಂಗರಿಪೋರತೀವ ಸುಮಹಾಹೃದ್ಯಂ ಹಿ ಲಿಂಗಾರ್ಚನಂ
ತೇನೈವಾಶು ವಿನಾಶ್ಯ ಮೋಹಮಖಿಲಂ ಜ್ಞಾನಂ ದದಾತೀಶ್ವರಃ ॥೫೮॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ದ್ವಾವಿಂಶೋಽಧ್ಯಾಯಃ

---

ವೆಂದು ತಿಳಿದು ಮುಕ್ತನಾಗು. ನಾನು ಹೇಳುವ ಈ ವಿಷಯದಲ್ಲಿ ಸ್ವಲ್ಪವೂ ಅನುಮಾನವನ್ನಿಟ್ಟುಕೊಳ್ಳಬೇಡ. ॥೫೫-೫೬॥

ಆತ್ಮನ ಪಾರಮಾರ್ಥಿಕಸ್ವರೂಪವನ್ನು ವಿವರಿಸುವ ಈ ಅತಿಮಹತ್ವಾದ ಪ್ರಕರಣವನ್ನು ಒಂದು ಬಾರಿಯಾದರೂ ಯಾವನು ಕೇಳುವನೋ ಅವನು ಬ್ರಹ್ಮವಸ್ತುವೇ ಆಗುವನು. ಬ್ರಹ್ಮತತ್ತ್ವಪ್ರತಿಪಾದಕಗಳಾದ ವಿಷಯಗಳು ಯಾವ ವೇದದಲ್ಲಿಯೂ ಇಷ್ಟು ವಿಸ್ತಾರವಾಗಿ ದೊರೆಯಲಾರವು. ವೇದಗಳಲ್ಲಿಯೂ ಸಹ ದೊರೆಯದಿರುವ ಅತ್ಯುತ್ತಮ ವಿಷಯಗಳನ್ನು ನಾನು ಈಗ ನಿನಗೆ ಅಭಿಮಾನದಿಂದ ಬೋಧಿಸಿರುವೆನು. ಇದೆಲ್ಲವನ್ನೂ ನೀನು ಅನುಷ್ಠಾನಕ್ಕೆ ತಂದು ಮುಕ್ತನಾಗು. ॥೫೭॥

ವೇದಾಂತ ವಾಕ್ಯಗಳಿಂದ ವರ್ಣಿಸಲ್ಪಡುವ, ವೇದಗಳಿಂದ ಸ್ತುತಿಸಲ್ಪಡುವ, ಯೋಗಾಭ್ಯಾಸಬಲದಿಂದ ಅರಿಯಲ್ಪಡುವ ಆ ಮನ್ಮಥವೈರಿಯನ್ನು ಯಾರು ಯೋಗ, ದಾನ, ಉಪವಾಸ, ಯಮನಿಯಮಾದಿಗಳಿಂದ ಆರ್ಚಿಸುವರೋ ಅಂತ ಹವರ ಅಜ್ಞಾನವು ತೊಲಗುವುದು. ಪರಶಿವನ ಅನುಗ್ರಹದಿಂದ ಜ್ಞಾನವು ಉದಯಿ ಸುವುದು. ಅಂತಹ ಜ್ಞಾನಪ್ರದವಾದ ಶಿವಾನುಗ್ರಹವನ್ನು ಪಡೆಯಬೇಕಾದರೆ

ಮಾನವರು ನಿಜವಾಗಿಯೂ ಸದಾ ಶಿವಲಿಂಗಧ್ಯಾನ, ಶಿವಲಿಂಗಾರ್ಚನೆ ಇವುಗಳಿಂದ ಕಾಲಕಳೆಯಬೇಕು. ಅದರಿಂದ ಶಿವಾನುಗ್ರಹವೂ ತನ್ಮೂಲಕ ಸೋಽಹಂಭಾವನೆಯೂ ಆನಂದಾನುಭವವೂ ಲಭಿಸುವುದು. ಎಂದು ನಿದಾಘಮುನಿಗೆ ಋಭುಮಹಾಮುನಿಯು ಆತ್ಮಜ್ಞಾನೋಪಾಯವನ್ನು ವಿವರಿಸಿದನು. ॥೫೮॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ತ್ರಯೋವಿಂಶೋಽಧ್ಯಾಯಃ

॥ ಋಭುರುವಾಚ ॥

ನಿದಾಘ ಶೃಣು ವಕ್ಷ್ಯಾಮಿ ಸರ್ವಲೋಕೇಷು ದುರ್ಲಭಂ ।
ಇದಂ ಬ್ರಹ್ಮ ಪರಂ ಬ್ರಹ್ಮ ಸಚ್ಚಿದಾನಂದ ಏವ ಹಿ ॥೧॥

ನಾನಾವಿಧಜನಂ ಲೋಕಂ ನಾನಾಕಾರಣಕಾರಣಂ ।
ಬ್ರಹ್ಮೈವಾನ್ಯದಸತ್ಸರ್ವಂ ಸಚ್ಚಿದಾನಂದ ಏವ ಹಿ ॥೨॥

---

## ಇಪ್ಪತ್ತುಮೂರನೆಯ ಅಧ್ಯಾಯ

ಮತ್ತೆ ಋಭುಮಹಾಮುನಿಯು ನಿದಾಘಮಹರ್ಷಿಗೆ ಬ್ರಹ್ಮಸ್ವರೂಪವನ್ನು ಹೀಗೆ ತಿಳಿಸಿದನು—ಎಲೈ ನಿದಾಘಮುನಿಯೇ, "ಈಜಗತ್ತೆಲ್ಲವೂ ಸಚ್ಚಿದಾನಂದ ಮೂರ್ತಿಯಾದ ಬ್ರಹ್ಮವಸ್ತುವೇ ಆಗಿರುವುದು." ಎಂಬ ಈ ಅತಿದುರ್ಲಭವಾದ ತತ್ವವನ್ನು ಮತ್ತೆ ವಿವರವಾಗಿ ಹೇಳುವೆನು ಕೇಳು, ಶ್ರದ್ಧೆಯಿಂದ ಸಾವಧಾನವಾಗಿ ಆಲಿಸು. ॥೧॥

ನಾನಾಬಗೆಯ ಜನಗಳುಳ್ಳ, ಅನೇಕಕಾರ್ಯಕಾರಣಗಳಿಂದ ತುಂಬಿರುವಂತೆ ಕಾಣುವ ಈ ಜಗತ್ತೆಲ್ಲವೂ ಬ್ರಹ್ಮವಸ್ತುವೇ ಆಗಿರುವುದು. ಯಾವ ವಸ್ತುವೂ ಬ್ರಹ್ಮವಸ್ತುವಿಗಿಂತ ಬೇರೆಯಾಗಿಲ್ಲ. ಆ ಬ್ರಹ್ಮವಸ್ತುವು ಸತ್ಯಸ್ವರೂಪವಾದುದು. ಜ್ಞಾನಸ್ವರೂಪವಾದುದು. ಆನಂದಸ್ವರೂಪವಾದುದು. ಆದುದರಿಂದಲೇ ಇದನ್ನು ಸಚ್ಚಿದಾನಂದಸ್ವರೂಪವೆಂದು ಜ್ಞಾನಿಗಳು ಭಾವಿಸುವರು. ॥೨॥

ಅಹಂ ಬ್ರಹ್ಮ ಸದಾ ಬ್ರಹ್ಮ ಅಸ್ಮಿ ಬ್ರಹ್ಮಾಹಮೇವ ಹಿ ।
ಕಾಲೋ ಬ್ರಹ್ಮ ಕ್ಷಣಂ ಬ್ರಹ್ಮ ಅಹಂ ಬ್ರಹ್ಮ ನ ಸಂಶಯಃ ॥೩॥

ಹಂಸೋ ಬ್ರಹ್ಮ ಹರಿರ್ಬ್ರಹ್ಮ ಶಿವೋ ಬ್ರಹ್ಮ ಚಿದವ್ಯಯಃ ।
ಸರ್ವೋಪನಿಷದೋ ಬ್ರಹ್ಮ ಸಾಮ್ಯಂ ಬ್ರಹ್ಮ ಸಮೋಸ್ಮ್ಯಹಂ ॥೪॥

ಅಜೋ ಬ್ರಹ್ಮರಸಂ ಬ್ರಹ್ಮ ವಿಯದ್ಬ್ರಹ್ಮ ಪರಾತ್ಪರಃ
ವೇದೋ ಬ್ರಹ್ಮ ಪರೋ ಬ್ರಹ್ಮ ಸತ್ಯಂ ಬ್ರಹ್ಮ ಪರಾತ್ಪರಃ ॥೫॥

ತೃಟಿರ್ಬ್ರಹ್ಮ ಮನೋಬ್ರಹ್ಮ ವ್ಯಷ್ಟಿರ್ಬ್ರಹ್ಮ ಸದಾಮುದಃ ।
ಇದಂ ಬ್ರಹ್ಮ ಪರಂ ಬ್ರಹ್ಮ ತತ್ವಂ ಬ್ರಹ್ಮ ಜಯಃ ಸದಾ ॥೬॥

---

ನಾನು ಮೂರುಕಾಲಗಳಲ್ಲೂ ಬ್ರಹ್ಮನಾಗಿರುವೆನು, ಕಾಲವು ಬ್ರಹ್ಮವಾಗಿರುವುದು. ಕ್ಷಣವು ಬ್ರಹ್ಮವಾಗಿರುವುದು. ಹೀಗೆ ಕಾಲವಸ್ತುಭೇದವಿಲ್ಲದೆ ನಾನು ಬ್ರಹ್ಮನೆನ್ನುವುದರಲ್ಲಿ ಯಾವ ಸಂಶಯವೂ ಇರುವುದಿಲ್ಲ. ॥೩॥

ಸೃಷ್ಟಿಕರ್ತನಾದ ಬ್ರಹ್ಮನೂ ಬ್ರಹ್ಮ, ಜಗತ್ಪಾಲಕನಾದ ಹರಿಯೂ ಬ್ರಹ್ಮ, ಲೋಕನಾಶಕವಾದ ಶಿವನೂ ಬ್ರಹ್ಮ. ಜ್ಞಾನಬೋಧಕಗಳಾದ ಎಲ್ಲ ಉಪನಿಷತ್ತುಗಳೂ ಬ್ರಹ್ಮ, ಸಮತೆಯು ಬ್ರಹ್ಮ, ಆದುದರಿಂದ ನಾನು ಬ್ರಹ್ಮಸ್ವರೂಪನಾಗಿದ್ದೇನೆ. ॥೪॥

ಬ್ರಹ್ಮವಸ್ತುವಿಗೆ ಜನನವಿಲ್ಲ. ವಸ್ತುಸಾರವಾದ ರಸವೂ ಬ್ರಹ್ಮ, ವಿಶಾಲವಾದ ಆಕಾಶವು ಬ್ರಹ್ಮ, ಪೂಜ್ಯ ವೇದಗಳೂ ಬ್ರಹ್ಮ, ಶ್ರೇಷ್ಠವೆನ್ನುವುದೂ ಬ್ರಹ್ಮ, ಸತ್ಯವೆನ್ನುವುದೂ ಬ್ರಹ್ಮ. ಪರಾತ್ಪರವಸ್ತುಗಳೆನಿಸಿದವುಗಳೆಲ್ಲಾ ಬ್ರಹ್ಮವೇ ಎಂದು ತಿಳಿ. ॥೫॥

ತ್ರ್ಯಣುಕಗಳು ಬ್ರಹ್ಮ, ಮನಸ್ಸು ಬ್ರಹ್ಮ, ಪ್ರತ್ಯೇಕತೆಯು ಬ್ರಹ್ಮ, ಅಭಿನ್ನತೆಯು ಬ್ರಹ್ಮ, ಇದು ಬ್ರಹ್ಮ, ಅದೂ ಬ್ರಹ್ಮ, ತತ್ವವು ಬ್ರಹ್ಮ, ಜಯವು ಬ್ರಹ್ಮ. ಸರ್ವವೂ ಬ್ರಹ್ಮಮಯವಾಗಿರುವುದು. ॥೬॥

ಅಕಾರೋ ಬ್ರಹ್ಮ ಏವಾಯಮುಕಾರೋಽಯಂ ನ ಸಂಶಯಃ ।
ಮಕಾರಬ್ರಹ್ಮಮಾತ್ರೋಽಹಂ ಮಂತ್ರಂ ಬ್ರಹ್ಮ ಮನುಃ ಪರಃ ॥೭॥

ಶಿಕಾರಬ್ರಹ್ಮಮಾತ್ರೋಽಹಂ ವಾಕಾರಂ ಬ್ರಹ್ಮ ಕೇವಲಂ ।
ಯಕಾರಂ ಬ್ರಹ್ಮ ನಿತ್ಯಂ ಚ ಪಂಚಾಕ್ಷರಮಹಂ ಪರಂ ॥೮॥

ರೇಚಕಂ ಬ್ರಹ್ಮ ಸದ್ಬ್ರಹ್ಮ ಪೂರಕಂ ಬ್ರಹ್ಮ ಸರ್ವತಃ ।
ಕುಂಭಕಂ ಬ್ರಹ್ಮ ಸರ್ವಾಹಂ ಧಾರಣಂ ಬ್ರಹ್ಮ ಸರ್ವತಃ ॥೯॥

---

ಅಕಾರವು ಬ್ರಹ್ಮ, ಉಕಾರವು ಬ್ರಹ್ಮ, ಮಕಾರವು ಬ್ರಹ್ಮ, ಇವು ಮೂರೂ ಸೇರಿದ ಓಂಕಾರವೂ ಬ್ರಹ್ಮ, ಮಹಾಮಂತ್ರಗಳೂ ಬ್ರಹ್ಮ, ಓಂಕಾರದಿಂದ ಪ್ರತಿಪಾದ್ಯವಾದ ಸಕಲ ಅರ್ಥಗಳೂ ಬ್ರಹ್ಮವಾಚ್ಯಗಳೇ ಆಗಿರುತ್ತವೆ. ॥೭॥

ಶಿವಪಂಚಾಕ್ಷರೀಮಂತ್ರಾಂತರ್ಗತವಾದ ಓಂಕಾರವು ಶಿಕಾರವು ಬ್ರಹ್ಮ, ಬ್ರಹ್ಮ, ವಾಕಾರವು ಬ್ರಹ್ಮ, ಯಕಾರವು ಬ್ರಹ್ಮ, ಇವು ಮೂರೂ ಬ್ರಹ್ಮವಸ್ತುವೇ ಆಗಿರುತ್ತವೆ. ಇವು ಮೂರು ಅಕ್ಷರಗಳಿಂದ ಕೂಡಿರುವ ನಮಸ್ಕಾರಯುಕ್ತವಾದ "ನಮಶ್ಶಿವಾಯ" ಎಂಬ ಪಂಚಾಕ್ಷರ ಮಂತ್ರವೂ ನಾನೇ. ॥೮॥

ರೇಚಕವೆಂಬ ಪ್ರಾಣಾಯಾಮವೂ ಬ್ರಹ್ಮಸ್ವರೂಪವಾಗಿರುವುದು. ಪೂರಕವೆಂಬ ಪ್ರಾಣಾಯಾಮವೂ, ಬ್ರಹ್ಮಸ್ವರೂಪವಾಗಿರುವುದು. ಕುಂಭಕವೆಂಬ ಪ್ರಾಣಾಯಾಮವೂ ಬ್ರಹ್ಮಸ್ವರೂಪವಾಗಿರುವುದು. ಧಾರಣವೆಂಬ ಶ್ವಾಸಬಂಧನವೂ ಸಹ ಬ್ರಹ್ಮಸ್ವರೂಪವಾಗಿರುವುದು. ಆ ಪ್ರಾಣಾಯಾಮಗಳೂ ಬ್ರಹ್ಮವಸ್ತುವೇ ಆಗಿರುವವು. (ರೇಚಕ, ಪೂರಕ, ಕುಂಭಕಗಳು ಪ್ರಾಣಾಯಾಮದಲ್ಲಿ ಅನುಸರಿಸಬೇಕಾದ ವಾಯುನಿರೋಧಕ ಕ್ರಿಯೆಗಳು. ಈ ಮೂರೂ ಪ್ರಣವದಲ್ಲಿ ಅಡಗಿರುವ ಅಕಾರ, ಉಕಾರ, ಮಕಾರಾತ್ಮಕಗಳೆಂದು ಉಕ್ತವಾಗಿದೆ. ಈ ಕ್ರಿಯಾತ್ರಯಗಳೇ ಪ್ರಣವವು. ಇಡಾ ನಾಡಿಯಿಂದ ವಾಯುವನ್ನು ಹದಿನಾರು ಮಾತ್ರಾಕಾಲಗಳಿಂದ ಎಳೆದು, ಅದನ್ನು ಉದರಮಧ್ಯದಲ್ಲಿ ಅರುವತ್ತನಾಲ್ಕು ಮಾತ್ರಾಕಾಲಗಳಿಂದ ನಿಲ್ಲಿಸಿದ್ದು, ಆಗ ಯಥಾಶಕ್ತಿ ಪ್ರಣವಜಪಮಾಡುತ್ತಾ, ಪೂರಿತವಾಗಿದ್ದ ವಾಯುವನ್ನು ಪಿಂಗಳನಾಡಿಯಿಂದ ನಿದಾನವಾಗಿ ಮೂವತ್ತೆರಡು ಮಾತ್ರಾಕಾಲಗಳಿಂದ ಬಿಡಬೇಕು. ಇಷ್ಟು ಕಾಲ ನಡೆಸುವ ವಾಯು ನಿರೋಧನಕ್ಕೆ ಒಂದು ಪ್ರಾಣಾಯಾಮವೆಂದು

ಬ್ರಹ್ಮೈವ ನಾನ್ಯತ್ತತ್ಸರ್ವಂ ಸಚ್ಚಿದಾನಂದ ಏವ ಹಿ ।
ಕಾಲಾತೀತಂ ಸುಖಾತೀತಂ ಸರ್ವಾತೀತಮತೀತಕಂ ॥೧೦॥

ನಿತ್ಯಾತೀತಮತೀತ್ಯಾನಾಮತೀತಂ ಬ್ರಹ್ಮ ಕೇವಲಂ ।
ಬ್ರಹ್ಮೈವ ನಾನ್ಯದ್ಯತ್ಸರ್ವಂ ಸಚ್ಚಿದಾನಂದಮಾತ್ರಕಂ ॥೧೧॥

ದ್ವೈತಸತ್ಯತ್ವಬುದ್ಧಿಶ್ಚ ದ್ವೈತಬುದ್ಧ್ಯಾ ನ ತತ್ಸ್ಮರ ।
ಸರ್ವಂ ಬ್ರಹ್ಮೈವ ನಾನ್ಯೋಽಸ್ತಿ ಸರ್ವಂ ಬ್ರಹ್ಮೈವ ಕೇವಲಂ ॥೧೨॥

ಬುದ್ಧ್ಯತೀತಂ ಮನೋಽತೀತಂ ವೇದಾತೀತಮತಃ ಪರಂ ।
ಆತ್ಮಾತೀತಂ ಜನಾತೀತಂ ಜೀವಾತೀತಂ ಚ ನಿರ್ಗುಣಂ ॥೧೩॥

---

ಹೆಸರು. ಹಾಗೆ ಪ್ರಾಣಾಯಾಮದಲ್ಲಿ ವಾಯುವನ್ನು ಎಳೆದು ನಿಲ್ಲಿಸಿ, ಬಿಡುವ ಯತ್ನಗಳಿಗೆ, ಕ್ರಮವಾಗಿ ಪೂರಕ, ಕುಂಭಕ, ರೇಚಕಗಳೆಂದು ಹೆಸರು. ॥೯॥

ಒಟ್ಟಿನಲ್ಲಿ ಎಲ್ಲವೂ ಬ್ರಹ್ಮವಸ್ತುವೇ, ಸಚ್ಚಿದಾನಂದರೂಪವಾದ ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ಅದು ಕಾಲವನ್ನೂ ಮೀರಿರುವುದು, ಸುಖದುಃಖಾದಿಗಳನ್ನೂ ಮೀರಿರುವುದು. ಅನಿತ್ಯವಸ್ತುಗಳೆಲ್ಲವನ್ನೂ ಮೀರಿರುವುದು. ಯಾವುದಕ್ಕೂ ಅಧೀನವಲ್ಲದ ವಸ್ತುವು ಅದು. ॥೧೦॥

ಬ್ರಹ್ಮವಸ್ತುವು ಎಲ್ಲ ವಸ್ತುಗಳಿಗಿಂತಲೂ ಅತೀತವಾದುದು, ಅಂದರೆ ಯಾವ ವಸ್ತುಗಳಿಗೂ ಅಧೀನವಲ್ಲ, ಬ್ರಹ್ಮವಸ್ತುವಿಗಿಂತ ಬೇರೆಯಾಗಿ ಯಾವ ವಸ್ತುವೂ ಪ್ರಪಂಚದಲ್ಲಿ ಇಲ್ಲ, ಅದು ಅದ್ವಿತೀಯವು, ಸತ್ಯಜ್ಞಾನಾನಂದಸ್ವರೂಪವು. ॥೧೧॥

ದ್ವೈತಬುದ್ಧಿಯಿಂದ ಬೇರೆಬೇರೆಯಾಗಿ ತೋರುತ್ತಿರುವ ವಸ್ತುಗಳು ಸತ್ಯವಲ್ಲ. ಆದುದರಿಂದ ಆ ವಸ್ತುಗಳನ್ನು ದ್ವೈತಬುದ್ಧಿಯಿಂದ ಸ್ಮರಿಸಬೇಡ. ಆ ವಸ್ತುಗಳು ಸತ್ಯವಾಗಿ ತೋರಿದರೂ ಸಹ ಅವು ಸತ್ಯವೆಂದು ತಿಳಿಯಬೇಡ. ಬ್ರಹ್ಮವಸ್ತುವೊಂದೇ ಸತ್ಯವಾದುದು, ಬ್ರಹ್ಮವಸ್ತುವಿನ ಹೊರತಾಗಿ ಯಾವ ಸತ್ಯವಸ್ತುವೂ ಸತ್ಯವಲ್ಲ. ಈ ಪ್ರಪಂಚದಲ್ಲಿ ತೋರುವ ಸಕಲ ವಸ್ತುಗಳೂ ಬ್ರಹ್ಮಸ್ವರೂಪವೇ ಆಗಿರುವುವು. ॥೧೨॥

ಬ್ರಹ್ಮವಸ್ತುವು ಬುದ್ಧಿಗೂ ಅಗೋಚರವಾಗಿರುವುದು. ಮನಸ್ಸಿಗೂ ಅಗೋಚರವಾಗಿರುವುದು. ವೇದಗಳಿಗೂ ಅಗೋಚರವೆನಿಸುವುದು. ಆತ್ಮನಿಗೂ ಅಗೋ

ಕಾಷ್ಠಾತೀತಂ ಕಲಾತೀತಂ ನಾಟ್ಯಾತೀತಂ ಪರಂ ಸುಖಂ ।
ಬ್ರಹ್ಮಮಾತ್ರೇಣ ಸಂಪಶ್ಯ ಬ್ರಹ್ಮಮಾತ್ರಪರೋ ಭವ ॥೧೪॥

ಬ್ರಹ್ಮಮಾತ್ರಪರೋ ನಿತ್ಯಂ ಚಿನ್ಮಾತ್ರೋಽಹಂ ನ ಸಂಶಯಃ ।
ಜ್ಯೋತಿರಾನಂದಮಾತ್ರೋಽಹಂ ವಿಜ್ಞಾನಾನಂದಮಾತ್ರಕಂ ॥೧೫॥

ಶೂನ್ಯಾನಂದಾತ್ಮಮಾತ್ರೋಽಹಂ ಚಿನ್ಮಾತ್ರೋಽಹಮಿತಿ ಸ್ಮರ ।
ಸತ್ತಾಮಾತ್ರೋಽಹಮೇವಾತ್ರ ಸದಾಕಾಲಗುಣಾಂತರಃ ॥೧೬॥

ನಿತ್ಯಸನ್ಮಾತ್ರರೂಪೋಽಹಂ ಶುದ್ಧಾನಂದಾತ್ಮಮಾತ್ರಕಂ ।
ಪ್ರಪಂಚಹೀನರೂಪೋಽಹಂ ಸಚ್ಚಿದಾನಂದಮಾತ್ರಕಃ ॥೧೭॥

---

ಚರವಾಗುವುದು. ಜೀವನಿಗೂ ಅಗೋಚರವಾಗಿರುವುದು. ಜನಗಳಿಗೂ ಅಗೋಚರವೇ. ಒಟ್ಟಿನಲ್ಲಿ ಅದು ನಿರ್ಗುಣವಾದುದೆಂದು ಭಾವವು. ॥೧೩॥

ಬ್ರಹ್ಮವಸ್ತುವು ದಿಕ್ಕುಗಳಿಗೂ ಅಗೋಚರವಾಗಿರುವುದು. ಕಲೆಗಳಿಗೂ ಅಗೋಚರವಾಗಿರುವುದು. ನಾಟ್ಯಕ್ಕೆ ಅಗೋಚರವೆನಿಸಿರುವುದು. ಅದು ಪರವು ಸುಖರೂಪವಾದುದು. ಅದನ್ನು ಕೇವಲ ಬ್ರಹ್ಮಸ್ವರೂಪವಾಗಿ ತಿಳಿದು ನಾನೇ ಬ್ರಹ್ಮವಸ್ತುವೆಂದು ನಿಶ್ಚಯವಾಗಿ ತಿಳಿದುಕೋ. ಆಗಲೇ ನಿತ್ಯಾನಂದವು ಲಭಿಸುವುದು. ॥೧೪॥

ನಿತ್ಯವೂ ಬ್ರಹ್ಮವಸ್ತುವನ್ನು ಅನುಸಂಧಾನಮಾಡುತ್ತಾ "ಚೈತನ್ಯಮಾತ್ರ ಸ್ವರೂಪನು ನಾನು, ಪ್ರಕಾಶಸ್ವರೂಪನು ನಾನು, ಆನಂದಸ್ವರೂಪನು ನಾನು, ಯಾವ ವಿಕಾರಗಳೂ ಇಲ್ಲದ ಆನಂದಸ್ವರೂಪವು ನಾನು"—ಎಂದು ಭಾವಿಸು. ॥೧೫

ಕೇವಲ ಸತ್ತೆಯ ಸ್ವರೂಪನು ನಾನು, ಸದಾ ನಾನು ನಿರ್ಗುಣಸ್ವರೂಪನು. ಶುದ್ಧನು, ಕೇವಲ ಆನಂದಮೂರ್ತಿಯು ನಾನು, ಪ್ರಪಂಚದಲ್ಲಿ ಇಲ್ಲದವನು, ಜ್ಞಾನಸ್ವರೂಪನು, ಸತ್ಯಸ್ವರೂಪನು. ॥೧೬-೧೭॥

ನಿಶ್ಚಯಾನಂದಮಾತ್ರೋಽಹಂ ಕೇವಲಾನಂದಮಾತ್ರಕಃ ।
ಪರಮಾನಂದಮಾತ್ರೋಽಹಂ ಪೂರ್ಣಾನಂದೋಽಹಮೇವ ಹಿ ॥೧೮॥

ದ್ವೈತಸ್ಯ ಮಾತ್ರಸಿದ್ಧೋಽಯಂ ಸಾಮ್ರಾಜ್ಯಪದಲಕ್ಷಣಂ ।
ಇತ್ಯೇವಂ ನಿಶ್ಚಯಂ ಕುರ್ವನ್ ಸದಾ ತ್ರಿಷು ಯಥಾಸುಖಂ ॥೧೯॥

ದೃಢನಿಶ್ಚಯರೂಪಾತ್ಮಾ ದೃಢನಿಶ್ಚಯಸನ್ಮಯಃ ।
ದೃಢನಿಶ್ಚಯಜೀವಾತ್ಮಾ ಸಂಶಯಂ ನಾಶಮೇಷ್ಯತಿ ॥೨೦॥

ದೃಢನಿಶ್ಚಯಮೇವಾತ್ರ ಬ್ರಹ್ಮಜ್ಞಾನಸ್ಯ ಲಕ್ಷಣಂ ।
ದೃಢನಿಶ್ಚಯಜೀವಾತ್ಮಾ ವಾಕ್ಯಜ್ಞಾನಸ್ಯ ನಿಶ್ಚಯಃ ॥೨೧॥

ದೃಢನಿಶ್ಚಯಮೇವಾತ್ರ ಕಾರಣಂ ಮೋಕ್ಷಸಂಪದಃ ।
ಏವಮೇವ ಸದಾ ಕಾರ್ಯಂ ಬ್ರಹ್ಮೈವಾಹಮಿತಿ ಸ್ಥಿರಂ ॥೨೨॥

---

ಬ್ರಹ್ಮಜ್ಞಾನಸ್ವರೂಪನು ನಾನು, ಕೇವಲ ಆನಂದಸ್ವರೂಪನು ನಾನು, ಪರಮಾನಂದಸ್ವರೂಪನು ನಾನು, ಪೂರ್ಣಾನಂದವೇ ನಾನು. ॥೧೮॥

ಈ ಸಾಮ್ರಾಜ್ಯ ಪದವಿ-ಮೊದಲಾದುದೆಲ್ಲವೂ ಅಸತ್ಯವಾದ ದ್ವೈತಪ್ರಪಂಚವೆಂದು ತಿಳಿದು, ನಾನು ಸತ್ಯಸ್ವರೂಪನಾದ ಬ್ರಹ್ಮನೆಂದು ದೃಢವಾಗಿ ನಿಶ್ಚಯಿಸು. ಆದರಿಂದ ನಿನ್ನ ಸಂಶಯವೆಲ್ಲವೂ ನಾಶವಾಗುವುದು. ದೃಢವಾದ ನಿಶ್ಚಯವೊದಗಿದರೆ ಮಾತ್ರ ಸಂಶಯವು ನಿವಾರಣೆಯಾಗುವುದು. ಸಂಶಯವು ನಿರಸ್ತವಾದರೆ ತಾನೆ ಬ್ರಹ್ಮಸತ್ಯತ್ವಜ್ಞಾನಲಭಿಸುವುದು. ॥೧೯-೨೦॥

ನಾನೇ ಬ್ರಹ್ಮನೆಂದು ದೃಢವಾಗಿ ತಿಳಿಯುವುದೇ ಬ್ರಹ್ಮಜ್ಞಾನದ ನಿಜವಾದ ಲಕ್ಷಣವು. ಬ್ರಹ್ಮಸ್ವರೂಪಬೋಧಕಗಳಾದ ವಾಕ್ಯಾರ್ಥಜ್ಞಾನವೂ ಕೇವಲ ನಿಶ್ಚಯಭಾವನೆಯಿಂದ ನಡೆಯಬೇಕು. ॥೨೧॥

"ಬ್ರಹ್ಮವಸ್ತುವೇ ನಾನು"— ಎಂದು ದೃಢವಾಗಿ ತಿಳಿಯುವುದೇ ಮೋಕ್ಷಕ್ಕೆ ನಿಜವಾದ ಕಾರಣವು. " ಅಹಂಬ್ರಹ್ಮಾಸ್ಮಿ " ಎಂಬ ಸ್ಥಿರಭಾವನೆಯಿಂದಲೇ ನಿತ್ಯವೂ ಆತ್ಮಾನುಸಂಧಾನಮಾಡಬೇಕು. ॥೨೨॥

ಬ್ರಹ್ಮೈವಾಹಂ ನ ಸಂದೇಹಃ ಸಚ್ಚಿದಾನಂದ ಏವ ಹಿ ।
ಆತ್ಮಾನಂದಸ್ವರೂಪೋಹಂ ನಾನ್ಯದಸ್ತೀತಿ ಭಾವಯ ॥೧೩॥

ತತಸ್ತದಪಿ ಸಂತ್ಯಜ್ಯ ಆನಂದಾತ್ಮಾನಮಾಶ್ರಯ ।
ತತಸ್ತದಪಿ ಸಂತ್ಯಜ್ಯ ಏಕ ಏವ ಸ್ಥಿರೋ ಭವ ॥೧೪॥

ತತಸ್ತದಪಿ ಸಂತ್ಯಜ್ಯ ನಿರ್ಗುಣೋ ಭವ ಸರ್ವದಾ ।
ನಿರ್ಗುಣತ್ವಂ ಚ ಸಂತ್ಯಜ್ಯ ವಾಚಾತೀತೋ ಭವೇತ್ತತಃ ॥೧೫॥

ವಾಚಾತೀತಂ ಚ ಸಂತ್ಯಜ್ಯ ಚಿನ್ಮಾತ್ರತ್ವಪರೋ ಭವ ।
ಆತ್ಮಾತೀತಂ ಚ ಸಂತ್ಯಜ್ಯ ಬ್ರಹ್ಮಮಾತ್ರಪರೋ ಭವ ॥೧೬॥

ಚಿನ್ಮಾತ್ರತ್ವಂ ಚ ಸಂತ್ಯಜ್ಯ ಸರ್ವಂ ತೂಷ್ಣೀಂ ಪರೋ ಭವ ।
ಸರ್ವಂ ತೂಷ್ಣೀಂ ಚ ಸಂತ್ಯಜ್ಯ ನಿರ್ಗುಣೋ ಭವ ಸರ್ವದಾ ॥೧೭॥

---

"ಸಚ್ಚಿದಾನಂದಸ್ವರೂಪನಾದ ಬ್ರಹ್ಮನೇ ನಾನು, ನನ್ನ ಹೊರತು ಯಾವ ವಸ್ತುವೂ ಇಲ್ಲ"—ಆತ್ಮಾನಂದಸ್ವರೂಪನೇ ನಾನು. ಆತ್ಮಾನಂದವೇ ಮೋಕ್ಷವು. ಎಂದು ದೃಢವಾಗಿಭಾವಿಸು. ॥೧೩॥

ಆಮೇಲೆ ಆ ನಿಶ್ಚಯವನ್ನೂ ಬಿಟ್ಟು "ಕೇವಲ ಆನಂದಸ್ವರೂಪನು ನಾನು- ಎಂದು ತಿಳಿಯುವವನಾಗು. ಆಮೇಲೆ ಆ ನಿಶ್ಚಯವನ್ನೂ ಬಿಟ್ಟು ಅದ್ವಿತೀಯ ಸ್ವರೂಪನಾಗಿ ಬಾಳು. ॥೧೪॥

ಆಮೇಲೆ ಅದ್ವಿತೀಯತ್ವವನ್ನೂ ಬಿಟ್ಟು ನಿರ್ಗುಣನಾಗು. ಅನಂತರ ನಿರ್ಗುಣ ತ್ವವನ್ನೂ ಬಿಟ್ಟು ವಾಕ್ಕಿಗೆ ಅಗೋಚರವಾದ ಸ್ವರೂಪನು ಆಗು. ॥೧೫॥

ವಾಕ್ಕಿಗೆ ಆಗೋಚರವೆಂಬ ಸ್ವರೂಪವನ್ನೂ ತೊರೆದು ಕೇವಲ ಚೈತನ್ಯ ಪರನೇ ಆಗು. ಆತ್ಮನಿಗೆ ಅಗೋಚರತೆಯೆಂಬುದನ್ನೂ ಬಿಟ್ಟು-ಕೇವಲ ಬ್ರಹ್ಮಪರನೇ ಆಗು. ॥೧೬॥

ಚೈತನ್ಯಮಾತ್ರತ್ವವನ್ನೂ ಬಿಟ್ಟು ಸಂಪೂರ್ಣವಾಗಿ ಮೌನಿಯಾಗು. ಮೌನ ವನ್ನೂ ಬಿಟ್ಟು ಮಹಾಮೌನಿಯಾಗು. ॥೧೭॥

ಮಹಾತೂಷ್ಣೀಂ ಚ ಸಂತ್ಯಜ್ಯ ಚಿತ್ತತೂಷ್ಣೀಂ ಸಮಾಶ್ರಯ ।
ಚಿತ್ತತೂಷ್ಣೀಂ ಚ ಸಂತ್ಯಜ್ಯ ಜೀವತೂಷ್ಣೀಂ ಸಮಾಹರ ॥೨೮॥

ಜೀವತೂಷ್ಣೀಂ ಪರಿತ್ಯಜ್ಯ ಜೀವಶೂನ್ಯಪರೋ ಭವ ।
ಶೂನ್ಯತ್ಯಾಗಂ ಚ ಸಂತ್ಯಜ್ಯ ಯಥಾ ತಿಷ್ಠ ತಥಾಸಿ ಭೋಃ ॥೨೯॥

ತಿಷ್ಠ ತ್ವಮಪಿ ಸಂತ್ಯಜ್ಯ ಅವಾಙ್ಮನಸಗೋಚರಃ ।
ತತಃ ಪರಂ ನ ವಕ್ತವ್ಯಂ ತತಃ ಪಶ್ಚಾನ್ನ ಕಿಂಚನ ॥೩೦॥

ನೋ ಚೇತ್ಸರ್ವಪರಿತ್ಯಾಗೋ ಬ್ರಹ್ಮೈವಾಹಮಿತೀರಯ ।
ಸದಾ ಸ್ಮರನ್ ಸದಾ ಚಿಂತ್ಯಂ ಸದಾ ಭಾವಯ ನಿರ್ಗುಣಂ ॥೩೧॥

ಸದಾ ತಿಷ್ಠಸ್ವ ತತ್ವಜ್ಞ ಸದಾ ಜ್ಞಾನೀ ಸದಾ ಪರಃ ।
ಸದಾನಂದಃ ಸದಾತೀತಃ ಸದಾ ದೋಷವಿವರ್ಜಿತಃ ॥೩೨॥

---

ಮಹಾಮೌನವನ್ನೂ ಬಿಟ್ಟು ಮನಸ್ಸಿನ ನಿರ್ವಾಣಸ್ಥಿತಿಯನ್ನು ಹೊಂದು. ಮನೋನಿರ್ವಾಣಸ್ಥಿತಿಯನ್ನೂ ಬಿಟ್ಟು ಜೀವನಿರ್ವಾಣತೆಯನ್ನು ಹೊಂದು. ॥೨೮॥

ಜೀವನಿರ್ವಾಣಸ್ಥಿತಿಯನ್ನೂ ಬಿಟ್ಟು ಜೀವಶೂನ್ಯತೆಯನ್ನು ಹೊಂದು, ಹಾಗೆಯೇ ಜೀವನಿರ್ವಾಣಸ್ಥಿತಿಯನ್ನೂ ಬಿಟ್ಟು ಜೀವಶೂನ್ಯತೆಯನ್ನು ಹೊಂದು. ಜೀವಶೂನ್ಯತೆಯನ್ನೂ ಬಿಟ್ಟು ಹೇಗೋ ಹಾಗೆ ಇರುವವನಾಗು. ॥೨೯॥

ಹೇಗೋಹಾಗೆ ಇರುವುದನ್ನೂ ಬಿಟ್ಟು ವಾಕ್ಕುಮನಸ್ಸುಗಳಿಗೆ ಅಗೋಚರವಾದ ಸ್ಥಿತಿಯನ್ನು ಹೊಂದು. ಇದಕ್ಕಿಂತ ಮುಂದಿನ ಸ್ಥಿತಿಯನ್ನು ಹೇಳುವಂತಿಲ್ಲ, ಅಂತಹ ಮುಂದಿನ ಸ್ಥಿತಿಯು ಇಲ್ಲವೇ ಇಲ್ಲ. ॥೩೦॥

ಹೀಗೆ ಎಲ್ಲವನ್ನೂ ಬಿಡಲಾಗದಿದ್ದರೆ ನಾನೇ ಬ್ರಹ್ಮವಸ್ತುವೆಂದು ಸದಾಸ್ಮರಿಸು. ಯಾವಾಗಲೂ ಆ ನಿರ್ಗುಣಸ್ವರೂಪವನ್ನು ಭಾವಿಸು. ॥೩೧॥

ಯಾವಾಗಲೂ ಬ್ರಹ್ಮತತ್ವವನ್ನು ಅನುಸಂಧಾನ ಮಾಡುತ್ತಾ, ಆತ್ಮಾನಂದವನ್ನು ಅನುಭವಿಸುತ್ತಾ, ದೋಷರಹಿತನಾಗಿ, ಅಸತ್ಯಸಂಗಿಯಲ್ಲದೇ ವರ್ತಿಸು. ॥೩೨॥

ಸದಾಶಾಂತಃ ಸದಾ ತೃಪ್ತಃ ಸದಾ ಜ್ಯೋತಿಃ ಸದಾರಸಃ ।
ಸದಾ ನಿತ್ಯಃ ಸದಾ ಶುದ್ಧಃ ಸದಾ ಬುದ್ಧಃ ಸದಾಲಯಃ ॥೩೩॥

ಸದಾ ಬ್ರಹ್ಮ ಸದಾ ಮೋದಃ ಸದಾನಂದಃ ಸದಾ ಪರಃ ।
ಸದಾ ಸ್ವಯಂ ಸದಾ ಶೂನ್ಯಃ ಸದಾ ಮೌನೀ ಸದಾ ಶಿವಃ ॥೩೪॥

ಸದಾ ಸರ್ವಂ ಸದಾ ಮಿತ್ರಃ ಸದಾ ಸ್ನಾನಂ ಸದಾ ಜಪಃ ।
ಸದಾ ಸರ್ವಂ ಚ ವಿಸ್ಮೃತ್ಯ ಸದಾ ಮಾನಂ ಪರಿತ್ಯಜ ॥೩೫॥

ದೇಹಾಭಿಮಾನಂ ಸಂತ್ಯಜ್ಯ ಚಿತ್ತಸತ್ತಾಂ ಪರಿತ್ಯಜ ।
ಆತ್ಮೈವಾಹಂ ಸ್ವಯಂ ಚಾಹಂ ಇತ್ಯೇವಂ ಸರ್ವದಾ ಭವ ॥೩೬॥

ಏವಂ ಸ್ಥಿತಸ್ತ್ವಂ ಮುಕ್ತೋಽಸಿ ನತು ಕಾರ್ಯಾ ವಿಚಾರಣಾ ।
ಬ್ರಹ್ಮೈವ ಸರ್ವಂ ಯತ್ಕಿಂಚಿತ್ಸಚ್ಚಿದಾನಂದ ಏವ ಹಿ ॥೩೭॥

---

ಯಾವಾಗಲೂ ಶಾಂತನಾಗಿ, ತೃಪ್ತವಾಗಿ, ಆನಂದರೂಪನಾಗಿ, ಆತ್ಮಜ್ಯೋತಿಯಾಗಿ ಶುದ್ಧನಾಗಿ ಜ್ಞಾನಸ್ವರೂಪನಾಗಿ, ಅಸಂಗನಾಗಿ ನಿತ್ಯನಾಗಿ ಬಾಳು. ॥೩೩॥

ಯಾವಾಗಲೂ ಸಂತಸನಾಗಿ, ಆನಂದನಾಗಿ, ಪರಮಾತ್ಮನಾಗಿ, ಬ್ರಹ್ಮವಸ್ತುವಾಗಿ, ತಾನೇತಾನಾಗಿ, ಸರ್ವಶೂನ್ಯನಾಗಿ, ಮೌನಿಯಾಗಿ ಮಂಗಳರೂಪನಾಗಿ ವ್ಯಾಪಕನಾಗಿ ಬಾಳು. ॥೩೪॥

ಯಾವಾಗಲೂ ಸರ್ವನಾಗಿ, ಸ್ನೇಹರೂಪನಾಗಿ, ಆತ್ಮಸ್ನಾನಪರನಾಗಿ, ಆತ್ಮಜಪವುಳ್ಳವನಾಗಿ ಅಹಂಕಾರವನ್ನು ಬಿಟ್ಟು ಎಲ್ಲವನ್ನೂ ತ್ಯಜಿಸು. ॥೩೫॥

ದೇಹದಲ್ಲಿನ ಮಮತೆಯನ್ನೂ ಮನಸ್ಸಿನ ಅಧೀನತೆಯನ್ನೂ ತ್ಯಜಿಸಿ "ಆತ್ಮನೇ ನಾನು" "ನಾನೇ ನಾನು"—ಎಂದು ಯಾವಾಗಲೂ, ಅನುಸಂಧಾನಮಾಡು. ಹೀಗೆ ನೀನು ಇರುವವನಾದರೆ ಖಂಡಿತವಾಗಿ ಮುಕ್ತನಾಗುವೆ, ಇದರಲ್ಲಿ ಸಂಶಯವಿಲ್ಲ. ॥೩೬॥

ಜಗತ್ತಿನಲ್ಲಿ ಕಾಣಿಸುವುದೆಲ್ಲವೂ ಬ್ರಹ್ಮವಸ್ತುವೇ, ನಾನೂ ಬ್ರಹ್ಮ, ಇದೂ ಬ್ರಹ್ಮ, ನೀನೂ ಬ್ರಹ್ಮ, ಅದು ಸತ್ಯಜ್ಞಾನಾನಂದರೂಪವಾದುದೆಂದು "ಪ್ರಜ್ಞಾನಂ

ಅಹಂ ಬ್ರಹ್ಮ ಇದಂ ಬ್ರಹ್ಮ ತ್ವಂ ಬ್ರಹ್ಮಾಸಿ ನಿರಂತರಂ ।
ಪ್ರಜ್ಞಾನಂ ಬ್ರಹ್ಮ ಏವಾಸ್ಮಿ ತ್ವಂ ಬ್ರಹ್ಮಾಸಿ ನ ಸಂಶಯಃ ॥೩೮॥

ದೃಢನಿಶ್ಚಯಮೇವಂ ತ್ವಂ ಕುರು ಕಲ್ಯಾಣಮಾತ್ಮನಃ ।
ಮನಸೋ ಭೂಷಣಂ ಬ್ರಹ್ಮ ಮನೋಭೂಷಣಕಂ ಪರಃ ॥೩೯॥

ಮನಸೋ ಭೂಷಣಂ ಕರ್ತಾ ಬ್ರಹ್ಮೈವಾಹಮನ್ವೈಕ್ಷತ ।
ಬ್ರಹ್ಮೈವ ಸಚ್ಚಿದಾನಂದಃ ಸಚ್ಚಿದಾನಂದವಿಗ್ರಹಃ ॥೪೦॥

ಸಚ್ಚಿದಾನಂದಮಖಿಲಂ ಸಚ್ಚಿದಾನಂದ ಏವ ಹಿ ।
ಸಚ್ಚಿದಾನಂದಜೀವಾತ್ಮಾ ಸಚ್ಚಿದಾನಂದವಿಗ್ರಹಃ ॥೪೧॥

ಸಚ್ಚಿದಾನಂದಮದ್ವೈತಂ ಸಚ್ಚಿದಾನಂದಶಂಕರಃ ।
ಸಚ್ಚಿದಾನಂದವಿಜ್ಞಾನಂ ಸಚ್ಚಿದಾನಂದಭೋಜನಃ ॥೪೨॥

---

ಬ್ರಹ್ಮ" ಮೊದಲಾದ ವೇದಾಂತ ವಾಕ್ಯಗಳು ಸಾರುವುವು. ಆ ವಾಕ್ಯಗಳನ್ನು ಅಕ್ಷರಶಃ ನಿಜವೆಂದು ನಂಬುವವನಾಗು. ॥೩೭-೩೮॥

ಹೀಗೆ ದೃಢವಾಗಿ ತಿಳಿದುಕೊಂಡು ನೀನು ನಿನಗೆ ಮಂಗಳವನ್ನುಂಟುಮಾಡಿಕೋ, ಬ್ರಹ್ಮನು ಮನಸ್ಸಿಗೆ ಅಲಂಕಾರವು, ಪರಮಾತ್ಮನು ಮನಸ್ಸಿಗೆ ಅಲಂಕಾರನು. ಪರಮೇಶ್ವರನು ಮನಸ್ಸಿಗೆ ಅಲಂಕಾರನು, ಅಂದರೆ ಅನಿತ್ಯವಸ್ತುಗಳನ್ನು ಮನಸ್ಸಿನಿಂದ ಯೋಚಿಸದೆ "ನಾನೇ ಬ್ರಹ್ಮ"ನೆಂದು ಬ್ರಹ್ಮವಸ್ತುವನ್ನೇ ಸದಾ ಧ್ಯಾನಿಸು. ॥೩೯॥

ಸತ್ಯಜ್ಞಾನಾನಂದಗಳೇ ಬ್ರಹ್ಮವಸ್ತುವು, ಸತ್ಯಜ್ಞಾನಾನಂದಸ್ವರೂಪನವನು, ಎಲ್ಲವೂ ಸಚ್ಚಿದಾನಂದಸ್ವರೂಪವು, ಜೀವನೂ ಸಚ್ಚಿದಾನಂದಸ್ವರೂಪನು. ಸಚ್ಚಿದಾನಂದಗಳೇ ದೇಹವನ್ನು ಪಡೆದು ಬಂದಂತೆ ತೋರುವುದೇ ಆತ್ಮವಸ್ತುವು. ॥೪೦-೪೧

ಅದ್ವೈತವು-ಎಂದರೆ ಅದ್ವಿತೀಯವಾದ ಆತ್ಮಸ್ವರೂಪವೂ ಸಹ ಸಚ್ಚಿದಾನಂದವು. ಶಂಕರನು ಸಚ್ಚಿದಾನಂದನು, ಆತ್ಮಜ್ಞಾನವು ಸಚ್ಚಿದಾನಂದವು, ಆತ್ಮನು ಸತ್ಯಜ್ಞಾನಾನಂದಗಳೇ ಭೋಗವಾಗುಳ್ಳವನು. ॥೪೨॥

ಸಚ್ಚಿದಾನಂದಪೂರ್ಣಾತ್ಮಾ ಸಚ್ಚಿದಾನಂದಕಾರಣಃ ।
ಸಚ್ಚಿದಾನಂದಲೋಲಾತ್ಮಾ ಸಚ್ಚಿದಾನಂದನಿರ್ಮಲಃ ॥೪೩॥

ಸಚ್ಚಿದಾನಂದಲೀಲಾತ್ಮಾ ಸಚ್ಚಿದಾನಂದಶೇವಧಿಃ ।
ಸಚ್ಚಿದಾನಂದಸರ್ವಾಂಗಃ ಸಚ್ಚಿದಾನಂದಚಂದನಃ ॥೪೪॥

ಸಚ್ಚಿದಾನಂದಸಿದ್ಧಾಂತಃ ಸಚ್ಚಿದಾನಂದವೇದಕಃ ।
ಸಚ್ಚಿದಾನಂದಶಾಸ್ತ್ರಾರ್ಥಃ ಸಚ್ಚಿದಾನಂದವಾಚಕಃ ॥೪೫॥

ಸಚ್ಚಿದಾನಂದಹೋಮಶ್ಚ ಸಚ್ಚಿದಾನಂದರಾಜ್ಯಕಃ ।
ಸಚ್ಚಿದಾನಂದಪೂರ್ಣಾತ್ಮಾ ಸಚ್ಚಿದಾನಂದಪೂರ್ಣಕಃ ॥೪೬॥

ಸರ್ವಂ ಹಿ ಸಚ್ಚಿದಾನಂದಂ ಮೂಢೇಷು ಪಾಠಿತಂ ಚ ಯತ್ ।
ಶುದ್ಧಂ ಮೂಢೇಷು ಯದ್ದತ್ತಂ ಸ ಬದ್ಧಂ ಮಾರ್ಗಚಾರಿಣಾಂ ॥೪೭॥

---

ಸತ್ಯಜ್ಞಾನಾನಂದಗಳಿಂದ ಆತ್ಮನು ತುಂಬಿರುವನು, ಸತ್ಯಜ್ಞಾನಾನಂದಗಳೇ (ಆತ್ಮನೇ) ಜಗತ್ತಿಗೆ ಕಾರಣವು, ಆತ್ಮನಿಗೆ ಸತ್ಯಜ್ಞಾನಾನಂದಗಳೇ ಲೋಲಾಪ್ತಿಯು. ಸಚ್ಚಿದಾನಂದಗಳೇ ಆತ್ಮನ ನಿರ್ಮಲತೆಯು. ॥೪೩॥

ಆತ್ಮನಿಗೆ ಸತ್ಯಜ್ಞಾನಾನಂದಗಳೇ ಲೀಲೆಯು, ಅವುಗಳೇ ನಿಧಿಯು, ಸತ್ಯಜ್ಞಾನಾನಂದಗಳೇ ಆತ್ಮನಲ್ಲಿ ತುಂಬಿರುವುವು. ಸಚ್ಚಿದಾನಂದಗಳೇ ಆತ್ಮನಿಗೆ ಸುಗಂಧವಸ್ತುಗಳು, ಸಚ್ಚಿದಾನಂದಗಳೇ ಆತ್ಮಭೂಷಣಗಳು. ॥೪೪॥

ಸತ್ಯಜ್ಞಾನಾನಂದಗಳೇ ಸಿದ್ಧಾಂತವು. ಸಚ್ಚಿದಾನಂದಗಳೇ ವೇದಗಳು, ಸತ್ಯಜ್ಞಾನಾನಂದಗಳೇ ಶಾಸ್ತ್ರಾರ್ಥವು, ಸತ್ಯಜ್ಞಾನಾನಂದಗಳೇ ದೇವಕಾರ್ಯಗಳ ವಾಚಕರು. ॥೪೫॥

ಸತ್ಯಜ್ಞಾನಾನಂದಗಳೇ ಹೋಮವು, ಸತ್ಯಜ್ಞಾನಾನಂದಗಳೇ ರಾಜ್ಯವು, ಸತ್ಯಜ್ಞಾನಾನಂದಗಳೇ ಆತ್ಮನಲ್ಲಿ ತುಂಬಿರುವ ಗುಣಗಳು. ಆತ್ಮನೇ ಸಚ್ಚಿದಾನಂದ ಗಳು. ॥೪೬॥

ಒಟ್ಟಿನಲ್ಲಿ ಎಲ್ಲವೂ ಸತ್ಯಜ್ಞಾನಾನಂದಸ್ವರೂಪವು, ಈ ವಿಷಯವು ಅತಿ ದುರ್ಲಭವಾದುದು. ಇದನ್ನು ಮೂಢರಿಗೂ, ವಿಷಯಾಸಕ್ತರಿಗೂ ಅವಿವೇಕಿಗಳಿಗೂ

ವಿಷಯಾಸಕ್ತಚಿತ್ತೇಷು ನ ಸಂಭಾಷ್ಯಾವಿವೇಕಿನಾಂ ।
ಸಕೃಚ್ಛ್ರವಣಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೪೮॥

ಇಚ್ಛಾ ಚೇದ್ಯದಿ ನಾರೀಣಾಂ ಮುಖಂ ಬ್ರಾಹ್ಮಣ ಏವ ಹಿ ।
ಸರ್ವಂ ಚೈತನ್ಯಮಾತ್ರತ್ವಾತ್ ಸ್ತ್ರೀಭೇದಂ ಚ ನ ವಿದ್ಯತೇ ॥೪೯॥

ವೇದಶಾಸ್ತ್ರೇಣ ಯುಕ್ತೋಽಪಿ ಜ್ಞಾನಾಭಾವಾದ್ದ್ವಿಜೋಽದ್ವಿಜಃ ।
ಬ್ರಹ್ಮೈವ ತಂತುನಾ ತೇನ ಬದ್ಧಾಸ್ತೇ ಮುಕ್ತಚಿಂತಕಾಃ ॥೫೦॥

ಸರ್ವಮುಕ್ತಂ ಭಗವತಾ ರಹಸ್ಯಂ ಶಂಕರೇಣ ಹಿ ।
ಸಕೃನ್ಮನನಮಾತ್ರೇಣ ಜೀವನ್ಮುಕ್ತೋ ಭವೇದ್ದ್ವಿಜಃ ॥೫೧॥

---

ಹೇಳಬಾರದು. ಅವರು ಈ ವಿಷಯವನ್ನು ಕೇಳಲೂ ಅನರ್ಹರು. ವಿವೇಕಿಗಳು ಇದನ್ನು ಒಂದುಬಾರಿ ಕೇಳಿದರೂ ಸಾಕು. ಕೂಡಲೇ ಬ್ರಹ್ಮವಸ್ತುವೇ ಆಗುವರು. ॥೪೭-೪೮॥

ಸ್ತ್ರೀಯರೂ ಈ ವಿಷಯವನ್ನು ಕೇಳಬಹುದು, ಎಲ್ಲವೂ ಚೈತನ್ಯಸ್ವರೂಪ ವಾದುದರಿಂದ ಸ್ತ್ರೀಯರೆಂಬ ಕೀಳುಗಣನೆಯ ಭೇದವೂ ಇಲ್ಲ. ಆದರೆ ಇದನ್ನು ಬ್ರಾಹ್ಮಣರಿಂದಲೇ ಕ್ರಮವಾಗಿ ತಿಳಿದುಕೊಳ್ಳಬೇಕು. ಯಾರು ಬ್ರಹ್ಮಸ್ವರೂಪವನ್ನು ಸಂಪೂರ್ಣವಾಗಿ ತಿಳಿದಿರುವರೋ ಅವರೇ ಬ್ರಾಹ್ಮಣರು. ಅಂತೂ ಈ ಬ್ರಹ್ಮ ವಿದ್ಯೆಯು ಗುರೂಪದೇಶದಿಂದ ಬರಬೇಕೇಹೊರತು ಸ್ವಯಂ ಅಷ್ಟು ಸುಲಭವಾಗಿ ದೊರೆಯತಕ್ಕುದಲ್ಲ. ॥೪೯॥

ವೇದಶಾಸ್ತ್ರಗಳನ್ನು ಬಲ್ಲವನಾದ ಬ್ರಾಹ್ಮಣನು ಈ ಆತ್ಮಜ್ಞಾನವಿಲ್ಲದವ ನಾದರೆ ಬ್ರಾಹ್ಮಣನಲ್ಲ. ಆದುದರಿಂದ ಅವಶ್ಯವಾಗಿ ಇದನ್ನು ತಿಳಿಯಬೇಕು. ಆತ್ಮಜ್ಞಾನಿಗಳು ಯಾವಾಗಲೂ ಬ್ರಹ್ಮವೆಂಬ ಸರಪಣಿಯಿಂದ ಬಂಧಿತರಾಗಿರುವರು. ಆ ಬ್ರಹ್ಮಜ್ಞಾನದ ಬಂಧನದಲ್ಲಿ ಪೂರ್ಣವಾಗಿ ನಿಂತೇ ಮುಕ್ತಿಹೊಂದುವರು. ॥೫೦॥

ಈ ಎಲ್ಲ ವಿಷಯವನ್ನೂ ಭಗವಾನ್ ಶಂಕರನೇ ರಹಸ್ಯದೊಡನೆ ಪಾರ್ವತಿಗೆ ಹೇಳಿರುವನು. ಇದನ್ನು ಒಂದು ಬಾರಿ ಅನುಸಂಧಾನಮಾಡಿದವನೂ ಜೀವನ್ಮುಕ್ತ ನಾಗುವನು. ॥೫೧॥

ಸೋಮಾಪೀಡಪದಾಂಬುಜಾರ್ಚನಫಲೈರ್ಭಕ್ತ್ಯೈಕ್ಯವನ್ಮಾನಸಂ
ನಾನ್ಯದ್ಯೋಗಪಥಾ ಶ್ರುತಿಶ್ರವಣತಃ ಕಿಂ ಕರ್ಮಭಿರ್ಭೂತಯೇ ।
ಯುಕ್ತ್ಯಾ ಶಿಕ್ಷಿತಮಾನಸಾನುಭವತೋಽಪ್ಯಾತ್ಮಾಪ್ಯಸಂಗೋವಚಾಂ
ಕಿಂ ಗ್ರಾಹ್ಯೋ ಭವತೀಂದ್ರಿಯಾರ್ಥರಹಿತೋಽನಂದೈಕಸಾಂದ್ರಃ ಶಿವಃ॥೫೨॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ತ್ರಯೋವಿಂಶೋಽಧ್ಯಾಯಃ.

---

ಶ್ರೀಶಂಕರನನ್ನು ಅರ್ಚಿಸಿದರೇ ಇಂತಹ ಜ್ಞಾನವು ಉದಯಿಸಿ ಬ್ರಹ್ಮ ಸಾಕ್ಷಾತ್ಕಾರವಾಗುವುದು. ಇಂದ್ರಿಯಾರ್ಥಗಳಿಗೆ ಅಗೋಚರನಾದ ಮತ್ತು ಆನಂದ ರೂಪನಾದ, ನಿರವಯವನಾದ, ವಾಕ್ಕುಗಳಿಗೆ ವಿಷಯನಲ್ಲದ ಪರಮಾತ್ಮನು ಯೋಗಾಭ್ಯಾಸದಿಂದ ಲಭಿಸಲಾರನು, ವೇದಾಧ್ಯಯನದಿಂದ ಲಭಿಸಲಾರನು, ಕರ್ಮಗಳಿಂದ ದೊರಕಲಾರನು, ಮಿತಿಯಿಲ್ಲದ ತರ್ಕಗಳಿಂದಲೂ ಸಿದ್ಧನಾಗಲಾರನು. ಇಂತಹ ಸತ್ಯಜ್ಞಾನಾನಂದಬ್ರಹ್ಮರೂಪನಾದ ಶಂಕರನಿಗೆ ನಮಸ್ಕಾರವು. ಎಂದು ಋಭುಮಹಾಮುನಿಯು ನಿದಾಘಋಷಿಗೆ ಶಂಕರನ ಪೂಜಾಮಹಿಮೆಯನ್ನು ಈರೀತಿ ವಿವರಿಸಿದನು. ॥೬೨॥

ಶ್ರೀ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಇಪ್ಪತ್ತಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀಶಿವಾಯ ನಮಃ ॥

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಚತುರ್ವಿಂಶೋಽಧ್ಯಾಯಃ

॥ ಋಭುರುವಾಚ ॥

ಪುನಃ ಪುನಃ ಪರಂ ವಕ್ಷ್ಯೇ ಆತ್ಮನೋಽನ್ಯದಸತ್ತ್ವತಃ ।
ಅಸತೋಽವಚನಂ ನಾಸ್ತಿ ಸತೋ ನಾಸ್ತಿ ಸದಾ ಸ್ಥಿತೇ ॥೧॥

ಬ್ರಹ್ಮಾಭ್ಯಾಸರಹಸ್ಯಂ ಚ ವಕ್ಷ್ಯೇ ನಿರ್ಣಯಮಾತ್ಮನಃ ।
ತಸ್ಯಾಪಿ ಸಕೃದೇವಾಹಂ ಶಿವಂ ಮಂಗಳಪೂರ್ವಕಂ ॥೨॥

---

## ಇಪ್ಪತ್ತುಮೂರನೆಯ ಅಧ್ಯಾಯ

ಋಭುವು ನಿದಾಘಮುನಿಯೊಡನೆ ಮತ್ತೆ ಹೀಗೆಂದನು.—ಎಲೈ ನಿದಾಘ ಮುನಿಯೇ, ಆತ್ಮನ ಹೊರತಾಗಿ ತೋರುವುದೆಲ್ಲವೂ ಅಸತ್ಯವಾದವುಗಳು. ಅಸತ್ಯಕ್ಕೆ ವ್ಯವಹಾರವೂ ಇಲ್ಲ ; ಅದರಂತೆಯೇ ಯಾವಾಗಲೂ ಇರುವ ಸದ್ವಸ್ತುವಿಗೂ.. ಅಂದರೆ ಇವುಗಳನ್ನು ಮಾತಿನಿಂದ ಸುಲಭವಾಗಿ ತಿಳಿಯಪಡಿಸಲಾಗುವುದಿಲ್ಲ. ॥೧॥

ಮಂಗಳರೂಪನಾದ ಶಿವನನ್ನು ಧ್ಯಾನಿಸಿ ಬ್ರಹ್ಮಾಭ್ಯಾಸದ ರಹಸ್ಯವನ್ನೂ ಆತ್ಮನಿರ್ಣಯವನ್ನೂ ಈಗ ನಿನಗೆ ಹೇಳುವೆನು. ಏಕೆಂದರೆ ಸಕಲ ವಿಧವಾದ ಜ್ಞಾನೋಪಲಬ್ಧಿಗೂ, ಉಪದೇಶಕ್ಕೂ, ಸಿದ್ಧಿಗೂ ಶಿವಪೂಜೆಯೇ ಆರಂಭದಲ್ಲಿ ನಡೆಸಬೇಕಾದ ಕಾರ್ಯ. ॥೨॥

ಸರ್ವಂ ಬ್ರಹ್ಮಾಹಮೇವಾಸ್ಮಿ ಚಿನ್ಮಾತ್ರೋ ನಾಸ್ತಿ ಕಿಂಚನ ।
ಅಹಮೇವ ಪರಂ ಬ್ರಹ್ಮ ಅಹಮೇವ ಚಿದಾತ್ಮಕಃ ॥೩॥

ಅಹಂ ಮಮೇತಿ ನಾಸ್ತ್ಯೇವ ಅಹಂ ಜ್ಞಾನೀತಿ ನಾಸ್ತಿ ಚ ।
ಶುದ್ಧೋಽಹಂ ಬ್ರಹ್ಮರೂಪೋಽಹಮಾನಂದೋಽಹಮಜೋ ಜರಃ ॥೪॥

ದೇವೋಽಹಂ ದಿವ್ಯಭಾನೋಽಹಂ ತುರ್ಯೋಽಹಂ ಭವಭಾವ್ಯಹಂ ।
ಅಂಡಜೋಽಹಮಶೇಷೋಽಹಮಂತರಾದಂತರೋಽಸ್ಮ್ಯಹಂ ॥೫॥

ಅಮಲೋಽಹಮಜಸ್ರೋಽಹಮತ್ಯಂತಂ ಪರಮೋಽಸ್ಮ್ಯಹಂ ।
ಶಾಂತಾಶಾಂತವಿಹೀನೋಽಹಂ ಆತ್ಮಾನಾತ್ಮವಿವರ್ಜಿತಃ ॥೬॥

ಲಬ್ಧಾಲಬ್ಧಾದಿಹೀನೋಽಹಂ ಜ್ಞಾನಾಜ್ಞಾನರಸೋಽಸ್ಮ್ಯಹಂ ।
ಪರಾಪರಸ್ವರೂಪೋಽಹಂ ನಿತ್ಯಾನಿತ್ಯರಸೋಽಸ್ಮ್ಯಹಂ ॥೭॥

---

ಎಲ್ಲವೂ ಬ್ರಹ್ಮವಸ್ತುವು, ನಾನೂ ಚೈತನ್ಯಸ್ವರೂಪನಾದ ಬ್ರಹ್ಮವಸ್ತುವು, ಪರಬ್ರಹ್ಮನೂ ನಾನೇ, ನನ್ನ ಹೊರತು ಏನೂ ಇಲ್ಲ, ಜಗತ್ತೆಲ್ಲವೂ ಆತ್ಮಮಯವೇ. ॥೩॥

"ನಾನು, ನನ್ನದು" ಎನ್ನುವ ವ್ಯವಹಾರವೇ ಇಲ್ಲ, ನಾನು ಜ್ಞಾನಿಯೆನ್ನುವುದೂ ಇಲ್ಲ, ಶುದ್ಧಸ್ವರೂಪನು ನಾನು, ಬ್ರಹ್ಮಸ್ವರೂಪನು ನಾನು, ಆನಂದಮೂರ್ತಿಯು ನಾನು, ಜನನಾದಿವಿಕಾರಗಳಿಲ್ಲದವನು ನಾನು, ನನಗೆ ಯೌವನ ವಾರ್ಧ್ಯಕ್ಯಾದಿಗಳು ಎಂದೂ ಇರುವುದಿಲ್ಲ. ॥೪॥

ದೇವನು ನಾನು, ದಿವ್ಯಪ್ರಕಾಶನು ನಾನು, ಜಗನ್ಮಯನು ನಾನು, ರಹಸ್ಯವಸ್ತುಗಳೊಳಗಿನ ರಹಸ್ಯವಸ್ತುವು ನಾನು. ಅಂಡಜಾದಿಗಳಂತೆಯೂ ಬ್ರಹ್ಮಾಂಡಗಳಂತೆಯೂ ತೋರುತ್ತಾ, ಅದರ ಅಂತರ್ಭಾಗದಲ್ಲಿ ಸೂಕ್ಷ್ಮರೂಪದಿಂದಿರುವವನೂ ನಾನೇ. ॥೫॥

ನಿರ್ಮಲನು ನಾನು, ಸಂತತನು ನಾನು, ಪರಮಾತ್ಮನು ನಾನು, ಶಾಂತತ್ವಾಶಾಂತತ್ವಗಳಿಲ್ಲದವನು ನಾನು, ಆತ್ಮ-ಅನಾತ್ಮಗಳೆಂಬ ಭೇದಗಳಿಲ್ಲದವನು ನಾನು. ॥೬॥

ಲಾಭನ್ಯೂನಾದಿಗಳು ನನಗಿಲ್ಲ, ಜ್ಞಾನಾಜ್ಞಾನಗಳ ರಸವು ನಾನು, ಪರಾಪರ

ಇತ್ಯಾದಿವಾಕ್ಯಮುಕ್ತೋऽಹಂ ಸರ್ವವರ್ಜಿತದುರ್ಜಯಃ ।
ನಿರಂತರೋऽಹಂ ಭೂತೋऽಹಂ ಭಾವ್ಯೋऽಹಂ ಭಯವರ್ಜಿತಃ ॥೮॥

ಲಕ್ಷ್ಯಲಕ್ಷಣಹೀನೋऽಹಂ ಕಾರ್ಯಹೀನೋऽಹಮಾಶುಗಃ ।
ವ್ಯೋಮಾದಿರೂಪಹೀನೋऽಹಂ ವ್ಯೋಮರೂಪೋऽಹಮಚ್ಯುತಃ ॥೯॥

ಅಂತರಾಂತರಭಾವೋऽಹಮಂತರಾಂತರವರ್ಜಿತಃ ।
ಸರ್ವಸಿದ್ಧಾಂತರೂಪೋऽಹಂ ಸರ್ವದೋಷವಿವರ್ಜಿತಃ ॥೧೦॥

ಸನ್ಮಯಾನಂದಮಾತ್ರೋऽಹಮಖಂಡೈಕರಸೋऽಂಬರಃ ।
ಭಯಶ್ಶಾಂತಸ್ಸದಾ ಸೋऽಹಮಹಂ ಸೋऽಹಂ ಮಹಾನಹಂ ॥೧೧॥

---

ಸ್ವರೂಪನು ನಾನು, ನಿತ್ಯಾನಿತ್ಯಗಳ ರಸಸ್ವರೂಪನು ನಾನು. ಅಂದರೆ ಸಮಸ್ತ ವಸ್ತುಗಳಲ್ಲಿಯೂ ಸಾರಭೂತನಾಗಿರುವವನು ನಾನೇ. ॥೭॥

ಇಂತಹ ಸ್ವರೂಪನು ನಾನು-ಎಂದು ಮುಂತಾದ ವಾಕ್ಯಗಳು ಯಾವ ಶಾಸ್ತ್ರದಲ್ಲಿಯೂ ನನಗಿಲ್ಲ, ಎಲ್ಲೆಡೆಯಲ್ಲೂ ಹರಡಿರುವವನು ನಾನು. ಭೂತಭವಿಷ್ಯದ್ವರ್ತಮಾನಗಳು ನಾನು, ಮತ್ತು ನಿರ್ಭಯನು ನಾನು, ಯಾರಿಂದಲೂ ಯಾವಾಗಲೂ ನನಗೆ ಭಯಾದಿಗಳು ತಟ್ಟಲಾರವು. ॥೮॥

ಲಕ್ಷ್ಯಲಕ್ಷಣಗಳು ನನಗಿಲ್ಲ. ಕಾರ್ಯವು ನನಗಿಲ್ಲ, ವೇಗವಾಗಿ ಸಂಚರಿಸುವವನು ನಾನು; ಆಕಾಶಾದಿಭೂತಗಳು ನನಗಿಲ್ಲ, ಆಕಾಶದಂತೆ ಸರ್ವ ವ್ಯಾಪಕನು ನಾನಾಗಿರುವೆನು. ಆದ್ದರಿಂದಲೇ ನಾನು ವಿಭುವೆನಿಸಿರುವೆನು. ॥೯॥

ರಹಸ್ಯ ಮಹಾರಹಸ್ಯವಸ್ತುಗಳೆಲ್ಲವೂ ನಾನು, ರಹಸ್ಯ ಮಹಾರಸ್ಯಗಳೆನ್ನುವುದೂ ನನಗಿಲ್ಲ. ಎಲ್ಲ ಸಿದ್ಧಾಂತಗಳ ಸ್ವರೂಪನು ನಾನು, ನನ್ನಲ್ಲಿ ಯಾವ ದೋಷಗಳೂ ಇಲ್ಲ. ಯಾವ ದೋಷಗಳಲ್ಲಿಯೂ ನಾನು ಸೇರುವವನಲ್ಲ. ॥೧೦॥

ಸತ್ಯರೂಪವಾದ ಆನಂದನು ನಾನು, ಪರಿಪೂರ್ಣವಾದ ವ್ಯಾಪಕವಾದ ಸ್ವರೂಪನು ನಾನು, ಎಲ್ಲರಿಗೂ ಭಯಜನಕನು ನಾನು, ಆ ಪರಮಾತ್ಮನು ನಾನು, ನಾನೇ ಆ ಪರಮಾತ್ಮನು, ಮಹದ್ವಸ್ತುವು ನಾನು. ॥೧೧॥

ತೃಪ್ತೋಽಹಂ ದೇಹಹೀನೋಽಹಂ ಚಿತ್ತಸಂಸಾರವರ್ಜಿತಃ ।
ಮಹಾನಹಂ ವರಿಷ್ಠೋಽಹಂ ಸಾರಾಸಾರವಿವರ್ಜಿತಃ ॥೧೨॥

ನ ಕದಾಚನ ಮುಕ್ತೋಽಹಂ ನ ಬದ್ಧೋಽಹಂ ಕದಾಚನ ।
ಏವಮೇವ ಸದಾ ಕೃತ್ವಾ ಬ್ರಹ್ಮೈವಾಹಮಿತಿ ಸ್ಮರ ॥೧೩॥

ಏತಾವದೇವಮಾತ್ರಂ ತು ಮುಕ್ತೋ ಭವತಿ ನಿಶ್ಚಯಃ ।
ಚಿನ್ಮಾತ್ರೋಽಹಂ ಶಿವೋಽಹಂ ವೈ ಶುಭಮಾತ್ರಮಹಂ ಸದಾ ॥೧೪॥

ಸದಾಕಾರಾದಿಮುಕ್ತೋಽಹಂ ಸದಾ ವಾಚಾಮಗೋಚರಃ ।
ಸರ್ವದಾ ಪರಿಪೂರ್ಣೋಽಹಂ ವೇದೋಽಪಾಧಿವಿವರ್ಜಿತಃ ॥೧೫॥

ಚಿತ್ತಕಾರ್ಯವಿಹೀನೋಽಹಂ ಚಿತ್ತಮಸ್ತೀತಿ ಮೇ ನಹಿ ।
ಯತ್ಕಿಂಚಿದಪಿ ನಾಸ್ತ್ಯೇವ; ನಾಸ್ತ್ಯೇವ ಪ್ರಿಯಭಾಷಣಂ ॥೧೬॥

---

ನಿತ್ಯತೃಪ್ತನು ನಾನು, ದೇಹವು ನನಗಿಲ್ಲ, ಮನಸ್ಸಂಸಾರಗಳು ನನಗಿಲ್ಲ, ಸರ್ವೋತ್ತಮನು ನಾನು, ಸಾರಾಸಾರವಸ್ತುಗಳು ನನಗಿಲ್ಲ. ಎಲ್ಲ ವಸ್ತುಗಳಂತೆ ನಾನು ತೋರಿಬಂದರೂ ವಾಸ್ತವವಾಗಿ ನಾನು ಯಾವ ವಸ್ತುಗಳಲ್ಲಿಯೂ ಅಡಗಿದವನಲ್ಲ. ॥೧೨॥

ನಾನು ಸತ್ಯವಾಗಿ ಮುಕ್ತನೂ ಅಲ್ಲ, ಬದ್ಧನೂ ಅಲ್ಲ,— ಎಂದು ತಿಳಿದು "ಯಾವಾಗಲೂ ನಾನು ಬ್ರಹ್ಮವಸ್ತುವೇ" ಎಂದು ಅನುಸಂಧಾನಮಾಡು. ॥೧೩॥

ಹೀಗೆ ತಿಳಿದಿರುವವನೇ ನಿಜವಾಗಿ ಮುಕ್ತನಾಗುವನು. ಚೈತನ್ಯಸ್ವರೂಪನು ನಾನು, ಶಿವನು ನಾನು, ಶುಭವು ನಾನು, ಶುಭಮಾತ್ರನಾಗಿರುವವನೂ ನಾನೇ. ॥೧೪॥

ನನಗೆ ಯಾವಾಗಲೂ ಆಕಾರವಿಲ್ಲವು, ವಾಕ್ಕಿಗೆ ಸಿಕ್ಕದವನು ನಾನು. ಸದಾ ನಾನು ಪರಿಪೂರ್ಣನು, ತಿಳಿಯಲ್ಪಡುವ ಉಪಾಧಿ(ಸ್ಥಾನ)ಗಳಾವುವೂ ನನಗಿಲ್ಲ. ॥೧೫

ಮನಸ್ಸಿನ ಕಾರ್ಯಗಳು ನನಗಿಲ್ಲ; ಮನಸ್ಸು ನನಗಿಲ್ಲ, ಪ್ರಿಯವಾದ ಮಾತು ಕಠಿಣಮಾತು-ಎನ್ನುವುದಾವುದೂ ನನಗಿಲ್ಲವೇ ಇಲ್ಲ. ಯಾವ ವಿಧವಾದ ವಾಕ್ಕಿಗೂ, ಎಂತಹ ಕ್ರಿಯೆಗೂ ನಾನು ಸಿಕ್ಕಲಾರೆನು. ॥೧೬॥

ಆತ್ಮಪ್ರಿಯಮನಾತ್ಮಾ ಹಿ ಇದಂ ಮೇ ವಸ್ತುತೋ ನಹಿ ।
ಇದಂ ದುಃಖಮಿದಂ ಸೌಖ್ಯಮಿದಂ ಭಾನಮಹಂ ನಹಿ ॥೧೭॥

ಸರ್ವವರ್ಜಿತರೂಪೋಽಹಂ ಸರ್ವವರ್ಜಿತ ಚೇತನಃ ।
ಅನಿರ್ವಾಚ್ಯಮನಿರ್ವಾಚ್ಯಂ ಪರಂ ಬ್ರಹ್ಮರಸೋಽಸ್ಮ್ಯಹಂ ॥೧೮॥

ಅಹಂ ಬ್ರಹ್ಮ ನ ಸಂದೇಹೋ ಅಹಮೇವ ಪರಾತ್ಪರಃ ।
ಅಹಂ ಚೈತನ್ಯಭೂತಾತ್ಮಾ ದೇಹೋ ನಾಸ್ತಿ ಕದಾಚನ ॥೧೯॥

ಲಿಂಗದೇಹಂ ಚ ನಾಸ್ತ್ಯೇವ ಕಾರಣಂ ದೇಹಮೇವ ನ ।
ಅಹಂತ್ಯಕ್ತ್ವಾ ಪರಂ ಚಾಹಂ ಅಹಂ ಬ್ರಹ್ಮ ಸ್ವರೂಪತಃ ॥೨೦॥

ಕಾಮಾದಿವರ್ಜಿತೋಽತೀತಃ ಕಾಲಭೇದಪರಾತ್ಪರಃ ।
ಬ್ರಹ್ಮೈವೇದಂ ನ ಸಂವೇದ್ಯಂ ನಾಹಂ ಭಾವಂ ನಚಾ ನಹಿ ॥೨೧॥

---

ಆತ್ಮನಿಗೆ ಪ್ರಿಯವಾದಂತಹ ಸುಖವಸ್ತುವಾಗಲೀ ದುಃಖವಸ್ತುವಾಗಲೀ ಲೋಕದಲ್ಲಿ ಇಲ್ಲ. ಅನಾತ್ಮವಸ್ತುಗಳಿಗೆ ಆತ್ಮನ ಹೊರತು ಪ್ರಕಾಶವೇ ಇಲ್ಲ, ಅವು ಇಲ್ಲವೂ ಇಲ್ಲ, ಆತ್ಮಭಿನ್ನವಾದ ತೇಜಸ್ಸೇ ಪ್ರಪಂಚದಲ್ಲಿ ಕಂಡುಬರಲಾರದು. ॥೧೭॥

ಯಾವ ವಿಶೇಷವೂ ಇಲ್ಲದ, ವಿಕಾರವೂ ಇಲ್ಲದ ಚೈತನ್ಯಮಾತ್ರಸ್ವರೂಪನು ನಾನು. ಇಂದ್ರಿಯಗಳಿಗೆ ಅಗೋಚರನಾದ ಪರಬ್ರಹ್ಮನು ನಾನು. ನಿರ್ವಚನಮಾಡಿ ತಿಳಿಸಲಾಗದ ಬ್ರಹ್ಮವಸ್ತುವೂ ನಾನು. ಸರ್ವರಸರೂಪಿಯಾದ ಪರಮಾತ್ಮನೂ ನಾನೇ. ॥೧೮॥

ನಾನೇ ಬ್ರಹ್ಮವಸ್ತುವು, ನಾನೇ ಪರವಸ್ತುವು, ನಾನು ಚೈತನ್ಯಸ್ವರೂಪನು, ದೇಹವು ಯಾವಾಗಲೂ ನನಗಿಲ್ಲ, ಈ ವಿಷಯದಲ್ಲಿ ಸಂದೇಹವಿಲ್ಲ. ॥೧೯॥

ಸ್ಥೂಲಸೂಕ್ಷ್ಮ ಕಾರಣದೇಹಗಳು ನನಗಿಲ್ಲ. ನಾನು-ಇನ್ನೊಬ್ಬನು ಎಂಬ ಭೇದವೂ ಇಲ್ಲ, ಇಂತಹ ಭೇದವಿಲ್ಲದ ಬ್ರಹ್ಮಸ್ವರೂಪನು ನಾನು. ॥೨೦॥

ಕಾಮಕ್ರೋಧಾದಿಗಳು ನನಗಿಲ್ಲ, ಕಾಲಭೇದವು ನನಗಿಲ್ಲ, ಅಹಂಕಾರವು ನನಗಿಲ್ಲ, ಜ್ಞಾನರೂಪವಾದ ಬ್ರಹ್ಮವಸ್ತುವೇ ನಾನು, ಈ ಜಗತ್ತೆಲ್ಲವೂ ಬ್ರಹ್ಮ ವಸ್ತುವೇ. ॥೨೧॥

ಸರ್ವಸಂಶಯಸಂಶಾಂತೋ ಬ್ರಹ್ಮೈವಾಹಮಿತಿಸ್ಥಿತಿಃ ।
ನಿಶ್ಚಯಂ ನ ಚ ಮೇ ಕಿಂಚಿಚ್ಚಿತ್ತಾಭಾವಾತ್ ಸದಾಽಕ್ಷರಃ ॥೨೨॥

ಚಿದಹಂ ಚಿದಹಂ ಬ್ರಹ್ಮ ಚಿದಹಂ ಚಿದಹಂ ಸದಾ ।
ಏವಂ ಭಾವನಯಾ ಯುಕ್ತಃ ತ್ಯಕ್ತಶಂಕಃ ಸುಖೀಭವ ॥೨೩॥

ಸರ್ವಸಂಗಂ ಪರಿತ್ಯಜ್ಯ ಆತ್ಮೈಕ್ಯೇವಂ ಭವಾನ್ವಹಂ ।
ಸಂಗಂ ನಾಮ ಪ್ರವಕ್ಷ್ಯೇಽಹಂ ಬ್ರಹ್ಮಾಹಮಿತಿ ನಿಶ್ಚಯಃ ॥೨೪॥

ಸತ್ಯೋಽಹಂ ಪರಮಾತ್ಮಾಹಂ ಸ್ವಯಮೇವ ಸ್ವಯಂ ಸ್ವಯಂ ।
ನಾಹಂ ದೇಹೋ ನಚ ಪ್ರಾಣೋ ನ ದ್ವಂದ್ವೋ ನಚ ನಿರ್ಮಲಃ ॥೨೫॥

ಏವಮೇವ ಹಿ ಸತ್ಸಂಗ ಏಷ ಏವ ಹಿ ನಿರ್ಮಲಃ ।
ಮಹತ್ಸಂಗೋ ಮಹದ್ಬ್ರಹ್ಮಭಾವನಂ ಪರಮಂ ಪದಂ ॥೨೬॥

---

ಬ್ರಹ್ಮನೇ ನಾನು, ಮನಸ್ಸು ನನಗಿಲ್ಲದುದರಿಂದ ಯಾವ ಇತರ ಸಂಶಯಯುಗಳಾಗಲೀ ನಿಶ್ಚಯಗಳಾಗಲೀ ನನಗಿಲ್ಲ, ಸದಾ ನಾನು ನಿತ್ಯನು. ॥೨೨॥

ಚೈತನ್ಯಸ್ವರೂಪನು ನಾನು, ಚೈತನ್ಯಸ್ವರೂಪವೇ ಬ್ರಹ್ಮವಸ್ತುವು, ಆದುದರಿಂದ ನಾನೇ ಬ್ರಹ್ಮವಸ್ತುವು. ಎಂಬ ಭಾವನೆಯುಳ್ಳವನಾಗಿ ಸಂಶಯಗಳನ್ನು ಬಿಟ್ಟು ಸುಖಿಯಾಗು. ॥೨೩॥

ಇತರ ಎಲ್ಲಾ ಸಂಗಗಳನ್ನೂ ಬಿಟ್ಟು ಆತ್ಮೈಕ್ಯದಲ್ಲಿ ಸಂಗವುಳ್ಳವನಾಗು. ಬ್ರಹ್ಮನೇ ನಾನು-ಎನ್ನುವ ನಿಶ್ಚಯವೇ ನಿಜವಾದ ಸಂಗವು, ಅಂದರೆ ಆಸಕ್ತಿಯು ಅದೊಂದನ್ನೇ ಆಶ್ರಯಿಸು. ॥೨೪॥

ಸತ್ಯವು ನಾನು, ಪರಮಾತ್ಮನು ನಾನು, ನಾನೇ ನಾನು. ದೇಹವು ನಾನಲ್ಲ, ಪ್ರಾಣವು ನಾನಲ್ಲ, ಸುಖದುಃಖಾದಿ ದ್ವಂದ್ವಗಳು ನನಗಿಲ್ಲ. ಸದಾ ಶುದ್ಧನಾದ ನನಗೆ ಶುದ್ಧತೆಯೆಂಬುದೂ ಇಲ್ಲ, ಅದ್ವಿತೀಯ ಬ್ರಹ್ಮರೂಪನು ನಾನು. ॥೨೫॥

ಈರೀತಿಯಾದ ಭಾವನೆಯೇ ಸತ್ಸಂಗವು, ಇದೇ ನಿರ್ಮಲತೆಯು, ನಾನೇ ಬ್ರಹ್ಮನೆಂಬ ಭಾವನೆಯೇ ನಿಜವಾದ ಸಂಗವು, ಅದೇ ಪರಮಪದವಿಯು, ಮಹದ್ಬ್ರಹ್ಮಭಾವನೆಯೇ ಮುಕ್ತಿಯು. ॥೨೬॥

ಅಹಂ ಶಾಂತಪ್ರಭಾವೋಽಹಂ ಅಹಂ ಬ್ರಹ್ಮ ನ ಸಂಶಯಃ ।
ಅಹಂ ತ್ಯಕ್ತಸ್ವರೂಪೋಽಹಮಹಂ ಚಿತ್ತಾದಿವರ್ಜಿತಃ ॥೨೭॥

ಏಷ ಏವ ಹಿ ಸತ್ಸಂಗಃ ಏಷ ನಿತ್ಯಂ ಭವಾನಹಂ ।
ಸರ್ವಸಂಕಲ್ಪಹೀನೋಽಹಂ ಸರ್ವವೃತ್ತಿವಿವರ್ಜಿತಃ ॥೨೮॥

ಅಮೃತೋಽಹಮಜೋ ನಿತ್ಯಂ ಮೃತಿಭೀತಿರತೀತಕಃ ।
ಸರ್ವಕಲ್ಯಾಣರೂಪೋಽಹಂ ಸರ್ವದಾ ಪ್ರಿಯರೂಪವಾನ್ ॥೨೯॥

ಸಮಲಾಂಗೋ ಮಲಾತೀತಃ ಸರ್ವದಾಹಂ ಸದಾನುಗಃ ।
ಅಹಂ ಪರಿಚ್ಛಿನ್ನಸನ್ಮಾತ್ರಂ ಸತ್ಯಜ್ಞಾನಸ್ವರೂಪವಾನ್ ॥೩೦॥

ನಾದಾಂತರೋಽಹಂ ನಾದೋಽಹಂ ನಾಮರೂಪವಿವರ್ಜಿತಃ ।
ಅತ್ಯಂತಭಿನ್ನಹೀನೋಽಹಮಾದಿಮಧ್ಯಾಂತವರ್ಜಿತಃ ॥೩೧॥

---

ಶಾಂತವಾದ ಪ್ರಭಾವವುಳ್ಳವನು ನಾನು, ನಾನೇ ಬ್ರಹ್ಮನು, ಇದರಲ್ಲಿ ಸಂಶಯವಿಲ್ಲ. ಅಹಂಕಾರವಿಲ್ಲದ ಸ್ವರೂಪನು ನಾನು, ಮನಸ್ಸು ಮೊದಲಾದುವು ನನಗಿಲ್ಲ. ॥೨೭॥

ಈ ಮೇಲಿನ ಭಾವನೆಯೇ ನಿಜವಾದ ಸಂಗವು, ನನಗೆ ಯಾವ ಸಂಕಲ್ಪಗಳೂ ಇಲ್ಲ, ಯಾವ ವ್ಯಾಪಾರಗಳೂ ಇಲ್ಲ,-ಎನ್ನುವುದೇ ನಿಜವಾದ ಸತ್ಸಂಗವು. ॥೨೮॥

ಅಮೃತನು ನಾನು, ಆದುದರಿಂದಲೇ ನನಗೆ ಮರಣಭಯವಿಲ್ಲ, ಜನನವು ನನಗಿಲ್ಲ. ಸರ್ವಮಂಗಳರೂಪನು ನಾನು. ಎಲ್ಲರಿಗೂ ಬೇಕಾದವನು ನಾನು. ॥೨೯॥

ಮಲಿನವಾದ ಶರೀರದಲ್ಲಿದ್ದರೂ ನಾನು ನಿರ್ಮಲನು, ಚಿಕ್ಕದೇಹದಲ್ಲಿದ್ದರೂ ನಾನು ವ್ಯಾಪಕನು, ಅನಿತ್ಯದೇಹದಲ್ಲಿದ್ದರೂ ನಾನು ನಿತ್ಯರೂಪನು, ಜಡದೇಹದಲ್ಲಿದ್ದರೂ ನಾನು ಚೇತನನು. ॥೩೦॥

ನಾದದಲ್ಲಿ ಅಡಗಿರುವವನೂ ನಾನು. ನಾದವೂ ನಾನು. ನಾಮರೂಪಗಳು ನನಗಿಲ್ಲ, ಭೇದಗಳು ನನಗಿಲ್ಲ, ಆದಿಮಧ್ಯ ಅಂತ್ಯಗಳು ನನಗಿಲ್ಲ. ॥೩೧॥

ಏವಂ ನಿತ್ಯಂ ದೃಢಾಭ್ಯಾಸೋ ಏವಂ ಸ್ವಾನುಭವೇನ ಚ ।
ಏವಮೇವ ಹಿ ನಿತ್ಯಾತ್ಮಭಾವೇನ ಚ ಸುಖೀ ಭವ ॥೩೨॥

ಏವಮಾತ್ಮಸುಖಂ ಪ್ರಾಪ್ತೋ ಪುನರ್ಜನ್ಮ ನ ಸಂಭವೇತ್ ।
ಸದ್ಯೋಮುಕ್ತೋ ಭವೇದ್ಬ್ರಹ್ಮಾಕಾರಣೇ ಪರಿತಿಷ್ಠತಿ ॥೩೩॥

ಆತ್ಮಾಕಾರಮಿದಂ ವಿಶ್ವಮಾತ್ಮಾಕಾರಮಹಂ ಮಹತ್ ।
ಆತ್ಮೈವ ನಾನ್ಯದ್ಭೂತಂ ವಾ ಆತ್ಮೈವ ಮನ ಏವ ಹಿ ॥೩೪॥

ಆತ್ಮೈವ ಚಿತ್ತವದ್ಭಾತಿ ಆತ್ಮೈವ ಸ್ಮೃತಿವತ್ ಕ್ವಚಿತ್ ।
ಆತ್ಮೈವ ವೃತ್ತಿವದ್ಭಾತಿ ಆತ್ಮೈವ ಕ್ರೋಧವತ್ಸದಾ ॥೩೫॥

ಆತ್ಮೈವ ಶ್ರವಣಂ ತದ್ವದಾತ್ಮೈವ ಮನನಂ ಚ ತತ್ ।
ಆತ್ಮೈವೋಪಕ್ರಮಂ ನಿತ್ಯಮುಪಸಂಹಾರಮಾತ್ಮವತ್ ॥೩೬॥

---

ಹೀಗೆ ನಿತ್ಯವೂ ಸ್ವಾನುಭವದಿಂದ ದೃಢವಾದ ಅಭ್ಯಾಸಮಾಡಬೇಕು. ಇಂತಹ ನಿತ್ಯಾತ್ಮ ಭಾವನೆಯಿಂದ ನೀನು ಸುಖಿಯಾಗು. ಆದರಿಂದಲೇ ಸುಖವು ಲಭಿಸುವುದು. ಮಿಕ್ಕೆಲ್ಲ ಸುಖಗಳೂ ಸುಖಾಭಾಸಗಳು. ನಿಜವಾದ ಸುಖವಲ್ಲ. ॥೩೨॥

ಹೀಗೆ ನಿತ್ಯಾತ್ಮಸುಖವನ್ನು ಹೊಂದಿದರೆ ಅವನಿಗೆ ಪುನರ್ಜನ್ಮವೇ ಇಲ್ಲ. ಸದ್ಯಃ ಮುಕ್ತನಾಗಿ ಅವನು ಬ್ರಹ್ಮವಸ್ತುವಿನಲ್ಲಿ ಐಕ್ಯನಾಗುವನು. ॥೩೩॥

ಈ ಜಗತ್ತೆಲ್ಲವೂ ಆತ್ಮರೂಪವಾದುದು ; ನಾನೂ ಪರಮಾತ್ಮರೂಪನು. ಪರಮಾತ್ಮನ ಹೊರತಾಗಿ ಯಾವುದೂ ಇಲ್ಲ, ಆತ್ಮವೇ ಮನವು. ಆತ್ಮನಿಂದಲೇ ಸಕಲ ವಸ್ತುಗಳೂ ಸ್ಫುರಿಸುವುವು. ॥೩೪॥

ಆತ್ಮನೇ ಕೆಲವೆಡೆ ಮನಸ್ಸಿನಂತೆ ಪ್ರಕಾಶಿಸುವನು. ಆತ್ಮವು ಸ್ಮರಣೆಯಂತೆ ಕೆಲವೆಡೆ ಪ್ರಕಾಶಿಸುವುದು. ವೃತ್ತಿಯಂತೆ ಒಮ್ಮೆ ತೋರುವುದು, ಕೋಪದಂತೆ ಒಮ್ಮೆ ಸ್ಫುರಿಸುವುದು. ॥೩೫॥

ಶ್ರವಣ ಮನನಗಳೂ ಆತ್ಮನೇ. ಉಪಕ್ರಮೋಪಸಂಹಾರಗಳೂ ಆತ್ಮನೇ, ಅಂದರೆ ಕೇಳುವ ಮತ್ತು ತಿಳಿಯುವ ವಿಷಯಗಳೆಲ್ಲವೂ ಆತ್ಮರೂಪವೇ, ಕಾರ್ಯಾರಂಭವಾಗುವುದು, ಕಾರ್ಯ ಸಮಾಪ್ತಿಯಾಗುವುದೂ ಸಹ ಆತ್ಮನೇ. ॥೩೬॥

ಆತ್ಮೈವಾಭ್ಯಾಸವನ್ನಿತ್ಯಮಾತ್ಮೈವಾಪೂರ್ವತಾಫಲಂ ।
ಅರ್ಥವಾದವದಾತ್ಮಾ ಹಿ ಪರಮಾತ್ಮೋಪಪತ್ತಿಃ ॥೩೭॥

ಇಚ್ಛಾಪ್ರಾರಬ್ಧವದ್ಬ್ರಹ್ಮಾ ಇಚ್ಛಾಪ್ರಾರಬ್ಧವತ್ಪರಃ ।
ಪರೇಚ್ಛಾರಬ್ಧವದ್ಬ್ರಹ್ಮಾ ಇಚ್ಛಾಶಕ್ತಿಶ್ಚಿದೇವ ಹಿ ॥೩೮॥

ಅನಿಚ್ಛಾಶಕ್ತಿರಾತ್ಮೈವ ಪರೇಚ್ಛಾಶಕ್ತಿರವ್ಯಯಃ ।
ಪರಮಾತ್ಮೈವಾಧಿಕಾರೀ ಚ ವಿಷಯಂ ಪರಮಾತ್ಮನಃ ॥೩೯॥

ಸಂಬಂಧಂ ಪರಮಾತ್ಮೈವ ಪ್ರಯೋಜನಂ ಪರಾತ್ಮಕಂ ।
ಬ್ರಹ್ಮೈವ ಸಹಜಂ ಸಂಗಂ ಕರ್ಮಜಂ ಬ್ರಹ್ಮಸಂಗಮಂ ॥೪೦॥

ಬ್ರಹ್ಮೈವ ಭ್ರಾಂತಿಜಂ ಭ್ರಾಂತಿದ್ವಂದ್ವಂ ಬ್ರಹ್ಮೈವ ನಾನ್ಯತಃ ।
ಸರ್ವಂ ಬ್ರಹ್ಮೇತಿ ನಿಶ್ಚಿತ್ಯ ಸದ್ಯ ಏವ ವಿಮೋಕ್ಷ್ಯಸೇ ॥೪೧॥

---

ನಿದಿಧ್ಯಾಸನವು ಆತ್ಮನೇ, ಅಂದರೆ ಇತರ ವಸ್ತು ವಿಮರ್ಶೆಯಲ್ಲಿ ಮನಗೊಡದೆ ಆತ್ಮವಸ್ತುವೊಂದನ್ನೇ ಧ್ಯಾನವಿಷಯವನ್ನಾಗಿ ಮಾಡಿಕೊಳ್ಳುವುದೂ ಸಹ ಆತ್ಮವೇ ಎನಿಸುವುದು. ಅಪೂರ್ವವೂ ಆತ್ಮನೇ, ಅರ್ಥವಾದವೂ ಆತ್ಮನೇ, ಉಪಪತ್ತಿಯೂ ಆತ್ಮನೇ. ॥೩೭॥

ಇಚ್ಛೆಯೂ ಪ್ರಾರಬ್ಧವೂ ಬ್ರಹ್ಮ, ಇಚ್ಛೆಯ ಪ್ರಾರಬ್ಧವು ಪರಮಾತ್ಮನು, ಪರರ ಇಚ್ಛೆಯ ಪ್ರಾರಬ್ಧವೂ ಬ್ರಹ್ಮ. ಒಟ್ಟಿನಲ್ಲಿ ಇಚ್ಛಾಶಕ್ತಿಯೆಲ್ಲವೂ ಬ್ರಹ್ಮನೇ ಅಂದರೆ ಸಕಲ ಇಚ್ಛಾಧೀನವಾದ ಕರ್ಮವೆಲ್ಲವೂ ಆತ್ಮನೇ. ॥೩೮॥

ಅನಿಚ್ಛಾಶಕ್ತಿಯೂ ಆತ್ಮನೇ, ಪರೇಚ್ಛಾಶಕ್ತಿಯೂ ಆತ್ಮನೇ, ಬ್ರಹ್ಮಜ್ಞಾನಕ್ಕೆ ಪರಮಾತ್ಮನೇ ಅಧಿಕಾರಿ. ಪರಮಾತ್ಮನೇ ವಿಷಯವು. ಪರಮಾತ್ಮನೇ ಸಂಬಂಧವು, ಪರಮಾತ್ಮನೇ ಪ್ರಯೋಜನವು. ಕಾರ್ಯ, ಕಾರಣ, ಫಲ, ಪ್ರಯೋಜನಗಳೆಂದು ತೋರಿಬರುವ ವಸ್ತುಗಳೆಲ್ಲವೂ ಬ್ರಹ್ಮವಸ್ತುವೇ. ॥೩೯॥

ಸಹಜವಾದ ಸಂಗವು ಬ್ರಹ್ಮವಸ್ತುವೇ, ಕರ್ಮಸಂಗವು ಬ್ರಹ್ಮವಸ್ತುವೇ, ಭ್ರಾಂತಿಯ ವಿಷಯವು ಬ್ರಹ್ಮವೇ, ಶೀತೋಷ್ಣಾದಿದ್ವಂದ್ವಗಳೂ ಬ್ರಹ್ಮವಸ್ತುವೇ, ಹೀಗೆ ಇಂದ್ರಿಯಗಳಿಗೆ ಗೋಚರಿಸುವ ಗೋಚರಿಸದಿರುವ ವಸ್ತುಜಾಲವೆಲ್ಲವೂ ಆತ್ಮವಸ್ತುವೇ. ಎಲ್ಲವೂ ಬ್ರಹ್ಮವಸ್ತುವೇ ಎಂದು ನಿಶ್ಚಯಿಸಿ ಮುಕ್ತನಾಗು. ॥೪೦-೪೧॥

ಸವಿಕಲ್ಪಸಮಾಧಿಸ್ಥನಿರ್ವಿಕಲ್ಪಂ ಸಮಾಧಿಃ ।
ಶಬ್ದಾನುವಿದ್ಧಂ ಬ್ರಹ್ಮೈವ ಬ್ರಹ್ಮ ದೃಶ್ಯಾನುವಿದ್ಧಕಂ ॥೪೨॥

ಬ್ರಹ್ಮೈವಾದಿಸಮಾಧಿಶ್ಚ ತನ್ಮಧ್ಯಮುಸಮಾಧಿಕಂ ।
ಬ್ರಹ್ಮೈವ ನಿಶ್ಚಯಂ ಶೂನ್ಯಂ ತದುತ್ತಮುಸಮಾಧಿಕಂ ॥೪೩॥

ದೇಹಾಭಿಮಾನಂ ರಹಿತಂ ತದ್ವೈರಾಗ್ಯಸಮಾಧಿಕಂ ।
ಏತದ್ಭಾವನಮಾಶಾಂತಂ ಜೀವನ್ಮುಕ್ತಿಸಮಾಧಿಕಂ ॥೪೪॥

ಅತ್ಯಂತಂ ಸರ್ವಶಾಂತತ್ವಂ ದೇಹೋ ಮುಕ್ತಿಸಮಾಧಿಕಂ ।
ಏತದಭ್ಯಸಿನಾಂ ಪ್ರೋಕ್ತಂ ಸರ್ವಂ ಚೈತತ್ಸಮನ್ವಿತಂ ॥೪೫॥

---

ಸವಿಕಲ್ಪಕನಿರ್ವಿಕಲ್ಪಕ ಸಮಾಧಿಗಳೆರಡೂ ಬ್ರಹ್ಮವಸ್ತುವೇ, ಶಬ್ದಾರ್ಥವೆಲ್ಲವೂ ಬ್ರಹ್ಮವಸ್ತುವೇ. ಅದು ಕಾಣಿಸುವ ವಸ್ತುಗಳೆಲ್ಲವುಗಳಲ್ಲಿಯೂ ಸೇರಿದೆ.॥೪೨॥

ಆದಿಸಮಾಧಿಯೂ ಬ್ರಹ್ಮನೇ, ಮಧ್ಯಮುಸಮಾಧಿಯೂ ಬ್ರಹ್ಮನೇ, ಉತ್ತಮುಸಮಾಧಿಯೂ ಬ್ರಹ್ಮನೇ, ನಿಶ್ಚಯವೆಲ್ಲವೂ ಬ್ರಹ್ಮನೇ. ॥೪೩॥

ದೇಹಾಭಿಮಾನರಾಹಿತ್ಯವೇ ವೈರಾಗ್ಯಸಮಾಧಿಯು, ದೇಹಾಭಿಮಾನವಿಲ್ಲದಿರುವಿಕೆಯನ್ನನುಭವಿಸುವುದೇ ಜೀವನ್ಮುಕ್ತಿ ಸಮಾಧಿಯು. ॥೪೪॥

ಸರ್ವಶಾಂತವಾದ ದೇಹವೇ (ವಿರಕ್ತಾವಸ್ಥೆಯೇ) ಮುಕ್ತಿಸಮಾಧಿಯು, ಈ ವಿಷಯವು ಅಭ್ಯಸಿಸುವರಿಗೆ ಮಾತ್ರ ಹೇಳಲ್ಪಟ್ಟಿದೆ. ॥೪೫॥

ಶ್ಲೋಕ ೪೨, ೪೩, ೪೪, ೪೫

ಮೇಲಿನ ಶ್ಲೋಕಗಳಲ್ಲಿ ಸಮಾಧಿ ಭೇದಗಳು ಸ್ವಲ್ಪ ಮಟ್ಟಿಗೆ ತಿಳಿಸಲ್ಪಟ್ಟಿವೆ. ಸಮಾಧಿಸ್ವರೂಪವು ಯೋಗದರ್ಶನದಲ್ಲಿ ಈ ರೀತಿ ವಿವರಿಸಲ್ಪಟ್ಟಿದೆ. ಸಮಾಧಿಯೆಂದರೆ ಧ್ಯಾನವೆಂಬ ಅತಿಸ್ವಚ್ಛಚಿತ್ತವೃತ್ತಿಪ್ರವಾಹಕ್ಕೂ ಧ್ಯೇಯವಸ್ತುವಿಗೂ ಭೇದತೋರದೆ ಧ್ಯೇಯವಸ್ತುರೂಪದಲ್ಲಿಯೇ ಲೀನವಾಗುವಿಕೆ. ಯಾವ ಒಂದು ವಸ್ತುವು ನಮ್ಮ ಧ್ಯಾನಕ್ಕೆ ವಿಷಯವಾಗುವುದೋ ಅದೇ ನಮಗೆ ಧ್ಯೇಯವಸ್ತುವೆನಿಸುವುದು, ಇದನ್ನು ಧ್ಯೇಯಮಾತ್ರಸ್ಫೂರ್ತಿಯೆನ್ನುವರು. ಇದನ್ನೇ ಸಂಪ್ರಜ್ಞಾತ

ಸಮಾಧಿ ಅಥವಾ ಸವಿಕಲ್ಪಸಮಾಧಿಯೆಂದು ಹೇಳುವರು. ಸಾಮಾನ್ಯವಾಗಿ ಸಮಾಧಿ ಎಂದರೆ ಭಾವನೆ. ಯಾವ ವಸ್ತುವನ್ನು ಸಾಕ್ಷಾತ್ಕಾರಮಾಡಿಕೊಳ್ಳ ಬೇಕೋ, ಅದರಲ್ಲಿ ಇತರ ವಸ್ತುಗಳನ್ನು ಬಿಟ್ಟು ಚಿತ್ತವನ್ನು ಅಲ್ಲಿಯೇ ಸ್ಥಿರವಾಗಿ ಇಡುವುದು. ಆತ್ಮವಸ್ತುವನ್ನೋ, ಪರಮಾತ್ಮಸ್ವರೂಪವನ್ನೋ ಧ್ಯಾನಮಾಡಬೇಕಾ ದರೆ ಅವುಗಳ ವಿಷಯಕವಾಗಿಯೇ ಚಿತ್ತವನ್ನು ಬಳಸುತ್ತಾ ಇತರ ಚಿತ್ತವೃತ್ತಿಗ ಳೆಲ್ಲವನ್ನೂ ನಿರೋಧಿಸುವುದೇ ಯೋಗವೆನ್ನಲ್ಪಡುವುದು. ಯೋಗವೆಂದರೂ ಸಮಾಧಿಯೆಂದರೂ ಒಂದೇ ಅರ್ಥ. ಸಮಾಧಿ ವಿಧಿರೂಪವಾಗಿಯೂ ಯೋಗವೆಂ ಬುದು ನಿಷೇಧರೂಪವಾಗಿಯೂ ಇರುವುದು. ಎಂದರೆ ಯೋಗಪದವು ಪ್ರತಿಬಂಧಕ ನಿವೃತ್ತಿಯೆಂಬ ಚಿತ್ತವಿನಾಶದಲ್ಲಿ ಪ್ರಾಧಾನ್ಯದೃಷ್ಟಿಯುಳ್ಳದ್ದು. ಸಮಾಧಿಪದವು ಕರ್ತವ್ಯಾಂಶವೆಂಬ ಆತ್ಮಸ್ವರೂಪಪರಿಶೇಷದಲ್ಲಿ ಪ್ರಾಧಾನ್ಯದೃಷ್ಟಿಯುಳ್ಳದ್ದು. ಎರಡ ರಲ್ಲೂ ಎರಡಂಶಗಳೂ ಸೇರಿರುವುವು.

ಸಮಾಧಿಯೆಂಬ ಯೋಗವು ಸವಿಕಲ್ಪ, ನಿರ್ವಿಕಲ್ಪವೆಂದು ಎರಡು ವಿಧ. ಸವಿಕಲ್ಪಕ ಸಮಾಧಿಯನ್ನು, ಸಂಪ್ರಜ್ಞಾತಸಮಾಧಿ, ಸಬೀಜಸಮಾಧಿ, ಸಾಲಂಬ ಸಮಾಧಿ ಎಂದೂ, ನಿರ್ವಿಕಲ್ಪಸಮಾಧಿಯನ್ನು ಅಸಂಪ್ರಜ್ಞಾತಸಮಾಧಿ, ನಿರ್ಬೀಜ ಸಮಾಧಿ, ನಿರಾಲಂಬಸಮಾಧಿಯೆಂದೂ, ಕರೆಯುವುದುಂಟು. ಸವಿಕಲ್ಪ ಅಥವಾ ಸಂಪ್ರಜ್ಞಾತವೆಂದರೆ ಧ್ಯಾನಮಾಡಲ್ಪಡುವ ವಸ್ತುವಿನಲ್ಲಿಯೇ ಚಿತ್ತವು ಲಯವಾಗುವುದು ಎಂದರ್ಥ. ಅಸಂಪ್ರಜ್ಞಾತ ಅಥವಾ ನಿರ್ವಿಕಲ್ಪವೆಂದರೆ ಯಾವ ವ್ಯಾಪಾರವೂ ಇಲ್ಲದೆ ಚಿತ್ತವು ಲಯಾಭಿಮುಖವಾಗುವುದು ಎಂದರ್ಥ. ಸವಿಕಲ್ಪಸಮಾಧಿಯು ಏಕಾಗ್ರಸ್ವಭಾವವುಳ್ಳ ಚಿತ್ತಕ್ಕೆ ಮಾತ್ರ ಸಾಧ್ಯ. ನಿರ್ವಿಕಲ್ಪಸಮಾಧಿಯು ನಿರೋಧಸ್ವಭಾವವುಳ್ಳ ಚಿತ್ತಕ್ಕೆ ಸಾಧ್ಯ. ಸವಿಕಲ್ಪ ಸಮಾಧಿಯು ಸವಿತರ್ಕ, ಸವಿಚಾರ, ಸಾನಂದ, ಸಸ್ಮಿತ ಎಂದು ನಾಲ್ಕು ವಿಧವಾಗಿದೆ. ಪೂರ್ವಾಪರಜ್ಞಾನ, ಹಾಗೆಯೇ ವಸ್ತು ಮತ್ತು ಅವುಗಳ ಹೆಸರುಗಳ ಗಿರುವ ಸಂಬಂಧಜ್ಞಾನ, ಇವೇ ಮೊದಲಾದ ಸನ್ನಿವೇಶಗಳೊಡನೆ ಸ್ಥೂಲವಾದ ಪಂಚಮಹಾಭೂತಗಳ ವಿಚಾರಭಾವನೆಯೇ ಸವಿತರ್ಕಸಮಾಧಿ. ಇನ್ನು ಸವಿಚಾರ ಸಮಾಧಿಯೆಂದರೆ, ಪಂಚತನ್ಮಾತ್ರೆಗಳು, ಬುದ್ಧ್ಯಹಂಕಾರಾಂತಃಕರಣಗಳು ಮೊದ ಲಾದ ಸೂಕ್ಷ್ಮತತ್ವಗಳ ಭಾವನೆ, ದೇಶ, ಕಾಲ ಪರಿಚ್ಛಿನ್ನವಾಗಿ ನಡೆಯುವುದು ಎಂದು ತಿಳಿಯಬೇಕು. ಇನ್ನು ಮೂರನೆಯದಾದ ಸಾನಂದಸಮಾಧಿಯು ಸುಖ ಸ್ವಭಾವದಲ್ಲಿರುವ ಸತ್ವಗುಣಪ್ರಧಾನವಾಗಿಯೂ ರಜೋಗುಣ, ತಮೋಗುಣಗಳ

ಸ್ವಲ್ಪಾಂಶಸಂಬಂಧದೊಡನೆ ನಡೆಯುವ ಭಾವನೆಯಾಗಿರುವುದು. ಇಲ್ಲಿ ಸತ್ವಸಮು ದ್ರೇಕದಿಂದ ಎಲ್ಲವೂ ಸುಖಾನುಭವರೂಪವಾಗುವುದರಿಂದ ಇದನ್ನು ಸಾನಂದ ಸಮಾಧಿಯೆನ್ನುವರು. ನಾಲ್ಕನೆಯದಾದ ಸಸ್ಮಿತಸಮಾಧಿಯು ರಜಸ್ತಮಸ್ಸುಗಳ ಸಂಬಂಧವಿಲ್ಲದೆ ಪರಮಸುಖಸ್ವಭಾವದಲ್ಲಿರುವ ಅಂದರೆ ಸತ್ತ್ವಗುಣಸಂಬಂಧದಲ್ಲಿ ರುವ ಚಿತ್ತವನ್ನು ವಿಷಯೀಕರಿಸುತ್ತಿದ್ದರೂ, ಸತ್ತ್ವಕ್ಕೆ ಅಪ್ರಾಧಾನ್ಯವೂ, ಚೈತನ್ಯ ವೆಂಬ ಪುರುಷನಿಗೆ ಪ್ರಾಧಾನ್ಯವೂ ಇರುವಂತೆ ಮಾಡುವುದು. ಈ ನಾಲ್ಕುವಿಧ ಭಾವನೆಗಳಲ್ಲಿಯೂ ಇತರ ವಿಷಯಗಳು ತೋರದಿದ್ದರೂ, ಆಯಾ ಧ್ಯೇಯವಾದ ಅಂಶಗಳು ಮಾತ್ರ ತೋರುತ್ತವೆಯಾದುದರಿಂದ ಇವನ್ನು ಸವಿಕಲ್ಪಸಮಾಧಿಯೆಂದು ಹೇಳುವರು. ಈ ನಾಲ್ಕು ವಿಧವಾದ ಸವಿಕಲ್ಪಸಮಾಧಿಗಳಿಂದ ಹುಟ್ಟುವ ಸಿದ್ಧಿಗಳು ಕ್ರಮವಾಗಿ ಮಧುಮತೀ, ಮಧುಪ್ರತೀಕಾ, ವಿಶೋಕಾ, ನಾಸ್ಮಿತಾ ಎಂಬ ಪದಗಳಿಂದ ವ್ಯವಹರಿಸಲ್ಪಡುವುವು. ಇವುಗಳಲ್ಲಿ ಮೊದಲನೆಯದಾದ ಮಧುಮತಿಯೇ ಋತಂ ಭರಾ ಎಂದು ಹೇಳಲ್ಪಡುವುದು. ಇಲ್ಲಿ ಅಭ್ಯಾಸವೈರಾಗ್ಯದಿಂದ ರಜಸ್ತಮಸ್ಸುಗಳು ಪ್ರಾಯಃಕ್ಷೀಣವಾಗಿ, ಸುಖಪ್ರಕಾಶಮಯವಾದ ಚಿತ್ತದ ಭಾವನೆಯಿಂದ ವಿಶದ ಪ್ರಕಾಶಸ್ವರೂಪ ಚಿತ್ತಶುದ್ಧಿಯಾಗುವುದು. ಎರಡನೆಯದಾದ ಮಧುಪ್ರತೀಕ ಸಿದ್ಧಿಯಲ್ಲಿ ಮನೋವೇಗವೂ, ಕಾರಣವಿಲ್ಲದೆ ಕಾರ್ಯವನ್ನು ಹೊಂದುವುದೂ ಮುಂತಾದ ಸಿದ್ಧಿಗಳು ಲಭಿಸುವುವು. ವಿಶೋಕಸಿದ್ಧಿಯಿಂದ ಸರ್ವೇಶ್ವರ ಸಾಮ್ಯವೂ ಸರ್ವಜ್ಞತ್ವವೂ ಸಿದ್ಧಿಸುವುದು. ನಾಲ್ಕನೆಯದಾದ ಜ್ಯೋತಿಷ್ಮತೀಸಿದ್ಧಿಯು, ಶಾಂತ, ಉದಿತ, ಅವ್ಯಪದೇಶ್ಯಗಳೆಂಬ ಮೂರು ವಿಭಾಗಗಳಿಗೆ ಫಲವಾಗಿ ವಿವೇಕಸಾಕ್ಷಾತ್ಕಾರ ವುದಯಿಸುವುದು. ಇಂತಹ ವಿವೇಕ ಖ್ಯಾತಿಯಲ್ಲಿಯೂ ಚಿತ್ತವು ವಿರಕ್ತವಾಗಿದ್ದು, ವಿಲಯಾಭಿಮುಖವಾಗುವುದೇ ಅಸಂಪ್ರಜ್ಞಾತಸಮಾಧಿ ಅಥವಾ ನಿರ್ವಿಕಲ್ಪಕ ಸಮಾಧಿಯೆನಿಸುವುದು. ಈ ನಿರ್ವಿಕಲ್ಪಕಸಮಾಧಿಯನ್ನೇ ಚೈತನ್ಯಸ್ವರೂಪನಾದ ಪುರುಷನ ಸ್ವರೂಪಸ್ಥಿತಿಯೆಂದೂ ತಿಳಿಯಬೇಕು. ಈ ರೀತಿ ಸಮಾಧಿಯೋಗದಿಂದ ಸಮಸ್ತ ಕ್ಲೇಶಗಳೂ ವಿನಾಶವಾಗಿ, ಚಿತ್ತವು ದಗ್ಧಬೀಜಶಕ್ತಿಯುಳ್ಳದ್ದಾಗುವುದು. ಕ್ರಮವಾಗಿ ಅದು ನಾಶಹೊಂದುವುದು. ಈ ವಿಧವಾದ ಚಿತ್ತವಿನಾಶವೇ ಸಂಸಾರ ನಿವೃತ್ತಿ. ಕೆಲವರಿಗೆ ಹುಟ್ಟಿದಂದಿನಿಂದಲೇ ಕೆಲವು ಸಿದ್ಧಿಗಳು ಲಭಿಸುವುವು. ಶುಕಮಹರ್ಷಿಯೇ ಮೊದಲಾದ ಯೋಗಿಗಳಿಗೆ ಹುಟ್ಟಿದಂದಿನಿಂದಲೇ ವಿಜಾತೀಯ ಸಾಮರ್ಥ್ಯಗಳಿದ್ದುವೆಂದು ಪುರಾಣ ಗ್ರಂಥಗಳಿಂದ ನಮಗೆ ತಿಳಿದುಬರುವುದು. ಅವೆಲ್ಲವೂ ಪೂರ್ವಜನ್ಮದ ಯೋಗಾಭ್ಯಾಸದ ಫಲವೆಂದು ತಿಳಿಯಲ್ಪಡಬೇಕು

ಸರ್ವಂ ವಿಸ್ಮೃತ್ಯ ವಿಸ್ಮೃತ್ಯ ತ್ಯಕ್ತ್ವಾ ತ್ಯಕ್ತ್ವಾ ಪುನಃ ಪುನಃ ।
ಸರ್ವವೃತ್ತಿಂ ಚ ಶೂನ್ಯೇನ ಸ್ಥಾಸ್ಯಾಮೀತಿ ವಿಮುಚ್ಯ ಹಿ ॥೪೬॥

ನ ಸ್ಥಾಸ್ಯಾಮೀತಿ ವಿಸ್ಮೃತ್ಯ ಸ್ಥಾಸ್ಯಾಮೀತಿ ಚ ವಿಸ್ಮರ ।
ಚೈತನ್ಯೋಽಹಮಿತಿ ತ್ಯಕ್ತ್ವಾ ಸನ್ಮಾತ್ರೋಽಹಮಿತಿ ತ್ಯಜ ॥೪೭॥

ತ್ಯಾಗಂ ಚೈವ ಪರಿತ್ಯಜ್ಯ ಭಾವನಂ ಚ ಪರಿತ್ಯಜ ।
ಸರ್ವಂ ತ್ಯಕ್ತ್ವಾ ಮನಃ ಕ್ಷಿಪ್ರಂ ಸ್ಮರಣಂ ಚ ಪರಿತ್ಯಜ ॥೪೮॥

ಸ್ಮರಣಂ ಕಿಂಚಿದೇವಾತ್ರ ಮಹದ್ದುಃಖಂ ಭವೇತ್ತದಾ ।
ಮಹಾದೋಷಂ ಭವಂ ಬಂಧಂ ಚಿತ್ತಜನ್ಮಶತಂ ಮನಃ ॥೪೯॥

ಪ್ರಾರಬ್ಧಂ ಹೃದಯಗ್ರಂಥಿ ಬ್ರಹ್ಮಹತ್ಯಾದಿ ಪಾತಕಂ ।
ಸ್ಮರಣಂ ಚೈವಮೋವೇಹ ಬಂಧಮೋಕ್ಷಸ್ಯ ಕಾರಣಂ ॥೫೦॥

---

ಹಾಗೆಯೇ ವನಸ್ಪತಿಗಳೆಂಬ ಓಷಧಿಯಿಂದಲೂ, ತಪಸ್ಸಿನಿಂದಲೂ, ಮಂತ್ರದಿಂದಲೂ ಅನೇಕ ಸಿದ್ಧಿಗಳುಂಟಾಗುವುವು. ಇವೆಲ್ಲವೂ ಪ್ರಾಚೀನಯೋಗದ ಮಹಿಮೆಯೆಂದು ಯೋಗಶಾಸ್ತ್ರದ ತಾತ್ಪರ್ಯ.

ಎಲ್ಲವನ್ನೂ ಮರೆತುಬಿಟ್ಟು ಎಲ್ಲವನ್ನೂ ಬಿಟ್ಟು ಬಿಟ್ಟು, ಯಾವ ವ್ಯಾಪಾರವೂ ಇಲ್ಲದೇ ಇರು. ನಾನಿರುವೆನೆಂಬ ಇಲ್ಲವೆಂಬ ವ್ಯವಹಾರಗಳನ್ನೂ ಬಿಟ್ಟುಬಿಡು. ॥೪೬॥

ಚೈತನ್ಯನು ನಾನು ಎಂಬುದನ್ನೂ ಬಿಟ್ಟು ಸದ್ರೂಪನೆಂಬುದನ್ನೂ ಬಿಡು. ತ್ಯಾಗವನ್ನೂ ಬಿಟ್ಟು ಭಾವನೆಯನ್ನೂ ಬಿಡು. ಎಲ್ಲವನ್ನೂ ಬಿಟ್ಟು ಮನವನ್ನೂ ಬಿಟ್ಟು ಸ್ಮರಣೆಯನ್ನೂ ಬಿಡು. ॥೪೭-೪೮॥

ಅಸತ್ಯವಸ್ತುಗಳ ಯಾವುದೊಂದು ಸ್ಮರಣೆಯೂ ಕೂಡ ಮಹಾದುಃಖವನ್ನು ಉಂಟುಮಾಡುವುದು. ಮನವು ನೂರಾರು ಸಂಸ್ಕಾರಗಳನ್ನು ಸೃಷ್ಟಿಸಿ ದೋಷಮಯವಾದ ಸಂಸಾರಬಂಧನವನ್ನು ಗಂಟುಹಾಕುವುದು. ॥೪೯॥

ಅಸತ್ಯವಸ್ತುಗಳ ಸ್ಮರಣವೇ ಪ್ರಾರಬ್ಧವು, ಬ್ರಹ್ಮಹತ್ಯಾದಿಪಾತಕವು. ಬಂಧಮೋಕ್ಷಗಳಿಗೆ ಅದೇ ಕಾರಣವು, ಆದುದರಿಂದ ಅದನ್ನು ಮೊದಲು ಬಿಟ್ಟುಬಿಡಬೇಕು. ॥೫೦॥

ಬಾಹ್ಯಾಂತರ್ಭೇದಭಾವೇನ ಬ್ರಹ್ಮಾಕಾರೇಣ ನಿರ್ಣಯಃ ।
ಸರ್ವಮುಕ್ತಂ ಭಗವತಾ ವಿಲಯಂ ನಾಸ್ತಿ ಕಿಂಚನ ॥೫೧॥

ಬ್ರಹ್ಮೈವ ಸರ್ವಂ ಸತತಂ ನಾಸ್ತಿ ಸಂದೇಹಕಾರಣಂ ।
ಅಹಂ ಬ್ರಹ್ಮ ಪ್ರಕರಣಂ ಸರ್ವದುಃಖವಿನಾಶಕಂ ॥೫೨॥

ಸರ್ವಂ ಪ್ರಪಂಚೋಪಶಮಂ ಸದ್ಯೋ ಮೋಕ್ಷಪ್ರದಂ ಸದಾ ।
ಏತಚ್ಛ್ರವಣಮಾತ್ರೇಣ ಬ್ರಹ್ಮೈವ ಭವತಿ ಸ್ವಯಂ ॥೫೩॥

ಭಕ್ತ್ಯಾ ಪದ್ಮದಲಾಕ್ಷಪೂಜಿತಪದಧ್ಯಾನಾನುವೃತ್ತ್ಯಾ ಮನಃ
ಸ್ವಾಂತಾನಂತಪಥಪ್ರಚಾರವಿಧುರಂ ಮುಕ್ತ್ಯೈ ಭವೇನ್ಮಾನಸಂ ।
ಸಂಕಲ್ಪೋಜ್ಝಿತಮೇತದಲ್ಪಸುಮಹಾಶಿಲ್ಪೇ ಭವಾಂಭೋನಿಧೌ
ಕಶ್ಚಿತ್ಸ್ಯಾಚ್ಛಿವಭಕ್ತಧುರ್ಯಸುಮಹಾಶಾಂತಃ ಶಿವಪ್ರೇಮತಃ ॥೫೪॥

ಇತಿ ಶ್ರೀ ಶಿವರಹಸ್ಯೇ ಶಂಕರಾಖ್ಯೇ ಷಷ್ಠಾಂಶೇ ಚತುರ್ವಿಂಶೋಽಧ್ಯಾಯಃ

---

ಒಳಗು ಹೊರಗು ಎಂಬ ಯಾವ ಭೇದವೂ ಇಲ್ಲ. ಎಲ್ಲವೂ ಬ್ರಹ್ಮಸ್ವರೂಪವೇ ಆದಕ್ಕೆ ನಾಶವಿಲ್ಲ. ಎಂದು ಭಗವಾನ್ ಶಂಕರನೇ ಹೇಳಿರುವನು. ॥೫೧॥

ಎಲ್ಲೆಲ್ಲಿಯೂ ಬ್ರಹ್ಮವಸ್ತುವೇ ಇರುವುದು, ಎಲ್ಲವೂ ಬ್ರಹ್ಮವಸ್ತುವೇ. ಇದರಲ್ಲಿ ಸಂದೇಹವಿಲ್ಲ. ನಾನೇ ಬ್ರಹ್ಮನೆನ್ನುವ ಈ ಪ್ರಕರಣವು ಸಕಲ ದುಃಖಗಳ ನಾಶಕವು. ॥೫೨॥

ಸರ್ವಪ್ರಪಂಚವನ್ನೂ ನಿವೃತ್ತಿಸುವ ಸದ್ಯಃ ಮುಕ್ತಿಯನ್ನುಂಟುಮಾಡುವ ಈ ಪ್ರಕರಣವನ್ನು ಕೇಳಿದ ಮಾತ್ರದಿಂದಲೇ ಮಾನವನು ಬ್ರಹ್ಮವಸ್ತುವೇ ಆಗುವನು. ॥೫೩॥

ಶಿವನ ಅನನ್ಯಭಕ್ತಿಯಿಂದಲೂ, ಹರಿಯು ಅರ್ಚಿಸಿದ ಪಾದಪದ್ಮಗಳುಳ್ಳ ಆ ಮಹಾದೇವನ ಧ್ಯಾನದಿಂದಲೂ, ಮಾನವನು ಮುಕ್ತಿಯನ್ನು ಪಡೆಯಬಹುದು. ಆದರೆ ಆ ರೀತಿ ಪರಶಿವನ ಭಕ್ತಿಧ್ಯಾನಗಳನ್ನು ಸತತವಾಗಿ ನಡೆಸಿ ಮುಕ್ತಿಯನ್ನು

ಪಡೆಯತಕ್ಕವರು ತುಂಬಾ ವಿರಳ ಎಂದು ಋಭುಮಹಾಮುನಿಯು ನಿದಾಘಮಹರ್ಷಿಗೆ ಶಿವಭಕ್ತಿಪರಾಕಾಷ್ಠತೆಯನ್ನು ವಿವರವಾಗಿ ತಿಳಿಯಪಡಿಸಿದನು. ||೫೪||

ಇಲ್ಲಿಗೆ ಶ್ರೀ ಶಿವರಹಸ್ಯದ ಆರನೆಯ ಶಂಕರಾಂಶದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀಶಿವಾಯ ನಮಃ ||

# ಅಥ ಶ್ರೀಶಿವರಹಸ್ಯೇ

## ಶಂಕರಾಖ್ಯೇ

## ಷಷ್ಠಾಂಶೇ

## ಪಂಚವಿಂಶೋಽಧ್ಯಾಯಃ

|| ಋಭುರುವಾಚ ||

ವಕ್ಷ್ಯೇ ಪ್ರಸಿದ್ಧಮಾತ್ಮಾನಂ ಸರ್ವಲೋಕಪ್ರಕಾಶಕಂ ।
ಸರ್ವಾಕಾರಂ ಸದಾ ಸಿದ್ಧಂ ಸರ್ವತ್ರ ನಿಬಿಡಂ ಮಹತ್ ||೧||

ತದ್ಬ್ರಹ್ಮಾಹಂ ನ ಸಂದೇಹ ಇತಿ ನಿಶ್ಚಿತ್ಯ ತಿಷ್ಠಭೋಃ ।
ಚಿದೇವಾಹಂ ಚಿದೇವೇದಂ ಚಿತ್ತಂ ಚಿದಹಮೇವ ಹಿ ||೨||

---

## ಇಪ್ಪತ್ತೈದನೆಯ ಅಧ್ಯಾಯವು

ಋಭುಮಹಾಮುನಿಯು ನಿದಾಘಮುನಿಯನ್ನು ಕುರಿತು ಮುಂದುವರಿದು ಹೀಗೆ ನುಡಿದನು—ಎಲೈ ನಿದಾಘಮುನಿಯೇ, ಈಗ ಸರ್ವಲೋಕಪ್ರಕಾಶಕವಾದ ಸರ್ವತ್ರ ಪ್ರಸಿದ್ಧವಾದ ಆತ್ಮಸ್ವರೂಪವನ್ನು ನಿರೂಪಿಸುವೆನು. ಆತ್ಮನು ಸರ್ವ ಸ್ವರೂಪನು, ಜನನಾದಿಗಳಿಲ್ಲದೇ ಆತನು ಸದಾ ಸಿದ್ಧನು. ಎಲ್ಲೆಡೆಯಲ್ಲೂ ಹರಡಿರುವವನು. ||೧||

ಆ ಬ್ರಹ್ಮನೇ ನಾನು, ಆ ಆತ್ಮನೇ ನಾನು, ಆ ಚೈತನ್ಯವೇ ನಾನು, ಆ ಚೈತನ್ಯವೇ ಈ ಜಗತ್ತು ಎಂದು ನಿಶ್ಚಯಿಸಿ ಆತ್ಮಾನುಸಂಧಾನಮಾಡು. ||೨||

ವಾಚಾವಧಿಶ್ಚ ದೇವೋಽಹಂ ಚಿದೇವ ಮನಸಃ ಪರಃ ।
ಚಿದೇವಾಹಂ ಪರಂ ಬ್ರಹ್ಮ ಚಿದೇವ ಸಕಲಂ ಪದಂ ॥೩॥

ಸ್ಥೂಲದೇಹಂ ಚಿದೇವಾಹಂ ಸೂಕ್ಷ್ಮದೇಹಂ ಚಿದೇವ ಹಿ ।
ಚಿದೇವ ಕಾರಣಂ ಸೋಽಹಂ ಕಾರ್ಯಂ ಚೈವ ಚಿದೇವ ಹಿ ॥೪॥

ಚಿದೇವ ಕಾರಣಂ ಸೋಽಹಂ ಬುದ್ಧಿಹೀನಶ್ಚಿದೇವ ಹಿ ।
ಅಸ್ತಿ ಬ್ರಹ್ಮೈವಮಸ್ತ್ಯೇವ ನಾಸ್ತಿ ಬ್ರಹ್ಮೇತಿ ನಾಸ್ತಿ ಹಿ ॥೫॥

ಅಖಂಡಾಕಾರವೃತ್ತಿಶ್ಚ ಉತ್ತಮಾಧಮಮಧ್ಯಮಾಃ ।
ದೇಹಹೀನಶ್ಚಿದೇವಾಹಂ ಸೂಕ್ಷ್ಮದೇಹಂ ಚಿದೇವ ಹಿ ॥೬॥

ಚಿದೇವ ಕಾರಣಂ ಸೋಽಹಂ ಬುದ್ಧಿಹೀನಶ್ಚಿದೇವ ಹಿ ।
ಅಸ್ತಿ ನಾಸ್ತೀತಿ ನಾಸ್ತ್ಯೇವ ಅಹಮೇವ ಚಿದೇವ ಹಿ ॥೭॥

---

ವಾಕ್ಕು ಮನಸ್ಸುಗಳಿಗೆ ಅಗೋಚರವಾದ ಚೈತನ್ಯಪ್ರಕಾಶವು ನಾನು. ಪರಬ್ರಹ್ಮವಾದ ಚೈತನ್ಯವೇ ನಾನು. ಎಲ್ಲ ಸ್ಥಾನಗಳೂ ಚೈತನ್ಯವೇ. ॥೩॥

ಸ್ಥೂಲದೇಹವೂ ಚೈತನ್ಯವೇ, ಸೂಕ್ಷ್ಮದೇಹವೂ ಚೈತನ್ಯವೇ, ಕಾರ್ಯಕಾರಣಗಳೂ ಚೈತನ್ಯವೇ, ಆ ಚೈತನ್ಯಸ್ವರೂಪವೇ ನಾನು. ॥೪॥

ಕಾರಣದೇಹವು ಚೈತನ್ಯವೇ. ಬುದ್ಧಿಯು ಚೈತನ್ಯಕ್ಕಿಲ್ಲ. ಚೈತನ್ಯವೇ ಬುದ್ಧಿಯು. ಬ್ರಹ್ಮವಸ್ತುವು ಇದೆ ಎನ್ನುವುದು ಸತ್ಯ. ಬ್ರಹ್ಮವಸ್ತುವಿಲ್ಲವೆನ್ನುವುದು ಇಲ್ಲ. ॥೫॥

"ನಾನೇ ಬ್ರಹ್ಮನು" ಎಂಬ ಅಖಂಡವಾದ ಭಾವನೆಯೂ ಉತ್ತಮ ಅಧಮ ಮಧ್ಯಮ ಭಾವನೆಗಳೂ ಚೈತನ್ಯವೇ. ದೇಹವು ಚೈತನ್ಯಕ್ಕಿಲ್ಲ. ಸೂಕ್ಷ್ಮದೇಹವೂ ಚೈತನ್ಯವೇ. ॥೬॥

ಸರ್ವಕಾರಣವಾದ ಚೈತನ್ಯವೇ ನಾನು, ಜಡಬುದ್ಧಿಯಿಲ್ಲದ ಚೈತನ್ಯವೇ ನಾನು. ಇದೆ, ಇಲ್ಲ ಎನ್ನುವ ವ್ಯವಹಾರಗಳಾವುವೂ ಇಲ್ಲ. ಚೈತನ್ಯಸ್ವರೂಪನಾದ ನಾನೊಬ್ಬನೇ ಇರುವವನು. ॥೭॥

ಸರ್ವಂ ನಾಸ್ತ್ಯೇವ ನಾಸ್ತ್ಯೇವ ಸಾಕಾರಂ ನಾಸ್ತಿ ನಾಸ್ತಿ ಹಿ।
ಯತ್ಕಿಂಚಿದಪಿ ನಾಸ್ತ್ಯೇವ ಅಹಮೇವ ಚಿದೇವ ಹಿ ॥೮॥

ಅನ್ವಯವ್ಯತಿರೇಕಂ ಚ ಆದಿಮಧ್ಯಾಂತದೂಷಣಂ।
ಸರ್ವಂ ಚಿನ್ಮಾತ್ರರೂಪತ್ವಾದಹಮೇವ ಚಿದೇವ ಹಿ ॥೯॥

ಸರ್ವಾಪರಂ ಚ ಸದಸತ್ ಕಾರ್ಯಕಾರಣಕರ್ತೃಕಂ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಮೇವ ಹಿ ಕೇವಲಂ ॥೧೦॥

ಅಶುದ್ಧಂ ಶುದ್ಧಮದ್ವೈತಂ ದ್ವೈತಮೇಕಮನೇಕಕಂ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೧॥

ಅಸತ್ಯಂ ಸತ್ಯಮದ್ವೈತಂ ದ್ವಂದ್ವಂ ಚ ಪರತಃ ಪರಂ।
ಭೂತಂ ಭವ್ಯಂ ವರ್ತಮಾನಂ ಮೋಹಾಮೋಹೌ ಸಮಾಸಮೌ॥೧೨॥

ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ।
ಕ್ಷಣಂ ಲವಂ ತಟಿತ್ ಬ್ರಹ್ಮ ತ್ವಂಪದಂ ತತ್ಪದಂ ತಥಾ ॥೧೩॥

---

ಚೈತನ್ಯವನ್ನು ಬಿಟ್ಟು ಯಾವ ಆಕಾರವಸ್ತುವೂ ಇಲ್ಲವೇ ಇಲ್ಲ. ಎಲ್ಲವೂ ಇಲ್ಲ. ಚೈತನ್ಯಮೂರ್ತಿಯಾದ ನಾನೊಬ್ಬನೇ ಇರುವವನು. ॥೮॥

ಅನ್ವಯವ್ಯತಿರೇಕಗಳೆಂಬ ವಸ್ತುನಿರ್ಣಾಯಕಕಾರಣಗಳು, ಆದಿ ಮಧ್ಯ ಅಂತ್ಯಗಳು, ದೋಷಗಳು, ಇವೆಲ್ಲವೂ ಚೈತನ್ಯವೇ. ಆ ಚೈತನ್ಯವೇ ನಾನು. ॥೯॥

ಸತ್ಯ ಅಸತ್ಯ, ಕಾರ್ಯಕಾರಣಕರ್ತೃಗಳು ಇವಾವುವೂ ಇಲ್ಲವೇ ಇಲ್ಲ. ಇದೆಯೆಂದು ಹೇಳುವ ವಸ್ತುಗಳೆಲ್ಲಾ ಅಸತ್. ॥೧೦॥

ಅಶುದ್ಧ, ಶುದ್ಧ, ಅದ್ವೈತ, ದ್ವೈತ, ಏಕ, ಅನೇಕ ಇವಾವುವೂ ಇಲ್ಲವೇ ಇಲ್ಲ. ಚೈತನ್ಯರೂಪನಾದ ವ್ಯಾಪಕನಾದ ನಾನೊಬ್ಬನೇ ಇರುವವನು. ॥೧೧॥

ಅಸತ್ಯ, ಸತ್ಯ, ಅಭೇದ, ಭೇದ, ಉಚ್ಚ, ನೀಚ, ಭೂತಭವಿಷ್ಯದ್ವರ್ತಮಾನಗಳು, ಮೋಹಜ್ಞಾನಗಳು, ಸಮತೆ ವಿಷಮತೆಗಳು ಇವಾವುವೂ ಇಲ್ಲ. ಕ್ಷಣ, ಲವ, ಮಿಂಚು, ತ್ವಂಪದ, ತತ್ಪದ ಇವಾವುವೂ ಇಲ್ಲ. ನಾನೊಬ್ಬನೇ ಇರುವವನು.॥೧೩॥

ತ್ವಂ ಪದಂ ತತ್ಪದಂ ನಾಪಿ ಐಕ್ಯಂ ಚ ಹ್ಯಹಮೇವ ಹಿ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೪॥

ಆನಂದಂ ಪರಮಾನಂದಂ ಸರ್ವಾನಂದಂ ನಿಜಂ ಮಹತ್ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೫॥

ಅಹಂ ಬ್ರಹ್ಮ ಇದಂ ಬ್ರಹ್ಮ ಕಂ ಬ್ರಹ್ಮಹ್ಯಕ್ಷರಂ ಪರಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೬॥

ವಿಷ್ಣುರೇವ ಪರಂ ಬ್ರಹ್ಮ ಶಿವೋ ಬ್ರಹ್ಮಾಹಮೇವ ಹಿ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೭॥

ಶ್ರೋತ್ರಂ ಬ್ರಹ್ಮ ಪದಂ ಬ್ರಹ್ಮ ಶಬ್ದಂ ಬ್ರಹ್ಮ ಪದಂ ಶುಭಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೮॥

---

"ತತ್ತ್ವಮಸಿ" ಎನ್ನುವಲ್ಲಿನ ನೀನು ಎನ್ನುವ ಅರ್ಥವೂ ಅದು(ಪರಮಾತ್ಮ) ಎನ್ನುವ ಅರ್ಥವೂ, ಆವೆರಡರ ಐಕ್ಯವೂ ಸಹ ನಾನೇ. ನನ್ನ ಹೊರತು ಏನೇನೂ ಇಲ್ಲ ಯಾವುದೂ ಇಲ್ಲ. ॥೧೪॥

ಆನಂದ, ಪರಮಾನಂದ, ಸರ್ವಾನಂದ, ಮಹತ್ತ್ವ ಇವೆಲ್ಲವೂ ನಾನೇ, ನನ್ನ ಹೊರತೂ ಯಾವುದೂ ಇಲ್ಲ. ॥೧೫॥

ನಾನು ಬ್ರಹ್ಮ, ಇದೆಲ್ಲವೂ ಬ್ರಹ್ಮ, ಸುಖವು ಬ್ರಹ್ಮ, ಓಂಕಾರವು ಬ್ರಹ್ಮ, ಎಲ್ಲವೂ ಬ್ರಹ್ಮ, ಬ್ರಹ್ಮವಸ್ತುವಿನ ಹೊರತು ಯಾವುದೂ ಇಲ್ಲ. ॥೧೬॥

ವಿಷ್ಣುವೂ ಬ್ರಹ್ಮ, ಶಿವನೂ ಬ್ರಹ್ಮ, ಬ್ರಹ್ಮದೇವನೂ ಬ್ರಹ್ಮ, ನಾನೂ ಬ್ರಹ್ಮ, ಎಲ್ಲವೂ ಬ್ರಹ್ಮ, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೧೭॥

ಕಿವಿಯು ಬ್ರಹ್ಮ, ಶಬ್ದವು ಬ್ರಹ್ಮ, ಪದವು ಬ್ರಹ್ಮ, ಪರಮಪದವು ಬ್ರಹ್ಮ, ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ನಾನೇ ಆ ಬ್ರಹ್ಮವಸ್ತುವು. ॥೧೮॥

ಸ್ಪರ್ಶೋಽ ಬ್ರಹ್ಮ ಪದಂ ತ್ವಂ ಚ ತ್ವಂ ಚ ಬ್ರಹ್ಮ ಪರಸ್ಪರಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೧೯॥

ಪರಂ ರೂಪಂ ಚ ಚಕ್ಷುರ್ಭಿರೇವ ತತ್ರೈವ ಯೋಜ್ಯತಾಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೦॥

ಬ್ರಹ್ಮೈವ ಸರ್ವಂ ಸತತಂ ಸಚ್ಚಿದಾನಂದಮಾತ್ರಕಂ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೧॥

ಚಿನ್ಮಯಾನಂದಮಾತ್ರೋಽಹಮಿದಂ ವಿಶ್ವಮಹಂ ಸದಾ ।
ಸರ್ವಂ ಬ್ರಹ್ಮೈವ ಸಕಲಂ ಸರ್ವಂ ನಾಸ್ತ್ಯೇವ ಸರ್ವದಾ ॥೨೨॥

ಬ್ರಹ್ಮೈವ ಸರ್ವಂ ಯತ್ಕಿಂಚಿತ್ತದ್ಬ್ರಹ್ಮಾಹಂ ನ ಸಂಶಯಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೩॥

---

ಸ್ಪರ್ಶವೂ ಬ್ರಹ್ಮ, ನೀನೂ ಬ್ರಹ್ಮ, ಬ್ರಹ್ಮನೇ ನೀನು, ನಿನ್ನ ಹೊರತು ಯಾವ ವಸ್ತುವೂ ಇಲ್ಲ. ॥೧೯॥

ಕಣ್ಣಿನಿಂದ ಬ್ರಹ್ಮವಸ್ತುವಿನ ಸಾಕಾರರೂಪವನ್ನೇ ನೋಡಬೇಕು, ಬ್ರಹ್ಮ ವಸ್ತುವಿನ ಹೊರತು ಏನೂ ಇಲ್ಲ. ನಾನೇ ಬ್ರಹ್ಮವಸ್ತುವು. ॥೨೦॥

ಸತ್ಯಜ್ಞಾನಾನಂದಸ್ವರೂಪವಾದ ಬ್ರಹ್ಮವಸ್ತುವೇ ಯಾವಾಗಲೂ ಇರುವುದು. ಇನ್ನಾವುದೂ ಇಲ್ಲ, ಆ ಬ್ರಹ್ಮವಸ್ತುವೇ ನಾನು. ॥೨೧॥

ನಾನು ಜ್ಞಾನಮಯವಾದ ಆನಂದಸ್ವರೂಪನು, ಈ ಜಗತ್ತೆಲ್ಲವೂ ನಾನೇ, ಎಲ್ಲವೂ ಬ್ರಹ್ಮವಸ್ತುವೇ, ಆ ಬ್ರಹ್ಮವಸ್ತುವೇ ನಾನು, ನನ್ನ ಹೊರತು ಏನೇನೂ ಇಲ್ಲವು. ॥೨೨॥

ಜಗತ್ತಿನ ವಸ್ತುವೆಲ್ಲವೂ ಬ್ರಹ್ಮವೇ, ಆ ಬ್ರಹ್ಮವಸ್ತುವೇ ನಾನು, ಬ್ರಹ್ಮ ವಸ್ತುವಿನ ಹೊರತು ಯಾವುದೂ ಇಲ್ಲ. ಆದುದರಿಂದ ನನ್ನ ಹೊರತು ಏನೂ ಇಲ್ಲ. ಈ ವಿಷಯದಲ್ಲಿ ಸಂಶಯವಿಲ್ಲ. ॥೨೩॥

ಚಿನ್ಮಯಾನಂದಮಾತ್ರೋಽಹಂ ಇದಂ ವಿಶ್ವಮಹಂ ಸದಾ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೪॥

ಬ್ರಹ್ಮೈವ ಸರ್ವಂ ಯತ್ಕಿಂಚಿತ್ತದ್ಬ್ರಹ್ಮಾಹಂ ನ ಸಂಶಯಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೫॥

ವಾಚಾ ಯತ್ಪ್ರೋಚ್ಯತೇ ನಾಮ ಮನಸಾ ಮನುತೇ ತು ಯತ್ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ॥೨೬॥

ಸರ್ವಂ ನಾಸ್ತ್ಯೇವ ನಾಸ್ತ್ಯೇವ ಅಹಂ ಬ್ರಹ್ಮೈವ ಕೇವಲಂ ।
ವೇದೇ ಯತ್ಕರ್ಮ ವೇದೋಕ್ತಂ ಶಾಸ್ತ್ರೇ ಶಾಸ್ತ್ರೋಕ್ತನಿರ್ಣಯಃ ॥೨೮॥

ಗುರೂಪದೇಶಸಿದ್ಧಂ ಚ ಶುದ್ಧಾಶುದ್ಧವಿಭಾಸಕಂ ।
ಕಾಮಾದಿಕಲನಂ ಕರ್ಮ ದೇವಾದಿಕಲನಂ ಪೃಥಕ್ ॥೨೯॥

---

ಜ್ಞಾನಮಯವಾದ ಆನಂದಸ್ವರೂಪವು ನಾನು, ಈ ಜಗತ್ತೆಲ್ಲವೂ ನಾನೇ, ನಾನೇ ಬ್ರಹ್ಮವಸ್ತುವು, ಬ್ರಹ್ಮವಸ್ತುವಿನ ಹೊರತು ಯಾವುದೂ ಇಲ್ಲ. ॥೨೪॥

ಈ ಜಗತ್ತಿನ ಸಣ್ಣದೊಡ್ಡ ವಸ್ತುಗಳೆಲ್ಲವೂ ಬ್ರಹ್ಮವೇ, ಆ ಬ್ರಹ್ಮವಸ್ತುವೇ ನಾನು, ಆದುದರಿಂದ ನನ್ನ ಹೊರತು ಯಾವ ವಸ್ತುವೂ ಇಲ್ಲ. ॥೨೫॥

ವಾಕ್ಕಿನಿಂದ ಹೇಳುವಂತಹ ಹೆಸರೆಲ್ಲವೂ, ಮನಸ್ಸಿನಿಂದ ಯೋಚಿಸುವುದೆಲ್ಲವೂ ಬ್ರಹ್ಮವಸ್ತುವೇ. ಬ್ರಹ್ಮವಸ್ತುವಿನ ಹೊರತಾಗಿ ಏನೂ ಇಲ್ಲ. ॥೨೬॥

ಕಾರಣಗಳಿಂದಾಗುವ ಕಾರ್ಯಗಳು, ಉದಾಸೀನವಾಗಿರುವಿಕೆ, ಶರೀರದಿಂದ ಅನುಭವಿಸುವುದು, ಇಂದ್ರಿಯಗಳಿಂದ ಭೋಗಿಸುವುದು ಇವೆಲ್ಲವೂ ಬ್ರಹ್ಮವಸ್ತುವೇ. ಬ್ರಹ್ಮವಸ್ತುವಿನ ಹೊರತು ಏನೂ ಇಲ್ಲ. ಆ ಬ್ರಹ್ಮವೇ ನಾನು. ॥೨೭॥

ವೇದಗಳಲ್ಲಿ ಹೇಳುವ ಕರ್ಮಗಳೂ, ಶಾಸ್ತ್ರಸಿದ್ಧಾಂತಗಳೂ, ಗುರೂಪದೇಶಸಾರಗಳೂ, ಶುದ್ಧಾಶುದ್ಧಸಂಶೋಧನಗಳೂ, ಕಾಮಕ್ರೋಧಾದಿಗಳ ಅನುಭವವೂ, ದೇವಪೂಜಾಭಾವನೆಗಳೂ ಸಹ ಬ್ರಹ್ಮವಸ್ತುವೇ. ॥೨೮-೨೯॥

ಜೀವನ್ಮುಕ್ತೇತಿ ಕಲನಂ ವಿದೇಹಾನ್ಮುಕ್ತಿಕಲ್ಪನಂ ।
ಬ್ರಹ್ಮ ಇತ್ಯೇವ ಸಂಕಲ್ಪಃ ಬ್ರಹ್ಮವಿದ್ವರಕಲ್ಪನಂ ॥೩೦॥

ಕನೀಯಾನಿತಿ ಸಂಕಲ್ಪಃ ಗರೀಯಾನಿತಿ ಕಲ್ಪನಂ ।
ಬ್ರಹ್ಮಾಹಮಿತಿ ಸಂಕಲ್ಪಃ ಚಿದಹಂ ಚೇತಿ ಕಲ್ಪನಂ ॥೩೧॥

ಮಹಾವಿದ್ಯೇತಿ ಕಲನಂ ಮಹಾಮಾಯೇತಿ ಕಲ್ಪನಂ ।
ಮಹಾಶೂನ್ಯೇತಿ ಸಂಕಲ್ಪಃ ಮಹಾಚಿತ್ತೇತಿ ಕಲ್ಪನಂ ॥೩೨॥

ಮಹಾಲೋಕೋ ಮಹಾಚಿತ್ತಂ ಮಹಾಸತ್ಯೇತಿ ಕಲ್ಪನಂ ।
ಮಹಾರೂಪೇತಿ ಸಂಕಲ್ಪಃ ಮಹಾರೂಪಂ ಚ ಕಲ್ಪನಂ ॥೩೩॥

ಸರ್ವಸಂಕಲ್ಪಕಂ ಚಿತ್ತಂ ಸರ್ವಸಂಕಲ್ಪಕಂ ಮನಃ ।
ಸರ್ವಂ ನಾಸ್ತ್ಯೇವ ನಾಸ್ತ್ಯೇವ ಸರ್ವಂ ಬ್ರಹ್ಮೈವ ಕೇವಲಂ ॥೩೪॥

---

ಜೀವನ್ಮುಕ್ತನೆಂದು ಕಲ್ಪಿಸುವುದು, ವಿದೇಹಕೈವಲ್ಯವೆಂದು ಕಲ್ಪಿಸುವುದು, ಬ್ರಹ್ಮನೇ ಜೀವನೆಂದು ಸಮರ್ಥಿಸುವುದು, ಈತನು ಬ್ರಹ್ಮವಿತ್ತುಗಳಲ್ಲಿ ಉತ್ತಮನೆಂದು ಹೇಳುವುದು. ಇವೆಲ್ಲವೂ ಬ್ರಹ್ಮವಸ್ತುವೇ. ॥೩೦॥

ಅಧಮನೆಂಬ ಕಲ್ಪನೆ, ಉತ್ತಮನೆಂಬ ಭಾವನೆ, ಬ್ರಹ್ಮನೇ ನಾನೆಂಬ ಕಲ್ಪನೆ, ಚೈತನ್ಯವೇ ನಾನೆಂಬ ಭಾವನೆ, ಇವೆಲ್ಲವೂ ಇಲ್ಲವೇ ಇಲ್ಲ. ಬ್ರಹ್ಮವೇ ಇರುವುದು. ಸರ್ವವೂ ಬ್ರಹ್ಮನೇ. ॥೩೧॥

ಮಹಾವಿದ್ಯೆ, ಮಹಾಮಾಯೆ, ಮಹಾಶೂನ್ಯ, ಮಹಾಚಿತ್ತಗಳೆಂದು ಕಲ್ಪಿಸುವುದೆಲ್ಲವೂ ಅಸತ್ಯ. ಬ್ರಹ್ಮವಸ್ತುವೊಂದೇ ಸತ್ಯ. ॥೩೨॥

ಮಹಾಲೋಕ, ಮಹಾಚಿತ್ತ, ಮಹಾಸತ್ಯ, ಮಹಾರೂಪ ಈ ಕಲ್ಪನೆಗಳೆಲ್ಲವೂ ಅಸತ್ಯ. ॥೩೩॥

ಇವೆಲ್ಲವನ್ನೂ ಕಲ್ಪಿಸುವ ಚಿತ್ತವಾಗಲೀ ಮನವಾಗಲೀ ಇಲ್ಲವೇ ಇಲ್ಲ. ಎಲ್ಲವೂ ಬ್ರಹ್ಮವಸ್ತುವೇ. ಆ ಬ್ರಹ್ಮವಸ್ತುವೇ ನಾನು. ॥೩೪॥

ಸರ್ವಂ ದ್ವೈತಂ ಮನೋರೂಪಂ ಸರ್ವಂ ದುಃಖಮನೋಮಯಂ ।
ಚಿದೇವಾಹಂ ನ ಸಂದೇಹಃ ಚಿದೇವೇದಂ ಜಗತ್ರಯಂ ॥೩೫॥

ಯತ್ಕಿಂಚಿದ್ಭಾಷಣಂ ವಾಪಿ ಯತ್ಕಿಂಚಿನ್ಮನಸಾ ಜಪಂ ।
ಯತ್ಕಿಂಚಿನ್ಮಾನಸಂ ಕರ್ಮ ಸರ್ವಂ ಬ್ರಹ್ಮೈವ ಕೇವಲಂ ॥೩೬॥

ಸರ್ವಂ ನಾಸ್ತೀತಿ ಸನ್ಮಂತ್ರಂ ಜೀವಬ್ರಹ್ಮಸ್ವರೂಪಕಂ ।
ಬ್ರಹ್ಮೈವ ಸರ್ವಮಿತ್ಯೇವಂ ಮಂತ್ರಂ ಚೈವೋತ್ತಮೋತ್ತಮಂ॥೩೭॥

ಅನುಕ್ತಮಂತ್ರಂ ಸನ್ಮಂತ್ರಂ ವಾಗಶೂನ್ಯಂ ಪರಂ ಮಹತ್ ।
ಸರ್ವಂ ಬ್ರಹ್ಮೇತಿ ಸಂಕಲ್ಪಂ ತದೇವ ಪರಮಂ ಪದಂ ॥೩೮॥

ಸರ್ವಂ ಬ್ರಹ್ಮೇತಿ ಸಂಕಲ್ಪಂ ಮಹಾದೇವೇತಿ ಕೀರ್ತಿತಂ ।
ಸರ್ವಂ ಬ್ರಹ್ಮೇತಿ ಸಂಕಲ್ಪಂ ಶಿವಪೂಜಾಸಮಂ ಮಹತ್ ॥೩೯॥

---

ಭೇದವೆಲ್ಲವೂ ಮನಸ್ಸಿನ ಬರಿಯ ಕಲ್ಪನಾರೂಪವು, ಮನಸ್ಸಿನ ಭೇದಕಲ್ಪನೆಯಿಂದಲೇ ಎಲ್ಲ ದುಃಖಗಳೂ ಬರುವುವು. ವಸ್ತುತಃ ನಾನು ಚೈತನ್ಯಸ್ವರೂಪನು, ಮೂರು ಲೋಕಗಳೂ ಚೈತನ್ಯಸ್ವರೂಪವೇ. ॥೩೫॥

ವಾಕ್ಕುಗಳೆಲ್ಲವೂ, ಜಪಗಳೆಲ್ಲವೂ ಮಾನಸಿಕವಾದ ಮಿಕ್ಕ ಕ್ರಿಯೆಗಳೆಲ್ಲವೂ ಸಹ ಬ್ರಹ್ಮವಸ್ತುವೇ. ॥೩೬॥

"ಎಲ್ಲವೂ ಇಲ್ಲ" ಎನ್ನುವ ಮಂತ್ರವು ಜೀವಬ್ರಹ್ಮರ ಸ್ವರೂಪವನ್ನು ವಿವರಿಸುವ ನಿಜವಾದ ಮಂತ್ರವು. "ಎಲ್ಲವೂ ಬ್ರಹ್ಮವಸ್ತುವೇ" ಎನ್ನುವ ಮಂತ್ರವು ಮಂತ್ರಗಳಲ್ಲೆಲ್ಲಾ ಉತ್ತಮೋತ್ತಮವಾದ ಮಂತ್ರವು. ॥೩೭॥

ವಾಗಾದಿ ಇಂದ್ರಿಯಗಳಿಗೆ ವಿಷಯವಾದ ಸದ್ವಸ್ತುವೇ ಇಲ್ಲ. ಹಾಗೆ ಎನ್ನುವ ಮಂತ್ರವೇ ಮಹಾಮಂತ್ರವು. "ಎಲ್ಲವೂ ಬ್ರಹ್ಮವಸ್ತುವು" ಎನ್ನುವುದೇ ಪರಮ ಪದವು. ॥೩೮॥

"ಎಲ್ಲವೂ ಬ್ರಹ್ಮವಸ್ತುವೇ" ಎನ್ನುವ ನಿಶ್ಚಯವೇ ಮಹಾದೇವನ ಕೀರ್ತನೆಯು. "ಎಲ್ಲವೂ ಬ್ರಹ್ಮವಸ್ತುವೇ" ಎನ್ನುವ ನಿಶ್ಚಯವು ಶಿವಪೂಜೆಗೆ ಸಮನಾದುದು. ॥೩೯॥

ಸರ್ವಂ ಬ್ರಹ್ಮೇತಿ ಸಂಕಲ್ಪಂ ತದೇವ ಪರಮಂ ಪದಂ ।
ಸರ್ವಂ ಬ್ರಹ್ಮೇತ್ಯನುಭವಸ್ಸರ್ವಾಕಾರೋ ನಸಂಶಯಃ ॥೪೦॥

ಸರ್ವಂ ಬ್ರಹ್ಮೇತಿ ಸಂಕಲ್ಪಂ ಸರ್ವಕಲ್ಯಾಣವರ್ಧನಂ ।
ಸರ್ವಂ ಬ್ರಹ್ಮೇತಿ ಸಂಕಲ್ಪಂ ಸರ್ವದುಃಖವಿನಾಶನಂ ॥೪೧॥

ಸರ್ವಂ ಬ್ರಹ್ಮೇತ್ಯನುಭವೋ ಭಾವಾಭಾವವಿನಾಶನಃ ।
ಸರ್ವಂ ಬ್ರಹ್ಮೇತಿ ಸಂಕಲ್ಪೋ ಮಹಾದೇವಸ್ಸ ನಿಶ್ಚಯಃ ॥೪೨॥

ಸರ್ವಂ ಬ್ರಹ್ಮೇತಿ ಸಂಕಲ್ಪಃ ಕಾಲಸತ್ತಾವಿಮುಕ್ತಕಃ ।
ಸರ್ವಂ ಬ್ರಹ್ಮೇತಿ ಸಂಕಲ್ಪೋ ಮಹಾದೇವಸ್ಸ ನಿಶ್ಚಯಃ ॥೪೩॥

ಸರ್ವಬುದ್ಧಿವಿನಿರ್ಮುಕ್ತಃ ಸರ್ವಂ ಬ್ರಹ್ಮೈವ ಕೇವಲಂ ।
ಸರ್ವೋಽಹಂ ಬ್ರಹ್ಮಮಾತ್ರೈವ ಸರ್ವಂ ಬ್ರಹ್ಮೈವ ಕೇವಲಂ ॥೪೪॥

---

"ಎಲ್ಲವೂ ಬ್ರಹ್ಮವಸ್ತುವೇ" ಎನ್ನುವ ನಿಶ್ಚಯವೇ ಪರಮಪದವು. "ಎಲ್ಲವೂ ಬ್ರಹ್ಮವಸ್ತುವು" ಎನ್ನುವ ನಿಶ್ಚಯವೇ ಎಲ್ಲ ಅನುಭವಗಳ ಮೊತ್ತವು. ಮತ್ತು ಸಾರವು. ॥೪೦॥

"ಎಲ್ಲವೂ ಬ್ರಹ್ಮವಸ್ತುವೇ" ಎನ್ನುವ ನಿಶ್ಚಯವು ಸಕಲ ಕಲ್ಯಾಣಗಳನ್ನೂ ಹೆಚ್ಚಿಸುವುದು. "ಎಲ್ಲವೂ ಬ್ರಹ್ಮವಸ್ತುವು" ಎನ್ನುವ ನಿಶ್ಚಯವು ಎಲ್ಲ ದುಃಖಗಳನ್ನೂ ಹೋಗಲಾಡಿಸುವುದು. ॥೪೧॥

"ಎಲ್ಲವೂ ಬ್ರಹ್ಮವಸ್ತುವೇ" ಎಂಬ ಅನುಭವವೇ ಜನನ ಮರಣಗಳನ್ನು ತಪ್ಪಿಸುವುದು. "ಎಲ್ಲವೂ ಬ್ರಹ್ಮವಸ್ತುವು" ಎಂಬ ನಿಶ್ಚಯವೇ ಸಾಕ್ಷಾತ್ ಮಹಾದೇವನು. ॥೪೨॥

"ಎಲ್ಲವೂ ಬ್ರಹ್ಮವಸ್ತುವು" ಎನ್ನುವ ನಿಶ್ಚಯವು ಕಾಲದ ಸತ್ತೆಯನ್ನು ಅಲ್ಲಗಳೆಯುವುದು. "ಎಲ್ಲವೂ ಬ್ರಹ್ಮವಸ್ತುವು" ಎನ್ನುವ ನಿಶ್ಚಯವು ಮಹಾದೇವನ ಸ್ವರೂಪವು. ॥೪೩॥

ನಾನು ಜಡಬುದ್ಧಿಗಳಿಲ್ಲದವನು, ಕೇವಲ ಬ್ರಹ್ಮಸ್ವರೂಪನು, ಸರ್ವಸ್ವರೂಪನು. ಎಲ್ಲವೂ ಬ್ರಹ್ಮಸ್ವರೂಪವೇ. ಎಂಬುದನ್ನು ಮುಖ್ಯವಾಗಿ ತಿಳಿಯಬೇಕು. ॥೪೪॥

ಇದಮಿತ್ಯೇವ ಸರ್ವಂ ಯತ್ತದ್ಬ್ರಹ್ಮಾಹಂ ನ ಸಂಶಯಃ ।
ಭ್ರಾಂತಿಶ್ಚ ನರಕಂ ದುಃಖಂ ಸ್ವರ್ಗೋ ಭ್ರಾಂತಿರಿತೀರಿತಾಃ ॥೪೫॥

ಬ್ರಹ್ಮಾ ವಿಷ್ಣುರಿತಿ ಭ್ರಾಂತಿರ್ಭ್ರಾಂತಿಶ್ಚ ಶಿವರೂಪತಾ ।
ವಿರಾಟ್ ಸ್ವರಾಟ್ ತಥಾ ಸಮ್ರಾಟ್ ಸೂತ್ರಾತ್ಮಾ ಭ್ರಾಂತಿರೇವ ಚ ॥೪೬॥

ದೇವಾಶ್ಚ ದೇವಕಾರ್ಯಾಣಿ ಸೂರ್ಯಾಚಂದ್ರಮಸೋರ್ಗತಿಃ ।
ಮುನಯೋ ಮನವಸ್ಸಿದ್ಧಾಃ ಭ್ರಾಂತಿರೇವ ನಸಂಶಯಃ ॥೪೭॥

ಸರ್ವೇ ದೇವಾಸುರಾ ಭ್ರಾಂತಿಸ್ತೇಷಾಂ ಯುದ್ಧಾದಿ ಜನ್ಮ ಚ ।
ವಿಷ್ಣೋರ್ಜನ್ಮಾವತಾರಾಣಿ ಚರಿತಂ ಭ್ರಾಂತಿರೇವ ಚ ॥೪೮॥

ಬ್ರಹ್ಮಣಃ ಸೃಷ್ಟಿಕೃತ್ಯಾನಿ ರುದ್ರಸ್ಯ ಚರಿತಾನಿ ಚ ।
ಸರ್ವಂ ಭ್ರಾಂತಿಸಮಾಯುಕ್ತಂ ಭ್ರಾಂತಿರ್ಲೋಕಾಶ್ಚತುರ್ದಶ ॥೪೯॥

---

"ಇದು" ಎನ್ನುವ ವಸ್ತುವೆಲ್ಲವೂ ಬ್ರಹ್ಮವೇ, "ಆ ಬ್ರಹ್ಮವಸ್ತುವೇ ನಾನು" ಎನ್ನುವುದರಲ್ಲಿ ಸಂಶಯವಿಲ್ಲ. ನರಕವು ದುಃಖವು, ಸ್ವರ್ಗವು ಸುಖವು ಎನ್ನುವುದೆಲ್ಲವೂ ಬರಿಯ ತಪ್ಪುತಿಳಿವಳಿಕೆಗಳು. ಬರಿಯ ಭ್ರಾಂತಿ. ॥೪೫॥

ಬ್ರಹ್ಮದೇವ, ವಿಷ್ಣುಶಿವರೆನ್ನುವ ಕಲ್ಪನೆಯು ಸಹ ಭ್ರಾಂತಿಯು, ಅದರಂತೆ ವಿರಾಟ್ಪುರುಷ, ದೇವೇಂದ್ರ, ಚಕ್ರವರ್ತಿ, ಸೂತ್ರಾತ್ಮ ಎಂಬ ಕಲ್ಪನೆಗಳೂ ಭ್ರಾಂತಿಯೇ. ॥೪೬॥

ದೇವತೆಗಳು, ಅವರ ಕಾರ್ಯಗಳು, ಸೂರ್ಯಚಂದ್ರರ ಆಕಾಶಭ್ರಮಣ, ಮುನಿಗಳು, ಮನುಗಳು, ಸಿದ್ಧರು ಇವರೆಲ್ಲರೂ ಬರಿಯ ಭ್ರಾಂತಿಯೇ. ॥೪೭॥

ದೇವಾಸುರರು, ಅವರ ಯುದ್ಧಗಳು, ವಿಷ್ಣುವಿನ ಅವತಾರಗಳು, ಅವುಗಳ ಚರಿತಗಳು ಇವೆಲ್ಲವೂ ಬರಿಯ ಭ್ರಾಂತಿಯ ಕಲ್ಪನೆಗಳು. ॥೪೮॥

ಬ್ರಹ್ಮದೇವನ ಸೃಷ್ಟಿಕಾರ್ಯಗಳು, ರುದ್ರನ ಸಂಹಾರಕಾರ್ಯ, ಹದಿನಾಲ್ಕು ಲೋಕಗಳು ಎನ್ನುವುದೆಲ್ಲವೂ ಬರಿಯ ಭ್ರಾಂತಿ. ॥೪೯॥

ವರ್ಣಾತ್ರಮವಿಭಾಗಂ ಚ ಭ್ರಾಂತಿರೇವ ನಸಂಶಯಃ ।
ಬ್ರಹ್ಮವಿಷ್ಣ್ವೀಶರುದ್ರಾಣಾಮುಪಾಸಾ ಭ್ರಾಂತಿರೇವ ಚ ॥೫೦॥

ತಂತ್ರಾಣಿ ಯಂತ್ರಮಂತ್ರಾಶ್ಚ ಭ್ರಾಂತಿರೇವ ನಸಂಶಯಃ ।
ವಾಚಾಮಗೋಚರಂ ಬ್ರಹ್ಮ ಬ್ರಹ್ಮ ಸರ್ವಮಯಂ ಹಿ ವೈ ॥೫೧॥

ಸರ್ವಂ ಬ್ರಹ್ಮೈವ ನಾಸ್ತ್ಯೇವ ಅಹಮೇವ ಚಿದೇವ ಹಿ ।
ಏವಂ ವದ ತ್ವಂ ತಿಷ್ಠ ತ್ವಂ ಸದ್ಯೋಮುಕ್ತೋ ಭವಿಷ್ಯಸಿ ॥೫೨॥

ಏತಾವದುಕ್ತಂ ಯತ್ಕಿಂಚಿತ್ತನ್ನಾಸ್ತ್ಯೇವ ನಸಂಶಯಃ ।
ಏವಂ ಪದಾಂತರಂ ಕ್ಷಿಪ್ರಂ ಬ್ರಹ್ಮೈವ ದೃಢನಿಶ್ಚಯಃ ॥೫೩॥

ದೃಢನಿಶ್ಚಯಮೇವಾತ್ರ ಪ್ರಥಮಂ ಕಾರಣಂ ಭವೇತ್ ।
ನಿಶ್ಚಯಸ್ಯ ಲಯಂ ಪಶ್ಚಾತ್ ಸ್ವಯಮೇವ ಭವಿಷ್ಯಸಿ ॥೫೪॥

---

ವರ್ಣ ಮತ್ತು ಆಶ್ರಮ ಇವುಗಳ ವಿಭಾಗ, ಬ್ರಹ್ಮ, ವಿಷ್ಣು, ಶಿವ,ರುದ್ರ ಇವರ ಉಪಾಸನೆ ಇವುಗಳೆಲ್ಲವೂ ಬರಿಯ ಭ್ರಾಂತಿ. ॥೫೦॥

ತಂತ್ರಗಳು, ಯಂತ್ರಮಂತ್ರಗಳು ಇವೆಲ್ಲವೂ ಭ್ರಾಂತಿಯೇ. ವಾಕ್ಕಿಗೆ ಅಗೋಚರವಾದ ಬ್ರಹ್ಮವಸ್ತುವೇ ಇವೆಲ್ಲವೂ. ॥೫೧॥

ಎಲ್ಲವೂ ಬ್ರಹ್ಮವಸ್ತುವೇ ಎನ್ನುವುದೂ ಇಲ್ಲ. ನಾನೇ ಚೈತನ್ಯಬ್ರಹ್ಮಸ್ವರೂಪನು ಎಂದು ತಿಳಿದುಕೊಂಡು ಎಲ್ಲವನ್ನೂ ಅನುಸಂಧಾನಮಾಡು. ಸದ್ಯಃ ಮುಕ್ತನಾಗುವೆ. ॥೫೨॥

ಅಲ್ಲದೇ ನಾನು ಇಷ್ಟುಹೊತ್ತು ಹೇಳಿದ ಯಾವ ವಿಷಯವೂ ಇಲ್ಲ. ಬ್ರಹ್ಮವಸ್ತುವೊಂದೇ ಇರುವುದು. ಅದೇ ನೀನು ಎಂದು ದೃಢವಾಗಿ ತಿಳಿಯುವವನಾಗುವೆ. ॥೫೩॥

ದೃಢವಾದ ಬ್ರಹ್ಮನಿಶ್ಚಯವೇ ಮುಕ್ತಿಗೆ ಮುಖ್ಯಕಾರಣವು. ಕೊನೆಗೆ ಆ ನಿಶ್ಚಯವೂ ಲಯವಾಗಿ ಸ್ವಸ್ವರೂಪವೊಂದೇ ಆವಿರ್ಭವಿಸುವುದು. ॥೫೪॥

॥ ಸೂತ ಉವಾಚ ॥

ಆರ್ತಂ ಯಚ್ಛಿವಪಾದತೋನ್ಯದಿತರಂ ತಜ್ಜಾದಿಶಬ್ದಾತ್ಮಕಂ
ಚೇತೋವೃತ್ತಿಪರಂಪರಾಪ್ರಮುದಿತಂ ಷಡ್ಭಾವಸಿದ್ಧಂ ಜಗತ್ ।
ಭೂತಾಕ್ಷಾದಿಮನೋವಚೋಭಿರನಘೇ ಸಾಂದ್ರೇ ಮಹೇಶೇ ಘನೇ
ಸಿಂಧೌ ಸೈಂಧವಖಂಡವಜ್ಜಗದಿದಂ ಲೀಯೇತ ವೃತ್ತ್ಯುಜ್ಝಿತಂ॥೫೫॥

ಇತಿ ಶ್ರೀಶಿವರಹಸ್ಯೇ ಷಷ್ಠಾಂಶೇ ಪಂಚವಿಂಶೋಽಧ್ಯಾಯಃ

---

ಶಿವನ ಹೊರತಾಗಿ ಕಾಣುವ ಜಗತ್ತೆಲ್ಲವೂ ಬರಿಯ ಶಬ್ದದ ಕಲ್ಪನೆಯಾಗಿದ್ದು ದುಃಖದಿಂದ ತುಂಬಿರುವ ಇಂತಹ ಜಗತ್ತು ಸಮುದ್ರದಲ್ಲಿ ಉಪ್ಪಿನ ಚೂರು ಕರಗಿ ಹೋಗುವಂತೆ ಆ ಪರಮೇಶ್ವರಲ್ಲಿ ಸಂಪೂರ್ಣವಾಗಿ ಕರಗಿಹೋಗುವುದು. ಪಂಚ ಭೂತಗಳು, ಇಂದ್ರಿಯಗಳು, ಮನಸ್ಸು, ಮಾತು ಇವೆಲ್ಲವೂ ಪರಾಪರವಸ್ತುವೆನಿಸಿದ ಪರಶಿವನಲ್ಲಿ ಲಯವಾಗಿ ಶಿವೈಕ್ಯವನ್ನು ಹೊಂದುವುವು. ಕಣ್ಣಿಗೆ ಕಾಣುವ ಈ ಜಗತ್ತೆಲ್ಲವೂ ಶಿವನಲ್ಲಿ ಅಂತರ್ಭಾವ ಹೊಂದುವುದು. ಎಂದು ಹೇಳಿದ ಋಭು ಸೂಕ್ತಿಯನ್ನು ಸೂತರು ಶೌನಕಾದಿಗಳಿಗೆ ವಿವರವಾಗಿ ಶ್ರುತಪಡಿಸಿದರು. ॥೫೫॥

ಇಲ್ಲಿಗೆ ಶ್ರೀಶಿವರಹಸ್ಯದ ಆರನೆಯ ಅಂಶದಲ್ಲಿ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.